*Under the patronage of the University of Bombay.*

ಶ್ರೀಚಂದ್ರಸಾಗರ ಜೈನ-ಗ್ರಂಥಮಾಲೆ
( ನಂ. ೩. )

# SHRI KUMUDENDU RAMAYANAM

OF

SHRI KUMUDENDU-MUNISHVARA.

**Part 1. Cantos 1–8.**

***Edited by K. G. Kundangar.***

———o———

ಶ್ರೀಕುಮುದೇಂದುಮುನೀಶ್ವರವಿರಚಿತಮಪ್ಪ

ಶ್ರೀಕುಮುದೇಂದು

# ರಾಮಾಯಣಂ.

ಪೂರ್ವಭಾಗ-ಸಂಧಿಗಳು ೧-೮.

*All Rights Reserved.*

———o———

PRINTED AT THE SHRI MAHAVIR PRESS
BELGAUM.

Price 3 Rs. ] 1936. [ ಬೆಲೆ ೩ ರೂ.

ಮುದ್ರಕರುः—
ಸಾತಪ್ಪಾ ಫಡೆಪ್ಪಾ ಚೌಗುಲೆ,
ಶ್ರೀಮಹಾವೀರ ಮುದ್ರಣಾಲಯ
ಬೆಳಗಾಂವಿ.

CHECKED 1951



ಪ್ರಕಾಶಕರುः—
ಸಾತಪ್ಪಾ ಫಡೆಪ್ಪಾ ಚೌಗುಲೆ ಬೆಳಗಾಂವಿ
ಭರಮಪ್ಪಾ ಪದ್ಮಪ್ಪಾ ಪಾಟೀಲ ಹೊಸೂರ—ಬೆಳಗಾಂವಿ
ಇವರು ಹೊಸೂರಲ್ಲಿ ಗ್ರಂಥಮಾಲೆಯ
ಆಫೀಸಿನಲ್ಲಿ ಪ್ರಕಟಿಸಿದರು.

# ಪ್ರಕಾಶಕರ ಮಾತು.




ನಧರ್ಮದ ಗ್ರಂಥಗಳನ್ನು ಮುದ್ರಿಸಿ ಪ್ರಕಟಮಾಡಿ, ಅವುಗಳ ಮಾರಾಟದಿಂದ ಬಂದ ಹಣದಿಂದಾದರೂ ಮುಂದೆ ಗ್ರಂಥಪ್ರಕಾಶನದ ಕೆಲಸವನ್ನು ಅವ್ಯಾಹತ ಸಾಗಿಸುವ ಉದ್ದೇಶದಿಂದ ನಮ್ಮ ಈ "ಶ್ರೀಚಂದ್ರಸಾಗರ ಜೈನ ಗ್ರಂಥಮಾಲೆ"ಯು ತಾ|| ೧೫ ಫೆಬ್ರುವರಿ ಸನ್ ೧೯೧೪ ಇಸ್ವಿ ದಿವಸ ಸ್ಥಾಪನವಾಗಿರುವುದು. ಇದಕ್ಕೆ ಕೆಳಗೆ ಬರೆದ ೫ ಮಂದಿ ಟ್ರಸ್ಟೀ ಎಂದು ನಿಯಮಿಸಲ್ಪಟ್ಟಿರುವರು.

*೧ ಶ್ರೀ. ಕುಬೇರಪ್ಪಾ ಭರಮಪ್ಪಾ ಅಂಕಲೆ, ಚೇಅರಮನ್.
೨ ,, ರಾ. ಬ. ಅಣ್ಣಪ್ಪಾ ಫಡೆಪ್ಪಾ ಚೌಗುಲೆ ವಕೀಲ.
*೩ ,, ಬಾಳಪ್ಪಾ ಭುಜಪ್ಪಾ ಮಿರ್ಜಿ.
೪ ,, ಭರಮಪ್ಪಾ ಪದ್ಮಪ್ಪಾ ಪಾಟೀಲ, ಸೆಕ್ರೇಟರಿ.
೫ ,, ಕಾಳಪ್ಪಾ ಅಣ್ಣಾಜಿ ಲೇಂಗಡೆ.

ಆದರೆ ಇವರಲ್ಲಿ ಶ್ರೀ. ಕುಬೇರಪ್ಪಾ ಭರಮಪ್ಪಾ ಅಂಕಲೆ ಮತ್ತು ಶ್ರೀ. ಬಾಳಪ್ಪಾ ಭುಜಪ್ಪಾ ಮಿರ್ಜಿ ಇವರು ಅಕಾಲದಲ್ಲಿ ಕಾಲವಶರಾದ್ದರಿಂದ ಅವರ ಸ್ಥಳದಲ್ಲಿ ದಿ. ಬ. ಅಣ್ಣಾ ಬಾಬಾಜಿ ಲಠ್ಠೆ ಮತ್ತು ಶ್ರೀ. ತವನಪ್ಪಾ ಬಾಬಾಸಾಹೇಬ ಅವಲಕ್ಕಿಯವರನ್ನು ಸದಸ್ಯರೆಂದು ನಿಯಮಿಸಲಾಗಿದೆ. ಶ್ರೀ. ಅಂಕಲೆಯವರ ತರುವಾಯ ಚೇಅರಮನ್ನರ ಅಧಿಕಾರವನ್ನು ರಾ. ಬ. ಚೌಗುಲೆಯವರು ವಹಿಸಿರುವರು.

ಶ್ರೀ. ತೋಣಿಕಡು ವೆಂಕಟಕೃಷ್ಣೇಗೌಡರ ಮೂಲ ದ್ರವ್ಯನಿಧಿಯಿಂದ ಮಾಲೆಯ ಮೊದಲನೆಯ ಗ್ರಂಥವಾದ 'ಭಕ್ತಾಮರವೃತ್ತಿಸಾರಸಮುಚ್ಚಯ' ಎಂಬುದೂ ಎರಡನೆಯ ಗ್ರಂಥವಾದ 'श्रीप्रथमानुयोगशास्त्र अथवा जैनलोकांचा इतिहास' ಎಂಬ ಮರಾಠಿ ಗ್ರಂಥವೂ ಪ್ರಕಟವಾಗಿರುವುವು. ಈಗ ಪ್ರೋ. ಕುಂದಣಗಾರರು ಬಹು ಶ್ರಮವಹಿಸಿ ಸಂಶೋಧನ ಮಾಡಿದ ಶ್ರೀಕುಮುದೇಂದುಮುನಿವಿರಚಿತ

'ಶ್ರೀಕುಮುದೇಂದುರಾಮಾಯಣ'

ಎಂಬ ಗ್ರಂಥವು ಮಾಲೆಯ ಮೂರನೆಯ ಗ್ರಂಥವೆಂದು ಪ್ರಕಟಿಸಲ್ಪಟ್ಟಿದೆ.

ಮೊದಲಿಗೆ ಈ ಗ್ರಂಥಪ್ರಕಟನೆಯ ಕಾರ್ಯವನ್ನು ಶ್ರೀಮಹಾವೀರ ಪ್ರೆಸ್ಸಿನ ಪ್ರೊಪ್ರಾಯಟರರಾದ ಶ್ರೀ. ಸಾತಪ್ಪಾ ಫಡೆಪ್ಪಾ ಚೌಗುಲೆಯವರು ಕೈಕೊಂಡು ಮುಂಬಯಿ ಯುನಿವ್ಹರ್ಸಿಟಿಯಿಂದ ೨೦೦ ರೂ. ಗ್ರ್ಯಾಂಟನ್ನು ಪಡೆದುಕೊಂಡಿದ್ದರು. ಅದನ್ನೇ ಅವರು ಈ ಮಾಲೆಗೆ ಸಲ್ಲಿಸಿದ್ದರಿಂದ ನಾವು ಅವರನ್ನು ಸಹ ಪ್ರಕಾಶಕರನ್ನು ಮಾಡಿಕೊಂಡಿದ್ದೇವೆ.

ನಮ್ಮ ಮಾಲೆಯ ಮೊದಲಿನ ಗ್ರಂಥಗಳಿಗೆ ಜನರು ಆಶ್ರಯವನ್ನಿತ್ತಂತೆ ಈ ಗ್ರಂಥಕ್ಕಾದರೂ ಅವರು ಆಶ್ರಯವನ್ನೀಯುವರೆಂದು ನಮ್ಮ ನಂಬುಗೆ. ಈ ಮಾಲೆಗೆ ದ್ರವ್ಯದ ಕೊರತೆ ಇದ್ದದ್ದರಿಂದ ಯಾರಾದರು ದಾತೃಗಳು ಇದನ್ನು ತಮ್ಮ ಅಮೂಲ್ಯದಾನದಿಂದ ಭೂಷಿಸುವ ಕೃಪೆ ಮಾಡಿದರೆ ಅವರಿಗೆ ನಾವು ಬಹಳ ಕೃತಜ್ಞರಾಗುವೆವು.

**ಹೊಸೂರ-ಬೆಳಗಾಂವ,**
ಶ್ರಾವಣ ಶು. ೧೫ ಶಕೆ ೧೮೫೮.
ತಾ. ೩-೮-೧೯೩೬.
ಶ್ರೀಮಹಾವೀರ ಶಕೆ ೨೪೬೨.

ಸಜ್ಜನವಿಧೇಯ,
**ಭರಮಪ್ಪಾ ಪದ್ಮಪ್ಪಾ ಪಾಟೀಲ,**
ಸೆಕ್ರೇಟರಿ ಶ್ರೀಚಂದ್ರಸಾಗರ ಜೈನ ಗ್ರಂಥಮಾಲೆ.



# ಮುನ್ನುಡಿ.



ಈ ಗ್ರಂಥವು ಮೂರು ಹಸ್ತಲಿಖಿತ ಪುಸ್ತಕಗಳ ಸಹಾಯದಿಂದ ಶೋಧಿತವಾಗಿದೆ.

೧. ಕೊಲ್ಹಾಪೂರ ಶ್ರೀಜಿನಸೇನ ಭಟ್ಟಾರಕಪಟ್ಟಾಚಾರ್ಯರವರ ಮಠದಲ್ಲಿರುವ ಶ್ರುತ ಭಾಂಡಾರದೊಳಗಿನ ಓಲೆಗರಿಯ ಪುಸ್ತಕ ( ಕ );

೨. ತೇರದಾಳದ ಶ್ರೀಜಿನಸೇನ ಭಟ್ಟಾರಕಪಟ್ಟಾಚಾರ್ಯರವರ ಮಠದಲ್ಲಿದ್ದ ಮತ್ತು ಈಗ ಕೊಲ್ಹಾಪೂರದ ಶ್ರೀಜಿನಸೇನ ಭಟ್ಟಾರಕರ ಮಠಕ್ಕೆ ತಂದಿರುವ ಕಾಗದದ ಪ್ರತಿ ( ಖ );

೩. ಮೈಸೂರ ಓರಿಯೆಂಟಲ್ ಲಾಯಬ್ರರಿಯಲ್ಲಿರುವ ೨೭ನೆಯ ನಂಬರಿನ ( A ೬೧ ) ಓಲೆಗರಿಯ ಪುಸ್ತಕದ ಪ್ರತಿ. ಇದು ಅಪೂರ್ಣವಾಗಿದೆ ( ಗ ).

ತೇರದಾಳದ ಪ್ರತಿಯು ಕೊಲ್ಹಾಪೂರದ ಪ್ರತಿಯಿಂದ ಪ್ರತಿಮಾಡಿಸಿದಂತೆ ಕಂಡುಬಂದಿತು. ಇವೆರಡೂ ಪ್ರತಿಗಳಲ್ಲಿ ವ್ಯತ್ಯಾಸವಿಲ್ಲ. ಎರಡರಲ್ಲಿ ಸರಿಯಾಗಿಯೇ ಗ್ರಂಥಪಾತಗಳಿವೆ. ಪಾಠಗಳು ಒಂದೇ ಆಗಿವೆ. ಮೈಸೂರ ಪ್ರತಿಯು ಮಾತ್ರ ತುಸು ಭಿನ್ನವಾಗಿದೆ. ಮತ್ತೆ ಎಲ್ಲಿಯಾದರೂ ಹಸ್ತ ಲಿಖಿತ ಪ್ರತಿಗಳು ದೊರೆಯಬಹುದೋ ಎಂದು ಒಂದು ವರ್ಷದ ವರೆಗೆ ಶ್ರಮಬಟ್ಟು ಶೋಧಿಸಿ ದರೂ ಒಂದು ಪ್ರತಿ ಸಹ ದೊರೆಯಲಿಲ್ಲ. ಆದುದರಿಂದ ಕೊಲ್ಹಾಪೂರದ ಮತ್ತು ಮೈಸೂರ ಪ್ರತಿ ಗಳನ್ನು ಮುಂದಿಟ್ಟುಕೊಂಡು ಶೋಧನಕಾರ್ಯವನ್ನು ಸಾಗಿಸಬೇಕಾಯಿತು.

ಗ್ರಂಥದೊಳಗೆ ಪರಿವರ್ಧಿನಿ-ಷಟ್ಪದಿ-ಸಂಧಿಗಳು ಬಂದಲ್ಲೆಲ್ಲ ಬಹಳ ಅಶುದ್ಧವಾಗಿದೆ. ಪ್ರತಿ ಯೊಂದು ಪದ್ಯದ ಆರನೆಯ ಚರಣವು ೨,೩,೪,೫,೬ ಅಥವಾ ೮ ಮಾತ್ರೆಗಳಿಂದ ದೀರ್ಘವಾಗಿ ಹೋಗಿದೆ. ಮಹಾಮಹೋಪಾಧ್ಯಾಯ ಪ್ರಾಕ್ತನವಿಮರ್ಶವಿಚಕ್ಷಣ ರಾವಬಹಾದ್ದೂರ ಆರ್. ನರಸಿಂಹಾಚಾರ್ಯರವರ ಕರ್ಣಾಟಕಕವಿಚರಿತೆಯ ಮೊದಲನೆಯ ಭಾಗದಲ್ಲಿ ಈ ರಾಮಾಯಣದೊಳ ಗಿನ ಪದ್ಯಗಳನ್ನು ಉದಹರಿಸಿದಲ್ಲಿಯೂ ಈ ದೋಷಗಳು ಕಂಡುಬರುತ್ತವೆ. ಇವುಗಳನ್ನು ನಿಯ ಮಕ್ಕನುಸಾರವಾಗಿ ತಿದ್ದಬೇಕೋ ಅಥವಾ ಹಾಗೆಯೇ ಇರಿಸಬೇಕೋ ಎಂಬುದು ವಾದವಿಷಯ ವಾಗಿ ನಿರ್ಣಯವಾಗದೆ ಹೋಯಿತು ನನ್ನ ಗುರುಗಳಾದ ಶ್ರೀ. ಪಂಡಿತ ಮಹಾದೇವಶಾಸ್ತ್ರಿ ಪೂಜಾರರವರು ಮಾತ್ರಾಸಂಖ್ಯಾನುಗುಣವಾಗಿ ಹೆಚ್ಚು ಸಂಖ್ಯೆಯಿದ್ದ ಚರಣಗಳು ಮಾತ್ರಾಗಣನೆಗೆ ಆಧಾರವೆಂದು ನಿರ್ಣಯವಿತ್ತ ಮೇರೆಗೆ ೨೮, ೩೦ ಮಾತ್ರೆಗಳನ್ನು ಆರನೆಯ ಚರಣಗಳಲ್ಲಿ ಇರಿಸಿ ಕೊಂಡು ಶೋಧಿಸಲಾಗಿದೆ. ಅವರ ಅಭಿಪ್ರಾಯದ ಮೇರೆಗೆ ಶ್ರೀ ಚಂದ್ರಕಾಂತ ಸಿಂಗರಾಜ ಪಾಟೀಲರವರ ಸಲಹೆಗಳನ್ನು ಸ್ವೀಕರಿಸಲಾಗಿದೆ. ಅವರು ಕಾಲಕಾಲಕ್ಕೆ ನನಗೆ ಕೊಟ್ಟ ಸಹಾನು ಭೂತಿಯ ಸಲಹೆಯ ಬಗ್ಗೆ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು. ಮಾತ್ರೆಗಳು ಆರನೆಯ ಚರಣದಲ್ಲಿ ಹೆಚ್ಚಾಗಿದ್ದರೆ ಅದಕ್ಕೆ ಪರಿವರ್ಧಿನಿಯೆನ್ನಕೂಡದು ಎಂದು ಶ್ರೀ. ಮಹಾದೇವಶಾಸ್ತ್ರಿಗಳ ವರೂ ಶ್ರೀ. ಚಂದ್ರಕಾಂತ ಪಾಟೀಲರವರೂ ಒಪ್ಪಿಕೊಂಡಿರುವರು. ಆದರೆ ಹೀಗೆ ಹೆಚ್ಚು ಮಾತ್ರೆಗ

ಳನ್ನು ಇರಿಸಿದುದು ಎಲ್ಲರಿಗೂ ಒಪ್ಪಿತವಾಗಬಹುದೆಂದು ನಾನು ಹೇಳಲಾರೆನು. ಕನ್ನಡ ಪಂಡಿತರು ಈ ಸಂದರ್ಭದಲ್ಲಿ ತಮ್ಮ ನಿರ್ಣಯವನ್ನು ಕೊಡುವುದು ಅವಶ್ಯವಾಗಿದೆ. ಮ. ಮ., ರಾ. ಬ. ಆರ್. ನರಸಿಂಹಾಚಾರ್ಯರವರು ತಮ್ಮ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು. ಈ ವಿಷಯವನ್ನು ಉತ್ತರಭಾಗದ ಪೀಠಿಕೆಯಲ್ಲಿ ವಿಸ್ತಾರವಾಗಿ ಚರ್ಚಿಸುವೆನು.

ಛಂದೋನಿಯಮವನ್ನು ಮೀರಿ ಹೆಚ್ಚು ಮಾತ್ರೆಗಳನ್ನು ಇಟ್ಟುಕೊಳ್ಳುವಾಗ ಪಾಠಾಂತರಗಳನ್ನೆಲ್ಲ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದೇನೆ. ಮಿಕ್ಕ ಪಾಠಾಂತರಗಳೂ ಅಡಿಟಿಪ್ಪಣಿಯಲ್ಲಿ ಕೊಡಲಾಗಿವೆ. ಗ್ರಂಥಪಾತವಾದಲ್ಲಿ ನನ್ನ ಸೂಚನೆಗಳನ್ನೂ ಇನ್ನಿತರರ ಸೂಚನೆಗಳನ್ನೂ [ ] ಈ ಕಂಸದಲ್ಲಿ ಹಾಕಿದ್ದೇನೆ

ಗ್ರಂಥಶೋಧನೆಯ ಕಾರ್ಯದಲ್ಲಿ ಬೆಳಗಾವಿಯ ರಾವಬಹಾದ್ದೂರ್ ಎ. ಪಿ. ಚೌಗುಲೆ ಬಿ. ಎ. ಎಲ್ ಎಲ್. ಬಿ. ವಕೀಲರವರೂ, ನನ್ನ ಮಿತ್ರರಾದ ಪ್ರೊ. ಎ. ಎನ್. ಉಪಾಧ್ಯೆಯವರೂ ಕಾಲಕಾಲಕ್ಕೆ ಕೊಟ್ಟ ಉತ್ತೇಜನ ಮತ್ತು ಸೂಚನೆಗಳ ಬಗ್ಗೆ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು. ಮೈಸೂರ ಆಸ್ಥಾನ ವಿದ್ವಾನ್ ನ್ಯಾಯತೀರ್ಥ ಎ. ಶಾಂತಿರಾಜಶಾಸ್ತ್ರಿಗಳವರು ಪ್ರೀತಿಯಿಂದ ಅಚ್ಚಿನ ಪ್ರತಿಯನ್ನು ಶೋಧಿಸಿ ಕೊಟ್ಟ ಬಗ್ಗೆ ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಅವರಿಗೂ ನನ್ನ ವಂದನೆಗಳು.

ಗ್ರಂಥಪ್ರಕಟನೆಯ ಸಂದರ್ಭದಲ್ಲಿ **ಮುಂಬಯಿ ವಿಶ್ವವಿದ್ಯಾಲಯದಿಂದ ದೊರೆತ ೨೦೦ ರೂಪಾಯಿಗಳ ಧನಸಹಾಯದ ಬಗ್ಗೆ** ನಾನು ಆ ಸಂಸ್ಥೆಗೆ ತುಂಬಾ ಋಣಿಯಾಗಿದ್ದೇನೆ. ಅದರಂತೆ ಶ್ರೀಚಂದ್ರಸಾಗರ ಜೈನಗ್ರಂಥಮಾಲೆಯ ಸಮಿತಿಯವರು ಗ್ರಂಥಪ್ರಕಟನೆಯ ಭಾರವನ್ನು ವಹಿಸಿಕೊಂಡ ಬಗ್ಗೆ ಆ ಸಮಿತಿಯವರಿಗೂ ನಾನು ಋಣಿಯಾಗಿದ್ದೇನೆ. ಅವರೆಲ್ಲರಿಗೆ ನನ್ನ ವಂದನೆಗಳು.

**ಕೊಲ್ಹಾಪೂರ,**
ತಾ|| ೬-೮-೧೯೩೬.

**ಕೆ. ಜಿ. ಕುಂದಣಗಾರ.**

# ಶ್ರೀ ಕುಮುದೇಂದುಮುನೀಶ್ವರ.



ಈ ಕವಿಯ ಚರಿತ್ರವಿಷಯಕವಾದ ಎಲ್ಲ ಸಂಗತಿಗಳು ದೊರೆಯುವದಿಲ್ಲ. ಮಾತ್ರ ತನ್ನ ರಾಮಾಯಣದಲ್ಲಿ ಕವಿಯು ತನ್ನ ತಂದೆ, ದೊಡ್ಡಪ್ಪಂದಿರುಗಳ ವಿಷಯವಾಗಿ ಕೆಲವು ಸಂಗತಿಗಳನ್ನು ಹೇಳಿಕೊಂಡಿದ್ದಾನೆ. ಈತನ ತಂದೆ ಪದ್ಮನಂದಿವ್ರತಿ. ಆತನು ಬಾಣಸಕುಲತಿಲಕನು, ಸಾಹಿತ್ಯವಿಶಾರದನು, ಚತುರ್ವಿಧ ಪಾಂಡಿತ್ಯಕಳಾಕುಶಲನು ಮತ್ತು ವಾದಿಗಳಲ್ಲಿ ಶ್ರೇಷ್ಠನು. ಆತನು ಪ್ರಸಿದ್ಧ ಕವಿಯೂ ಆಗಿದ್ದನೆಂದು ಆತನ 'ಕವಿಮುಖಮಣಿಮುಕುರಂ' ಎಂಬ ಬಿರುದಿನಿಂದ ತಿಳಿಯುತ್ತದೆ. ಇದನ್ನೇ ಕವಿಯು ಅಭಿಮಾನದಿಂದ ಹೀಗೆ ಹೇಳುತ್ತಾನೆ:—

ಪಿತೃ ಸಾಹಿತ್ಯಕುಮುದವನಚಂದ್ರಂ |
ಚತುರ ಚತುರ್ವಿಧಪಾಂಡಿತ್ಯಕಳಾ- |
ಶತದಳವಿಕಸನದಿನಮಣಿಯೆನಿಪಾ ಬಾಣಸಕುಲತಿಲಕಂ ||
ಕ್ಷಿತಿನುತ........ಪದ್ಮನಂದಿಸು- |
ವ್ರತಿಪತಿ ವಾದಿಧರಾಧರಕುಳಿಶಂ |
ಸತಿ-ಕಾಮಾಂಬಿಕೆಗಧಿಪತಿಯೆಸೆವಂ ಕವಿಮುಖಮಣಿಮುಕುರಂ ||

ಪೀ. ಸಂ. ೪೫ ||

ಕವಿಯ ದೊಡ್ಡಪ್ಪನೂ ಕಡಿಮೆಯವನಲ್ಲ. ಆತನು ಆಗಮ-ನಾಟಕ-ತರ್ಕ-ವ್ಯಾಕರಣ-ಛಂದೋಲಂಕೃತಿ-ಶ್ರುತಿ-ಸ್ಮೃತಿ-ವೇದಾಂತ—ಮಂತ್ರೌಷಧಿ—ರತ್ನಪರೀಕ್ಷೆ ಮುಂತಾದ ಶಾಸ್ತ್ರಗಳಲ್ಲಿ ಪಂಡಿತನಾದ ಅರ್ಹಣಂದಿವ್ರತಿ. ಇದನ್ನು ಕವಿಯು ಹೀಗೆ ಹೇಳುತ್ತಾನೆ:--

ಪರಮಾಗಮ ನಾಟಕ ತರ್ಕವ್ಯಾ- |
ಕರಣನಿಘಂಟುಚ್ಛಂದೋಲಂಕೃತಿ- |
ಚರಿತಪುರಾಣಷಡಂಗಶ್ರುತಿನೀತಿಸ್ಮೃತಿವೇದಾಂತ ||
ಭರತಸುರತಮಂತ್ರೌಷಧಿಸಂಹಿತೆ |
ನರತುರಗಗಜಮಣಿಗಣಪರೀಕ್ಷಾ- |
ಪರಿಣತನೆನಿಸಿದರ್ಹಣಂದಿವ್ರತಿಪತಿಕವಿಮುಖಮುಕುರಾಗ್ರಜನು ||

ಪೀ. ಸಂ. ೪೬ ||

ಆದುದರಿಂದ ಕವಿಯು ಬಹು ದೊಡ್ಡ ಪಂಡಿತರ ವಂಶದಲ್ಲಿ ಹುಟ್ಟಿದವನೆಂದು ಬೇರೆ ಹೇಳುವ ಕಾರಣವಿಲ್ಲ. ಈತನ ಗುರುವು ಮಾಘನಂದ್ಯಾಚಾರ್ಯ ಸಿದ್ಧಾಂತ ಚಕ್ರವರ್ತಿ. ಇಂತಹ ಪಂಡಿತವಂಶದಲ್ಲಿ ಹುಟ್ಟಿ, ಆ ಸಿದ್ಧಾಂತಚಕ್ರವರ್ತಿಗಳ ಬಳಿಯಲ್ಲಿ ಅಧ್ಯಯನ ಮಾಡಿದ ಕುಮುದೇಂದುಮುನೀಶ್ವರರು ಅಸಾಮಾನ್ಯ ಪಂಡಿತರಾಗಿರುವುದು ಸ್ವಾಭಾವಿಕವೇ. ಈ ಉಕ್ತಿಯನ್ನು 'ಪರವಾದಿಗಿರಿವಜ್ರ, ವಾದಿಗಜಕೇಸರಿ, ವಾದಿಭಾಳಲೋಚನ, ವಾದಿಧರಾಧರಕುಳಿಶ, ಪರವಾದಿಗಂಡ ಭೇರುಂಡ, ಕವಿರಾಜಶಿಖಾಮಣಿ, ಸರಸಕವಿತಿಲಕ, ಸರಸಕವಿಮುಖತಿಲಕ, ಕವಿಕುಳಭಾಳಲಲಾಮ' ಎಂಬ ಅವರ ಬಿರುದುಗಳು ಪುಷ್ಟೀಕರಿಸುತ್ತವೆ. ಈ ಬಿರುದುಗಳ ಮೇಲಿಂದ ಅವರು ವಾದದಲ್ಲಿ ಅನೇಕ ಪಂಡಿತರನ್ನು ಗೆದ್ದಿರ ಬೇಕು. '೧೯೧೦-೧೧ನೆಯ ವರ್ಷದ ಮೈಸೂರ ಆರ್ಕಿಯಾಲಾಜಿಕಲ್ ಸರ್ವೆ ವಾರ್ಷಿಕ ರಿಪೋರ್ಟಿನ ೪೮-೪೯ನೆಯ ಪುಟಗಳಲ್ಲಿ ಹಳೇಬೀಡಿನಲ್ಲಿ ಬೆಣ್ಣೆಯ ಗುಡ್ಡದ ಉತ್ತರಕ್ಕೆ ಒಂದು ನೆಲಮಾಳಿಗೆಯಲ್ಲಿ ಒಂದು ಶಿಲಾಶಾಸನದಲ್ಲಿ ಈ ಮಾಘನಂದಿಯು ಚತುರ್ವಿಧಪಾಂಡಿತ್ಯಚಕ್ರವರ್ತಿ ಪರವಾದಿಗಂಡಭೇರುಂಡ ಕುಮುದಚಂದ್ರಪಂಡಿತನ ಗುರುವೆಂದು ನಿರೂಪಿಸಲ್ಪಟ್ಟಿರುವುದು. ಈ ಶಾಸನವು ೧೨೬೫ರದು (ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ ಪು. ೬೧-೬೨). ಅಂದರೆ ಕವಿಯು ಈಗಿನ ಮೈಸೂರ ಪ್ರಾಂತದವನು, ಗುರುವಿಗೆ ಒಪ್ಪುವ ಶಿಷ್ಯ ನಾಗಿದ್ದನೆಂದು ಹೇಳಿದಂತಾಯಿತು. ಮತ್ತು ಆತನು ೧೨೬೫ ರಲ್ಲಿಯೇ ಘನ ವಿದ್ವಾಂಸನೆಂದು ಖ್ಯಾತಿಗೊಂಡಿದ್ದನು. ಆದರೆ "ಇವನು ಪ್ರಾಯಶಃ ತನ್ನ ಗ್ರಂಥ ಗಳನ್ನು ಕ್ರಿ. ಶ. ೧೨೬೫ಕ್ಕೆ ಹಿಂದೆಯೇ ಬರೆದಿರಬಹುದು." (ಅದೇ ಗ್ರಂಥ ಪು. ೬೭.) ಎಂಬ ಮಾತು ಅಷ್ಟು ಸಯುಕ್ತಿಕವಲ್ಲ. ಯಾಕೆಂದರೆ ಅಲ್ಲಿ ಮಾಘನಂದಿಯು ಅಭಿನವಸಾರಚತುಷ್ಟಯದ ಕರ್ತೃವೆಂದು ಹೇಳಿದಂತೆ ಕುಮುದೇಂದುವಿನ ಗ್ರಂಥ ಗಳ ಹೆಸರುಗಳನ್ನು ಹೇಳಿಲ್ಲ. ಅವನ ಬಿರುದುಗಳಲ್ಲಿ ಕವಿಗುಣಗಳನ್ನು ಸೂಚಿಸುವ ಬಿರುದುಗಳನ್ನೂ ಹೇಳಿಲ್ಲ. ಆ ಕಾಲದಲ್ಲಿ ಆತನು ಅನೇಕ ವಾದಿಗಳನ್ನು ಜಯಿಸಿ ಪರವಾದಿಗಂಡಭೇರುಂಡನೆಂಬ ಪದವಿಯನ್ನು ದೊರಕಿಸಿರಬಹುದು ಮಾತ್ರ.

ಇನ್ನು ಆತನ ಗ್ರಂಥಗಳನ್ನೇ ನೋಡಿದರೆ ಬೇರೆ ಸಂಗತಿಯು ಕಂಡುಬರು ತ್ತದೆ. ಆತನ ರಾಮಾಯಣವು ನಮಗೆ ದೊರೆತ ಪ್ರತಿಗಳಲ್ಲೆಲ್ಲ ಪಂಪರಾಮಾ ಯಣದಂತೆ ರಾಮಕೇವಲಿಯ ಮೋಕ್ಷದ ವರೆಗೆ ಸಂಪೂರ್ಣವಾಗಿಲ್ಲ. ಅದು ರಾಮಚಂದ್ರನು ರಾವಣವಧೆಯಾದ ಮೇಲೆ ಸೀತಾಲಕ್ಷ್ಮಣರೊಡನೆ ಅಯೋಧ್ಯೆಗೆ ಬರುವ ಮಟ್ಟಿಗೆ ಮಾತ್ರವಿದೆ. ಬಹುತರವಾಗಿ ಅದು ಇಲ್ಲಿಗೇ ನಿಂತಿರಬಹುದೆಂದು ನಮ್ಮ ಊಹೆ. ಯಾಕೆಂದರೆ ಈ ಸಂಧಿಯ ಅಂತ್ಯದಲ್ಲಿ ಕವಿಯು ತನ್ನ ಅಂಕಿತವನ್ನಿರಿ ಸಿದ ಪದ್ಯವಿಲ್ಲ. ಅಂದರೆ ಅದು ಅಪೂರ್ಣವಾಗಿದೆ. ಇಷ್ಟು ಭಾಗವನ್ನು ಬರೆಯು

ವಷ್ಟರಲ್ಲಿ ೧ನೆಯ ಸಂಧಿಯಲ್ಲಿ ಪಂಚಪರಮೇಷ್ಠಿಗಳ ಸ್ತುತಿ, ಕುಕವಿನಿಂದೆ, ಸುಕವಿ ಸ್ತುತಿ, ತನ್ನ ಗುರುಪರಂಪರೆ ಮುಂತಾದ ವಿಷಯಗಳು ಇಲ್ಲದಿರುವುದು ಕಂಡುಬಂದ ಮೇಲೆ ಆ ಸಂಧಿಯನ್ನು ಪುನಃ ಬರೆದಂತೆ ತೋರುತ್ತದೆ. ಈ ಹೊಸ ಸಂಧಿಯು ಮೂರೂ ಪ್ರತಿಗಳಲ್ಲಿ ಅರ್ಧಕ್ಕೆ ನಿಂತುಹೋಗಿದೆ. ಇತ್ಯರ್ಥವೇನೆಂದರೆ ಕವಿಯು ಅದು ಪೂರ್ಣವಾಗುವ ಪೂರ್ವದಲ್ಲಿಯೇ ಗತಿಸಿ ಹೋಗಿರಬೇಕು. ಹೀಗಾದ ಸಂಗತಿಯು ಕನ್ನಡ ಸಾಹಿತ್ಯಭಕ್ತರಿಗೆ ಹೊಸದಲ್ಲ. ನೇಮಿಚಂದ್ರನೂ ಹೀಗೆಯೇ ಹರಿವಂಶಪುರಾಣವನ್ನು ಅರ್ಧ ಬರೆದು ಗತಿಸಿರುವುದರಿಂದ ಅದಕ್ಕೆ ಅರ್ಧನೇಮಿ ಪುರಾಣವೆಂಬ ಹೆಸರು ಬಂದಿದೆ.

ಇದರ ಮೇಲಿಂದ ಊಹಿಸುತ್ತಿರಲು ಕವಿಚರಿತೆಕಾರರು ಹೇಳಿದಂತೆ ಕುಮು ದೇಂದು ಮುನೀಶ್ವರರು ಸು. ೧೨೭೫ ರಲ್ಲಿ ಇದ್ದಿರಬಹುದು; ಮತ್ತು ಆ ಮುಂದೆಯೂ ಜೀವಿಸಿ ತಮ್ಮ ರಾಮಾಯಣವನ್ನು ಅರ್ಧ ಬರೆದಾದ ಮೇಲೆ ಗತಿಸಿರಬೇಕೆಂದು ತೋರುತ್ತದೆ.

---

# ಶ್ರೀಕುಮುದೇಂದುರಾಮಾಯಣದ ಕಥೆ.

## ಪೀಠಿಕಾ ಸಂಧಿ.

ಅನಂತಾನಂತ ವಿಭುವೆನಿಸುವ ಆಕಾಶದ ಮಧ್ಯದಲ್ಲಿ ಹದಿನಾಲ್ಕು ರಜ್ಜುವಿನ ಪ್ರಮಾಣದಿಂದ ಶೋಭಿಸುತ್ತಿರುವ ಮತ್ತು ವೇತ್ರಾಸನ-ಝಲ್ಲರಿ-ಮುರಜಗಳ ಹಾಗೆ ಒಪ್ಪುತ್ತಿರುವ ಪಾತಾಲ-ಮಧ್ಯ-ಊರ್ಧ್ವಲೋಕಗಳೆಂಬ ಲೋಕತ್ರಯಗಳು ಕ್ರಮವಾಗಿ ಉರಗನರಾಮರರಿಂದ ಒಪ್ಪುತ್ತಿರುವುವು. ಅವುಗಳಲ್ಲಿ ಮಧ್ಯಲೋಕದ ನಟ್ಟನಡುವೆ ಮೇರುಪರ್ವತವಿರುವದು. ಅದರ ದಕ್ಷಿಣ ದಿಕ್ಕಿನಲ್ಲಿ ಭರತಕ್ಷೇತ್ರದ ಆರ್ಯಾಖಂಡವು ಅಡಕೆ, ಮಾವು, ಹಲಸು, ಕಪ್ಪುರ ಮುಂತಾದ ಗಿಡಗಳ ವನಗಳಿಂದ ಶೋಭಿಸುತ್ತಿತ್ತು. ಅಲ್ಲಿ ಚತುರ್ದಶ ಮನುಗಳೂ, ಚತುರ್ವಿಂಶತಿ ತೀರ್ಥಂಕರರೂ, ನವಬಲವಾಸವರೂ, ನವನಾರದರೂ, ಏಕಾದಶರುದ್ರರೂ ಆಗಿಹೋದರು. ಅಲ್ಲಿ ಗಂಗಾ, ಸಿಂಧು ಮುಂತಾದ ನದಿಗಳು ಹರಿಯುತ್ತವೆ. ರಜತಪರ್ವತವಿದೆ. ಆ ಭರತಖಂಡದಲ್ಲಿ ಕೋಶಲದೇಶವು ರಂಜಿಸುತ್ತದೆ. ಅಲ್ಲಿ ಅಡಕೆ, ತೆಂಗು, ಕಂಚಿ, ಹಲಸು ಮುಂತಾದ ಫಲಗಳೂ, ಬತ್ತ ಮುಂತಾದ ಸಸ್ಯಾದಿಗಳೂ ನಾನಾ ತರದ ಹೂಗಳೂ ಹೇರಳವಾಗಿ ಬೆಳೆಯುತ್ತಿದ್ದವು. ಆ ದೇಶದಲ್ಲಿ ಸರಯೂ ನದಿಯು ಹರಿಯುತ್ತದೆ. ಅದರ ಎರಡೂ ದಂಡೆಗಳ ಮೇಲಿನ ಉದ್ಯಾನಗಳು ನಾನಾತರದ ಫಲಪುಷ್ಪಭರಿತವಾಗಿದ್ದುವು.

---

## ೧ ನೆಯ ಸಂಧಿ.

ಆ ದೇಶಕ್ಕೆ ಭೂಷಣವಾಗಿರುವುದು ಅಯೋಧ್ಯೆಯು. ಅಲ್ಲಿ ಇಕ್ಷ್ವಾಕುವಂಶದ ನಾಭಿರಾಜನು ಅರಸನು. ಆತನ ಹೆಂಡತಿಯು ಮರುದೇವಿಯು. ಅವರ ಮಗನು ಪುರುಜಿನಾಧಿಪತಿಯು. ಆತನೇ **ಆದಿನಾಥನು.** ಆತನ ಮಗನು **ಭರತೇಶ** ಚಕ್ರವರ್ತಿಯು. ಆತನ ಮಗನು ಅರ್ಕಕೀರ್ತಿಯು. ಆತನಿಂದ ಆ ವಂಶವು ಮುನಿಸುವ್ರತ ತೀರ್ಥಂಕರರ ವರೆಗೆ ನಿರಾಂತಕವಾಗಿ ಸಾಗುತ್ತ ಬಂದಿತು. ಆಗ ಆ ಕುಲದೊಳಗೆ ವಿಜಯರಥನೆಂಬ ಅರಸನಿದ್ದನು. ಆತನ ಪಟ್ಟದರಸಿಯು ಹೇಮಮಾಲಿಕೆ. ಅವರ ಮಗನು ಸುರೇಂದ್ರಮನ್ಯುವು. ಆತನ ಅರಸಿಯು ಕೀರ್ತಿಶ್ರೀ. ಅವರ ಮಕ್ಕಳು ವಜ್ರಬಾಹು ಪುರಂದರರು. ಒಂದು ದಿನ ವಿಜಯರಥನು ಓಲಗಶಾಲೆಯಲ್ಲಿ ಅರಸರ ನಡುವೆ ಒಪ್ಪಿ ಕುಳ್ಳಿರುವಾಗ ನಾಗಪುರದ ಅರಸು ಇಭವಾಹನನ ಮಗನು ಉದಯಸೌಂದರನು ಬಂದು ಕಾಣಿಕೆಯನ್ನರ್ಪಿಸಿ ತನ್ನ ತಂಗೆಯಾದ ಗುಣೋ

ದಯೆಯನ್ನು ವಿಜಯರಥನ ಮೊಮ್ಮಗನಾದ ವಜ್ರಬಾಹುವಿಗೆ ಕೊಟ್ಟು ಮದುವೆ ಮಾಡಬೇಕೆಂಬ ಉದ್ದೇಶದಿಂದ ತನ್ನ ತಂದೆಯು ತನ್ನನ್ನು ಕಳುಹಿಸಿದನು, ಎಂದು ಹೇಳಲು ಅವನು ಅದಕ್ಕೆ ಸಂತೋಷದಿಂದ ಸಮ್ಮತಿಸಿದನು; ಮತ್ತು ಒಂದು ಶುಭ ಮುಹೂರ್ತದಲ್ಲಿ ಆತನನ್ನು ವೈಭವದಿಂದ ಪರಿವಾರದೊಡನೆ ಕಳುಹಿಸಿದನು. ಅವರಿಬ್ಬರೂ ಬರುತ್ತಾ ದಾರಿಯಲ್ಲಿ ವಸಂತಗಿರಿಯ ಹತ್ತಿರ ಗುಣಸಾಗರಭಟ್ಟಾರಕ ರನ್ನು ಕಂಡು, ಬಲಗೊಂಡು, ಧರ್ಮವನ್ನು ಕೇಳಿ ದೀಕ್ಷೆಗೊಂಡರು. ಇತ್ತ ವಿಜಯ ರಥನು ಪುರಂದರನಿಗೆ ರಾಜ್ಯವನ್ನೊಪ್ಪಿಸಿ ಶತಮನುಷ್ಯಸಹಿತವಾಗಿ ದೀಕ್ಷೆವಹಿಸಿ ದನು. ಆತನ ಮಗನು ಕೀರ್ತಿಧರನು; ಆತನ ಮಗನು ಸುಕೋಶಲನು; ಹೆಂಡಿತಿ ವಿಚಿತ್ರಮಾಲೆ. ಅವರ ಮಗನು ಹಿರಣ್ಯಗರ್ಭ. ಸೌಂದರನು ಅವನ ಮಗನು. ಅವನ ಮಗನು ಸಿಂಹರಥನು. ಆತನ ಮಗನು ಬ್ರಹ್ಮರಥ; ಆತನ ಮಗನು ಚತು ರ್ಮುಖನು; ಆತನ ಮಗನು ಹೇಮರಥನು; ಆತನ ಮಗನು ಇಂದುರಥನು; ಇಂದು ರಥನಿಂದ ಭಾನುರಥನು ಹುಟ್ಟಿದನು. ಆತನ ತರುವಾಯ ಆ ವಂಶದಲ್ಲಿ ಮಯನು ಹುಟ್ಟಿದನು; ಮುಂದೆ ಮಾಂಧಾತನು, ವೀರಸೇನ, ಕಮಳಬಂಧು, ವಸಂತತಿಲಕ, ಕುಬೇರದತ್ತ, ಮೃಗಾರಿ, ದಮನ, ದ್ವಿಪರಥ, ಹಿರಣ್ಯಕಶಿಪು, ಅರ್ಕರಥ, ದಿಳೀಪ, ರಘುವೀರ ಮೊದಲಾದ ಅರಸರಾದರು. ಅವರಲ್ಲಿ ಅನರಣ್ಯನು ವಿದ್ಯಾ ವಿಶಾರದನೂ, ಪುಣ್ಯವಂತನೂ, ದಿಗಂತಕೀರ್ತಿಯುತನೂ ಆಗಿದ್ದನು. ಆತನ ಮಕ್ಕಳು ಅನಂತರಥ-ದಶರಥರು. ಒಂದು ದಿನ ಅನರಣ್ಯನು ತನ್ನ ಮಕ್ಕಳನ್ನು ಕರೆದು ದಶರಥನಿಗೆ ಪಟ್ಟಗಟ್ಟಿ ತಾನೂ ಅನಂತರಥನೂ ಅಭಯಘೋಷ ಮುನಿಪರ ಹತ್ತಿರ ದೀಕ್ಷೆಗೊಂಡರು.

---

## ೨ ನೆಯ ಸಂಧಿ.

ದಶರಥನು ಬಿದಿಗೆಯ ಚಂದ್ರನಂತೆ ಬೆಳೆದು ಯೌವನಸಂಪನ್ನನಾಗಿ ಪೃಥ್ವಿ ಯನ್ನು ಪಾಲಿಸಹತ್ತಿದನು. ಪ್ರಜೆಗಳೆಲ್ಲರೂ ಸುಖಿಯಾಗಿದ್ದರು. ಆವ ಕೊರತೆಯೂ ಇಲ್ಲದುದರಿಂದ ಕಾಮಧೇನುವನ್ನು ಪಶುವೆಂದು ತಿರಸ್ಕರಿಸುವ ಹಾಗಾಯಿತು. ದಶ ರಥನ ಆಳಿಕೆಯಲ್ಲಿ ಅಪರಾಜಿತೆ-ಸುಮಿತ್ರೆ-ಸುಪ್ರಭೆ ಎಂಬ ಮೂವರು ಆತನ ಹೆಂಡಿಂದಿರು. ಒಂದು ದಿನ ಆತನು ಒಡ್ಡೋಲಗದಲ್ಲಿರುವಾಗ ನಾರದನು ಬಂದನು. ಅರಸನು ಅವನನ್ನು ಕಂಡು ಎದುರಿಗೆ ಹೋಗಿ ಬಲಗೊಂಡು ನಮೋಸ್ತು ಮುಂತಾದ ಆದರಾತಿಥ್ಯಗಳನ್ನು ಮಾಡಿ ' ತಾವು ಇಲ್ಲಿಗೆ ಬಂದಿರುವ ಸಂಗತಿಯು ನನ್ನಲ್ಲಿ ಬಹಳ ಕುತೂಹಲತೆಯನ್ನು ಹುಟ್ಟಿಸುತ್ತದೆ. ಆ ಸಂಗತಿಯನ್ನೆಲ್ಲ ನನಗೆ ಹೇಳಬೇಕೆಂದು ದಶರಥನನ್ನೂ ಮಂತ್ರಿ ಸಮುದ್ರಹೃದಯನನ್ನೂ ಏಕಾಂತ ಸ್ಥಳಕ್ಕೆ ಕರೆದೊಯ್ದು ಹೀಗೆ ಹೇಳಿದನು. ' ಶಾಂತಿಜಿನಪತಿವಂದನಾರ್ಥವಾಗಿ ನಾನು

ಲಂಕಾಪುರಕ್ಕೆ ಹೋಗಿರಲು ಅಲ್ಲಿ ಸಾಗರಬುದ್ಧಿಯೆಂಬವನು ಜಾನಕಿಯ ದೆಸೆಯಿಂದ ದಾಶರಥಿಯ ಕೂಡ ದಶವದನನು ಕಾದಿ ಮರಣಹೊಂದುವನು ಎಂದು ವಿಭೀಷಣನಿಗೆ ಹೇಳಿದನು. ಅದನ್ನು ಕೇಳಿ ಆತನು ಬಹಳ ಸಿಟ್ಟಾಗಿ ಕಾರಣವನ್ನು ನಾಶಮಾಡಿದರೆ ಕಾರ್ಯವು ತನ್ನಿಂದ ತಾನೇ ನಾಶವಾಗುತ್ತದೆ. ಆದುದರಿಂದ ದಶರಥಜನಕನನ್ನು ಸಂಹರಿಸಿದರೆ ಹತ್ತೂ ದಿಕ್ಕುಗಳಲ್ಲಿ ರಾವಣನನ್ನು ಗೆಲ್ಲುವವ ರಾರು? ಎಂದು ಆ ಉದ್ಯೋಗದಲ್ಲಿರುವನು. ಅದನ್ನು ನಿಮಗೆ ತಿಳಿಸಲು ಇತ್ತ ಬಂದೆನು. ಇನ್ನು ಮೇಲೆ ಈ ಸಂಗತಿಯನ್ನು ಜನಕನಿಗೆ ತಿಳಿಸುತ್ತೇನೆ.' ಎಂದು ಹೇಳಿ ಆಕಾಶಮಾರ್ಗವಾಗಿ ಹೋದನು.

ಇತ್ತ ಸಮುದ್ರಹೃದಯನು ದಶರಥನ ಕೋಪಾವಿರ್ಭಾವವನ್ನು ಶಾಂತ ಗೊಳಿಸಿ ಆತನ ರೂಪವನ್ನಡಗಿಸಿ ಮಂಗಳಪುರದರಸುಮಗಳು ಕೈಕೆಯಿಯ ಸ್ವಯಂವ ರಕ್ಕೆ ಪರಿಜನಕ್ಕೆ ತಿಳಿಯದಂತೆ ಕಳಿಸಿ ಯಾರಿಗೂ ತಿಳಿಯದ ಹಾಗೆ ಚಿತ್ರದ ದಶರಥ ನನ್ನಿಟ್ಟುಕೊಂಡು ಓಲಗಿಸುತ್ತಿದ್ದನು. ಜನಕನಾದರೂ ಆ ಸಂಗತಿಯನ್ನು ನಾರದನ ಮುಖದಿಂದ ತಿಳಿದು ಆಪ್ತಮಂತ್ರಿಯನ್ನು ವಿಚಾರಿಸಿ ವೇಷಾಂತರಿಸಿ ಬಂದು ದಶರಥ ನನ್ನು ಸೇರಿದನು. ವಿಭೀಷಣನು ಬಂದು ಚಿತ್ರದ ದಶರಥಜನಕರ ತಲೆಗಳನ್ನು ಕೊಯ್ದುಕೊಂಡು ಹೋಗಿ ಸಮುದ್ರಕ್ಕೆ ಹಾಕಿದನು. ಅಯೋಧ್ಯಾಪುರ-ಮಿಥಿಳಾ ಪುರಗಳ ಜನರು ದುಃಖಿಸುತ್ತಿರಲು ಮಂತ್ರಿಗಳು ಅವರನ್ನು ಸಮಾಧಾನಗೊಳಿಸಿ ಸುಖವಾಗಿದ್ದರು. ಅತ್ತ ದಶರಥ-ಜನಕರು ಅಲೆಯುತ್ತ ಮಂಗಳಪುರಕ್ಕೆ ಬಂದು ಸ್ವಯಂವರಮಂಟಪಕ್ಕೆ ಬಂದು ಅದನ್ನು ಪ್ರವೇಶಿಸಿದರು. ಅವರು ಅಲ್ಲಿನ ಒಂದು ಮಂಚದ ಸಮೀಪಕ್ಕೆ ಬರುವಷ್ಟರಲ್ಲಿ ಸೌಂದರ್ಯದಿಂದ ರತಿಯನ್ನು ಮಿಕ್ಕುವ ಕೈಕೆಯು ಆ ಮಂಟಪಕ್ಕೆ ಬಂದಳು. ಅವಳು ಮಂಗಳಮಾಲೆಯನ್ನು ಕೈಯಲ್ಲಿ ಹಿಡಿದುಕೊಂಡು ಕಂಚುಕಿಯ ಸಂಗಡ ಎಲ್ಲ ಅರಸುಮಕ್ಕಳನ್ನು ನೋಡುತ್ತ ಆತನು ಅವರ ವಿಷಯವಾಗಿ ಹೇಳಿದ ಸಂಗತಿಗಳನ್ನು ಕೇಳುತ್ತ ಬರುತ್ತಿದ್ದಳು. ಚೇರ ಚೋಳ ಕಳಿಂಗ ಪಲ್ಲವ ಮಗಧಮುಂತಾದ ಅರಸರನ್ನೊಲ್ಲದೆ ಬಲಭಾಗದಲ್ಲಿದ್ದ ಉದಾರಗಂಭೀರಾಕೃತಿಯ ದಶರಥನನ್ನು ಮೆಚ್ಚಿ ಆತನಿಗೆ ಮಾಲೆಯನ್ನು ಹಾಕಿ ದಳು. ಮಂಗಳವಾದ್ಯಗಳು ಬಾರಿಸಿದುವು. ತರುಣಿಯರು ಮಂಗಳಾರತಿಯೆತ್ತಿ ದರು. ಆದರೆ ಕೈಕೆಯು ಏನೂ ತಿಳಿಯದೆ ದೇಶಾಂತರಿಯನ್ನು ವರಿಸಿದಳೆಂದು ಉಳಿದ ಅರಸುಮಕ್ಕಳು ಭ್ರಮಿಸಿ, ಎಲ್ಲರೂ ಕೂಡಿ ಆತನನ್ನು ಗೆದ್ದು ಕನ್ನೆಯನ್ನು ಅಪಹರಿಸೋಣವೆಂದು ಹೊರಟರು. ಅದನ್ನು ತಿಳಿದು ಕೈಕೆಯ ತಂದೆ ಶುಭಮತಿಯು ರಥವನ್ನು ಸಿದ್ಧಪಡಿಸಿಕೊಂಡು ಬಂದು 'ನೀವಿಬ್ಬರೂ ಇದರೊಳಗೆ ಕುಳಿತು ಪಟ್ಟ ಣಕ್ಕೆ ತೆರಳಿರಿ. ನಾನು ಇವರೆಲ್ಲರನ್ನು ಸೋಲಿಸಿ ಓಡಿಸಿ ಬರುವೆನು' ಎಂದನು. ಅದನ್ನು ಒಪ್ಪದೆ ದಶರಥನು ವೈರಿಗಳ ಕೂಡ ಯುದ್ಧಮಾಡಲು ಕೈಕೆಸಹಿತವಾಗಿ

ರಥದಲ್ಲಿ ಕುಳಿತು ಹೊರಟನು. ಯುದ್ಧವು ಭರದಿಂದ ಸಾಗಿತು. ದಶರಥನೊಬ್ಬನೇ ಒಂದೇ ರಥದಿಂದ ಅನೇಕ ರಾಜಪುತ್ರರನ್ನು ಸೋಲಿಸಿದನು. ಅಷ್ಟರಲ್ಲಿ ಆತನ ಸಾರಥಿಯು ಬಿದ್ದನು. ಧ್ವಜವು ಸಡಲಿಸಿತು. ಕೂಡಲೆ ಕೈಕೆಯು ರಥವನ್ನು ಜೋಡಿಸಿ ಸಾರಥಿಯ ಕಾರ್ಯವನ್ನು ಕೈಕೊಂಡಳು. ಹೇಮಪ್ರಭ ಮುಂತಾದವರು ಸೋತು ಹೋದರು. ಅದನ್ನು ಕಂಡು ಉಳಿದ ಅರಸುಮಕ್ಕಳು ಶರಣುಬರಲು, ಅವರಿಗೆ ಅಭಯವಿತ್ತನು. ಹೀಗೆ ಜಯಶೀಲನಾಗಿ ದಶರಥನು ಕೈಕೆಸಹಿತವಾಗಿ ಆನೆಯನ್ನೇರಿ ಆತನ ಎಡಕ್ಕೂ ಬಲಕ್ಕೂ ಶುಭಮತಿ-ಜನಕರು ಆನೆಯನ್ನೇರಿ ವಿಜಯೋತ್ಸವದಿಂದ ಮಂಗಳಪುರದ ಶೋಭೆಯನ್ನು ನೋಡುತ್ತ ಬಂದರು. ಅವರು ದಶರಥ-ಜನಕರೆಂದು ತಿಳಿದ ಮೇಲೆ ಶುಭಮತಿಗೆ ಬಹಳ ಆನಂದವಾಯಿತು. ದಶರಥನ ಮದುವೆಯಾಯಿತು. ದೀನಾನಾಥರು ದಾನದಿಂದ ಸಂತುಷ್ಟರಾದರು. ದಶರಥಜನಕರು ಕೆಲವು ದಿನಗಳ ವರೆಗೆ ಅಲ್ಲಿದ್ದು ತಿರುಗಿ ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದರು. ಒಂದು ದಿನ ಆಪ್ತಜನರ ಕೂಡ ದಶರಥನು ಯುದ್ಧಗೋಷ್ಠಿಯಲ್ಲಿ ತೊಡಗಿರಲು ಕೈಕೆಯೂ ಅಲ್ಲಿಯೇ ಇದ್ದಳು. ಅವಳನ್ನು ನೋಡಿ ದಶರಥನು ಹೀಗೆಂದನು—"ಇವಳು ಸಾರಥಿಯ ಕಾರ್ಯವನ್ನು ಕೈಕೊಳ್ಳದಿದ್ದರೆ ಅಂದಿನ ಯುದ್ಧದಲ್ಲಿ ನನಗೆ ಜಯವೇ ದೊರೆಯುತ್ತಿರಲಿಲ್ಲ. ಆದುದರಿಂದ ನಾನು ನಿನಗೆ ಮೆಚ್ಚಿದ್ದೇನೆ. ಬೇಕಾದ ವರವನ್ನು ಬೇಡು." ಅದಕ್ಕೆ ಉತ್ತರವಾಗಿ ಅವಳು ತನಗೆ ಆಗಬೇಕಾದುದೇನೂ ಇಲ್ಲವೆಂದೂ, ವರಗಳು ಆತನ ಭಂಡಾರದಲ್ಲಿಯೇ ಇರಬೇಕೆಂದೂ ಕೇಳಿಕೊಂಡಳು.

ಹೀಗೆ ನಾಲ್ವರು ಕಾಂತೆಯರ ಸಂತೋಷಕ್ಕನುಕೂಲವಾಗಿ ದಶರಥನು ಅಪರಾಜಿತೆಯನ್ನು ಪಟ್ಟದರಸಿಯನ್ನು ಮಾಡಿ ಸುಖದಿಂದಿರಲು ಅಪರಾಜಿತೆಯು ಋತುಮತಿಯಾಗಿ ಚತುರ್ಥಸ್ನಾನಾನಂತರ ರಾತ್ರಿಯಲ್ಲಿ ಸುಖಸುಪ್ತೆಯಾಗಿ ಬೆಳಗಿನ ಜಾವದಲ್ಲಿ ಕನಸಿನಲ್ಲಿ ಮದಗಜ, ಸಿಂಹ, ಸೂರ್ಯ, ಚಂದ್ರ ಮುಂತಾದ ಮಂಗಳ ವಸ್ತುಗಳನ್ನು ಕಂಡಳು. ಮರುದಿನ ಆ ಕನಸನ್ನು ತನ್ನ ಪತಿಗೆ ಹೇಳಲು ಆತನು ಅದರ ಅರ್ಥವನ್ನು ವಿಶದೀಕರಿಸಿ ದಾನಿಯೂ ಪರಾಕ್ರಮಿಯೂ ತೇಜಸ್ವಿಯೂ ಕಳಾಧರನೂ ಆದ ಮಗನು ಹುಟ್ಟುವನೆಂದು ಹೇಳಿದುದನ್ನು ಕೇಳಿ ಸಂತೋಷದಿಂದಿದ್ದಳು. ಅವಳ ಗರ್ಭವು ಬೆಳೆದು ಒಂಬತ್ತು ತಿಂಗಳು ತುಂಬಿದ ಮೇಲೆ ಅವಳು ಗಂಡುಮಗುವನ್ನು ಹೆತ್ತಳು. ಆಗ ಅನೇಕ ಶುಭ ಶಕುನಗಳಾದುವು. ದಶರಥನು ಜಾತಕರ್ಮವನ್ನು ಮಾಡಿದನು. ಹತ್ತನೆಯ ದಿನ ಶುಭಮುಹೂರ್ತದಲ್ಲಿ ಮಗುವಿಗೆ **ರಾಮನೆಂದು** ಹೆಸರಿಟ್ಟರು.

ಕೆಲವು ದಿನಗಳ ತರುವಾಯ ಸುಮಿತ್ರೆ, ಕೈಕೆ, ಸುಪ್ರಭೆಯರು ಗರ್ಭವತಿಯರಾಗಿ ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮಕ್ಕಳನ್ನು ಕ್ರಮವಾಗಿ ಹೆತ್ತರು. ಅವರು ಶುಕ್ಲಪಕ್ಷದ ಚಂದ್ರನಂತೆ ಬೆಳೆದು ಸಕಲ ವಿದ್ಯಾಕುಶಲರಾದರು. ಒಂದುದಿನ ಇವರೆಲ್ಲರೂ ಒಡ್ಡೋಲಗದಲ್ಲಿರಲು ಜನಕರಾಜನ ಕಡೆಯಿಂದ ಚರನೊಬ್ಬನು ಬಂದು

ನಮಿಸಿ, ತಾನು ತಂದ ಕಾಣಿಕೆಗಳನ್ನರ್ಪಿಸಿ, ಓಲೆಯೊಂದನ್ನು ಮುಂದಿಟ್ಟನು. ಅದನ್ನು ಸೇನಬೋವನು ತನ್ನ ಮಗಳು ಜಾನಕಿಯನ್ನು ರಾಮನಿಗೆ ಈ ಮೊದಲೇ ಕೊಟ್ಟು ಲಗ್ನಕ್ಕೆ ಉದ್ಯೋಗಿಸುತ್ತಿರಲು “ ಒಬ್ಬ ಖೇಚರನು ಕಪಟದಿಂದ ತನ್ನನ್ನು ಎತ್ತಿಕೊಂಡು ಹೋದನು. ಆ ಮುಂದಿನ ಸಂಗತಿಯನ್ನು ದೂತನಿಂದ ತಿಳಿದುಕೊಳ್ಳಬೇಕು, ” ಎಂದು ಓದಿದನು. ಅದನ್ನು ಕೇಳಿ ರಾಮ-ಲಕ್ಷ್ಮಣ-ಭರತ-ಶತ್ರುಘ್ನರು ಆ ಖೇಚರನ ಮೇಲೆ ತಮ್ಮ ಕೋಪಾಟೋಪವನ್ನು ತೋರಿಸಲು ಉದ್ಯುಕ್ತರಾಗಿ ತಂದೆಯ ಅಪ್ಪಣೆಯನ್ನು ಕೇಳಹತ್ತಿದರು. ಅಷ್ಟರಲ್ಲಿ ಮಂತ್ರಿ ಸಮುದ್ರಹೃದಯನು ಚರನು ಹೇಳಿದುದನ್ನು ಕೇಳಿಕೊಂಡು ಆಮೇಲೆ ಯುದ್ಧಕ್ಕೆ ಸಿದ್ಧರಾಗಬಹುದೆಂದನು. ಅದನ್ನು ಕೇಳಿ ದೂತನು ಜನಕರಾಜನು ತಿರುಗಿ ಬಂದು ಜಾನಕಿಯ ಸ್ವಯಂವರವನ್ನು ಆರಂಭಿಸಿದ್ದಾನೆನ್ನಲು ಎಲ್ಲರಿಗೂ ಆಶ್ಚರ್ಯವಾಯಿತು. ಅದನ್ನು ಕೇಳಿ ಜನಕರಾಜನ ಸಕಲ ವೃತ್ತಾಂತವನ್ನು ಹೇಳೆನ್ನಲು ಆತನು ಹೇಳತೊಡಗಿದನು.

---

## ೩ ನೆಯ ಸಂಧಿ.

ಮಿಥಿಳೇಶ್ವರನ ವಲ್ಲಭೆ ವಿದೇಹಿಯು ಗರ್ಭವತಿಯಾಗಿ ಅವಳಿ-ಮಕ್ಕಳನ್ನು ಹೆತ್ತಳು. ಅವರ ಜಾತಕರ್ಮ ಸಮಯದಲ್ಲಿ ಅಸುರನೊಬ್ಬನು ಸಿಟ್ಟಿನಿಂದ ಆ ಸೂತಿಕಾಗೃಹವನ್ನು ಪ್ರವೇಶಿಸಿ ಗಂಡುಮಗುವನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿ ಹೋದನು. ಆದರಿಂದ ಮಿಥಿಳೆಯಲ್ಲಿ ಎಲ್ಲ ಕಡೆಯಲ್ಲಿ ಹಾಹಾಕಾರವುಂಟಾಯಿತು. ಎಲ್ಲರೂ ದುಃಖದಲ್ಲಿ ಮುಳುಗಿರಲು ಒಬ್ಬ ನಿಮಿತ್ತಕನು ಬಂದು ‘ ಅಂಜಬೇಡಿ, ನಿಮ್ಮ ಮಗನು ಖೇಚರೇಶ್ವರನಾಗಿ ನಿಮ್ಮನ್ನು ಕಾಣುವನು ’ ಎಂದು ಹೇಳಲು ಜನಕನು ತುಸು ಸಮಾಧಾನಗೊಂಡು ವಿದೇಹಿಯನ್ನು ಸಂತವಿಸಿದನು. ಆ ಮೇಲೆ ತಮ್ಮ ನಂದನೆಯ ಜಾತಕರ್ಮವನ್ನು ಮಾಡಿ ಹತ್ತನೆಯ ದಿನದಲ್ಲಿ ಸೀತೆಯೆಂದು ಹೆಸರಿಟ್ಟು ಕಾಪಾಡುತ್ತಿದ್ದರು. ಅವಳು ಶುಕ್ಲಪಕ್ಷದ ಚಂದ್ರನಂತೆ ಬೆಳೆದು ವಯಸ್ಕಳಾದಳು. ಅವಳ ಸೌಂದರ್ಯವು ಕವಿಗಳನ್ನು ಬೆರಗುಗೊಳಿಸಿತು. ಅವಳನ್ನು ರಾಮಚಂದ್ರನಿಗೆ ಕೊಟ್ಟು ಮದುವೆ ಮಾಡಬೇಕೆಂದು ಜನಕನು ಸಂತೋಷದಿಂದಿರಲು ಒಬ್ಬ ಚರನು ಓಡಿ ಬಂದು “ ವರ್ಧನಪುರವೆಂಬ ಶಬರದೇಶದ ಮಯೂರಮಾಲಿಯೆಂಬ ಪಟ್ಟಣದ ಅರಸನು ತರಂಗತಮನು ಶಬರರನ್ನು ಕೂಡಿಕೊಂಡು ರಾಜ್ಯವನ್ನು ಹಾಳು ಮಾಡುತ್ತ ದಂಡೆತ್ತಿ ಬರಹತ್ತಿದ್ದಾನೆ ” ಎಂದನು. ಅದನ್ನು ಕೇಳಿ ರಣಭೇರಿಯನ್ನು ಹೊಡೆಯಿಸಿ ಸೈನ್ಯವನ್ನು ಕೂಡಿಸಿ ಪಟ್ಟಣದ ಹೊರಗೆ ಬೀಡುಬಿಟ್ಟು ಪಯಣದ ಮೇಲೆ ಪಯಣ ಬೆಳೆಯಿಸುತ್ತ ಸಾಗಿದನು. ಶಬರಸೇನೆಯ ಸಮೀಪಕ್ಕೆ ಬಂದು ಅದನ್ನು ನಿರೀಕ್ಷಿಸುತ್ತಿರಲು ಒಬ್ಬ ದೂತನು ಬಂದು ‘ ರಾಮಲಕ್ಷ್ಮಣರು ಸೈನ್ಯಸಹಿತ

ವಾಗಿ ಬಂದಿರುವರು. ಶಬರಸೇನೆಯನ್ನು ಗೆಲ್ಲುವುದು ಆವ ದೊಡ್ಡ ಮಾತು? ' ಎಂದು ಹೇಳುತ್ತಿರುವಾಗ ಶಬರರು ತರಂಗತಮನನ್ನು ಹಿಡಿದುತಂದು ಜನಕನಿಗೆ ಒಪ್ಪಿಸಿದರು. ಜನಕನು ಅವನಿಗೆ ಅಭಯವನ್ನು ಕೊಟ್ಟು ರಾಮ-ಲಕ್ಷ್ಮಣರು ಬಂದಿರುವರೆಂದನು. ಅದೇ ಕಾರಣದಿಂದ ಶಬರಸೇನೆಯು ಅಂಜಿ ಕೆಟ್ಟು ಹೋಯಿತೆಂದನು. ತರಂಗತಮನು 'ಆವರು ಎಂಟನೆಯ ಬಲಕೇಶವರಾದುದರಿಂದ ಅವರನ್ನು ಎದುರಿಸುವುದು ಯಾರಿಗೂ ಸಾಧ್ಯವಿಲ್ಲ. ಆವರು ಭರತತ್ರಿಖಂಡಮಂಡಳಕ್ಕೆ ಅಧಿಪರು' ಎಂದನು. ಮಗಧೇಶನು ಆವರ ಧೈರ್ಯ-ಶೌರ್ಯ-ಔದಾರ್ಯ-ಗಾಂಭೀರ್ಯಗಳಿಗೆ ಮೆಚ್ಚಿ ಎಲ್ಲರಿಗೂ ತಿಳಿಯುವಂತೆ ಜನಕನು ರಾಮನಿಗೆ ಸೀತೆಯನ್ನು ಕೊಟ್ಟ ಸಂಗತಿಯನ್ನು ಸಾರಿದನು. ದೇಶವನ್ನು ಬಾಧಿಸದಂತೆ ಶಬರಾಧಿಪತಿಗೆ ಕಟ್ಟಪ್ಪಣೆಮಾಡಿ ಕಳುಹಿ ಜನಕನು ಮಿಥಿಲೆಗೆ ಬಂದು ಸಂತೋಷದಿಂದಿದ್ದನು.

ಜನಕರಾಜನು ರಾಮನಿಗೆ ಸೀತೆಯನ್ನು ಕೊಟ್ಟ ಸಂಗತಿಯು ಜನಜನಿತವಾಗಿರಲು, ನಾರದನು ಅದನ್ನು ಕೇಳಿ ಸೀತೆಯನ್ನು ನೋಡಬೇಕೆಂದು ಕನ್ನೆವಾಡಕ್ಕೆ ಬಂದನು. ಅವನನ್ನು ಕಂಡು ಸೀತೆಸಹಿತೆಯಾಗಿ ಎಲ್ಲ ತರುಣಿಯರು ಓಡಿಹೋಗಿ ಬಾಗಿಲವನ್ನು ಇಕ್ಕಿಕೊಂಡರು. ಕಾವಲುಗಾರರು ಆಯುಧಗಳನ್ನು ತೂಗುತ್ತ ಬರಲು, ನಾರದನು ಆಕಾಶಕ್ಕೆ ಹಾರಿ ಕೈಲಾಸಪರ್ವತಕ್ಕೆ ಬಂದಿಳಿದನು. ಅಲ್ಲಿ ವಿಶ್ರಾಂತಿಗೊಂಡು ಸೇಡು ತೀರಿಸಿಕೊಳ್ಳುವ ಬುದ್ಧಿಯಿಂದ ಸೀತೆಯ ಚಿತ್ರವೊಂದನ್ನು ಬರೆದು ವಿದ್ಯಾಧರಶ್ರೇಣಿಗೆ ಹೋಗಿ ರಥನೂಪುರಚಕ್ರವಾಳಪುರದರಸು ಇಂದುಗತಿಯ ಬಳಿಗೆ ಹೋಗಿ ಆ ಚಿತ್ರವನ್ನು ತೋರಿಸಿ, ' ಈ ಕನ್ನೆಯು ನಿನ್ನ ಮಗ ಪ್ರಭಾಮಂಡಳನಿಗೆ ಯೋಗ್ಯಳು. ಇವಳು ಮಿಥಿಳೆಯ ಜನಕರಾಜನ ಮಗಳು. ಯಾವಾತನ ಕೈಯನ್ನು ಇವಳು ಹಿಡಿಯುವಳೋ ಅವನೇ ಭರತಖಂಡದ ಒಡೆಯನಾಗುವನು' ಎಂದು ಹೇಳಿ ಹರಿಸಿ ಹೊರಟುಹೋದನು. ಈ ವಿಷಯದಲ್ಲಿ ಇಂದುಗತಿಯು ತನ್ನ ಮಂತ್ರಿಗಳ ಅಭಿಪ್ರಾಯವನ್ನು ಕೇಳಲು ಸೀತೆಯನ್ನು ತರಬೇಕೆಂದರವರು. ತಂದೆಯು ಕೊಡದಿರುವಾಗ ಅವಳನ್ನು ಅಪಹರಿಸಿಕೊಂಡು ಬಂದರೆ ನಮಗೆ ಅಪಯಶವು. ಮತ್ತು ಭೂಚರರು ಖೇಚರರಿಗೆ ತಮ್ಮ ಮಕ್ಕಳನ್ನು ಕೊಡುವುದಿಲ್ಲ. ಇದಕ್ಕೆ ಉಪಾಯವೆಂದರೆ ಜನಕನನ್ನು ಇಲ್ಲಿಗೆ ತರಿಸುವುದು ಎಂದು ಮಂತ್ರಿಗಳು ಸೂಚಿಸಿದರು. ಅದನ್ನು ಕೇಳಿ ಚಪಳಮತಿಯೆಂಬ ಖೇಚರನು ಜನಕನನ್ನು ಕರೆದು ತರುವೆನೆಂದು ಅಪ್ಪಣೆಪಡೆದು ಹೊರಟನು. ಆತನು ಮಿಥಿಳೆಗೆ ಬಂದು ಉದ್ಯಾನದಲ್ಲಿ ವಿಶ್ರಾಂತಿಗೊಂಡು ಜನಕನು ಕುದುರೆಗಳಲ್ಲಿ ಪ್ರೀತಿಯುಳ್ಳವನೆಂದು ತಿಳಿದು ಒಂದು ದುಷ್ಟ ಕುದುರೆಯ ರೂಪವನ್ನು ಧರಿಸಿದನು. ಅದು ಪಟ್ಟಣವನ್ನು ಪ್ರವೇಶಿಸಿ ಭರದಿಂದ ಓಡುತ್ತ, ಒದೆಯುತ್ತ, ಕಚ್ಚುತ್ತ, ಮೇಲೆ ಹಾರುತ್ತ ಕೋಲಾಹಲವನ್ನೆಬ್ಬಿಸಿತು. ಆ ಕಳಕಳ ಧ್ವನಿಯನ್ನು ಕೇಳಿ ಜನಕನು ಅದರ ಸಮೀಪಕ್ಕೆ ಬರಲು ಆ ಕುದುರೆಯು

ಸೌಮ್ಯರೂಪವನ್ನು ತಾಳಿತು. ಅದರ ಮೇಲೆ ಜೀನು ಹಾಕಿಸಿ ಕಡಿವಾಣವನ್ನಳವಡಿಸಿ ಸವಾರಿ ಮಾಡುವದಕ್ಕೆಂದು ಅದನ್ನು ಜನಕನು ಹತ್ತಲು ಅದು ಆಕಾಶಕ್ಕೆ ಹಾರಿ ರಥನೂಪುರಚಕ್ರವಾಳಪುರದ ಉಪವನದಲ್ಲಿ ಬಂದು ನಿಂತಿತು. ಜನಕರಾಜನು ಕುದುರೆಯಿಂದಿಳಿದು ತನಗುಂಟಾದ ವಿಪತ್ತಿಗೆ ವ್ಯಸನಪಡುತ್ತ ಆ ಉದ್ಯಾನದ ಸೊಬಗನ್ನು ನೋಡುತ್ತ ಅಲೆಯುತ್ತಿರುವಾಗ ಅಲ್ಲಿಯೊಂದು ಜಿನಮಂದಿರವು ಕಾಣಿಸಿತು. ಆತನು ಭಕ್ತಿಯಿಂದ ಅದನ್ನು ಬಲಗೊಂಡು ಪ್ರವೇಶಿಸಿ ಜಿನದರ್ಶನಗೈದನು. ತನಗುಂಟಾದ ದುಃಖಗಳನ್ನೆಲ್ಲ ಮರೆತು ಆನಂದದಿಂದ ಜಿನಸ್ತುತಿಗೈಯುತ್ತಿದ್ದನು.

ಇತ್ತ ಚಪಳಮತಿಯು ಪೂರ್ವರೂಪವನ್ನು ಧರಿಸಿ ತಾನು ಜನಕರಾಜನನ್ನು ತಂದ ಸಂಗತಿಯನ್ನು ಇಂದುಗತಿಗೆ ತಿಳುಹಿದನು. ಆತನು ಆನಂದದಿಂದ ಸಪರಿವಾರವಾಗಿ ಜಿನಮಂದಿರಕ್ಕೆ ಬಂದು, ದರ್ಶನಸ್ತುತಿಗೈದು, ಜಿನೇಶ್ವರನನ್ನಾರಾಧಿಸಿ, ಅತಿಥಿಯಾದ ಜನಕನನ್ನು ಸ್ವಾಗತ-ಸಂಭಾಷಣೆಗಳಿಂದ ಮನ್ನಿಸಿ ತನ್ನ ಮಗನಿಗೆ ಸೀತೆಯನ್ನು ಕೊಟ್ಟು ತನ್ನ ಕೂಡ ಬಾಂಧವ್ಯವನ್ನು ಬೆಳೆಯಿಸಬೇಕೆಂದು ಕೇಳಿದನು. ಜನಕನು ತನ್ನ ಮನದೊಳಗಿನ ಸಿಟ್ಟನ್ನು ತೋರಗೊಡದೆ ತನ್ನ ಮಗಳನ್ನು ರಾಮನಿಗೆ ಕೊಟ್ಟಂತೆಯೂ, ಅದನ್ನು ಮೀರಿ ನಡೆದರೆ ಅಪಕೀರ್ತಿ ಬರುವುದೆಂದೂ, ಹಾಗೆ ಮಾಡುವವನು ಅರಸನಾಗಬಲ್ಲನೇ? ಎಂದನು. ಅದನ್ನು ಕೇಳಿ ಸನ್ಮತಿಯೆಂಬ ಖೇಚರನು ಖೇಚರಾಧಿಪತಿಯು ಸೀತೆಯನ್ನು ಕೇಳುತ್ತಿರುವಲ್ಲಿ ಸಾಮಾನ್ಯನಾದ ಭೂಚರನಿಗೆ ಅವಳನ್ನು ಕೊಡಬಹುದೇ ಎಂದು ದೂರಿದನು. ಅದಕ್ಕೆ ಜನಕನು ಮುನಿದು, ಅವರು ಇಕ್ಷ್ವಾಕುವಂಶದಲ್ಲಿ ಹುಟ್ಟಿದ ದಶರಥನ ಮಕ್ಕಳೆಂದೂ, ಬಹು ಪರಾಕ್ರಮಿಗಳೆಂದೂ, ಎಂಟನೆಯ ಬಲಕೇಶವರೆಂದೂ ಮತ್ತು ಅವರನ್ನು ಸರಿಗಟ್ಟುವವರಾರೂ ಇಲ್ಲವೆಂದೂ ನುಡಿದನು. ಅದನ್ನು ಕೇಳಿ ಇಂದುಗತಿಯು ಕೋಪಗೊಂಡು ರಾಮನು ಅಷ್ಟು ಬಲಶಾಲಿಯಾಗಿದ್ದರೆ ಉರಗರಾಜನು ನಮಿವಿನಮಿಗಳಿಗೆ ಕೊಟ್ಟ ಉರಗಾಧಿಷ್ಠಿತನಾದ, ಪರಂಪರೆಯಿಂದ ನಮ್ಮ ವಂಶದಲ್ಲಿದ್ದ ವಜ್ರಾವರ್ತವೆಂಬ ಬಿಲ್ಲನ್ನು ಎತ್ತಿ ಹೆದೆಯೇರಿಸಿದರೆ ಆತನಿಗೆ ಸೀತೆಯನ್ನು ಕೊಡು ಎಂದನು. ಜನಕರಾಜನು ರಾಮಚಂದ್ರನ ಸಾಮರ್ಥ್ಯದಲ್ಲಿ ವಿಶ್ವಾಸವುಳ್ಳವನಾದುದರಿಂದ ಅದಕ್ಕೆ ಒಪ್ಪಿದನು. ಇಂದುಗತಿಯು ಉಡುಗೋರೆ ಸಹಿತವಾಗಿ ವಜ್ರಾವರ್ತ-ಸಾಗರಾವರ್ತಗಳೆಂಬ ಎರಡು ಬಿಲ್ಲುಗಳನ್ನು ಖೇಚರಬಲಸಹಿತವಾಗಿ ಚಂದ್ರವರ್ಧನನನ್ನು ಕೊಟ್ಟು ಕಳುಹಿದನು. ವಿಮಾನಮಾರ್ಗವಾಗಿ ಜನಕರಾಜನು ಮಿಥಿಳೆಗೆ ಬಂದು ಚಂದ್ರವರ್ಧನನನ್ನು ಉಪವನದಲ್ಲಿ ಬಿಟ್ಟು ತಾನು ಆನಂದದಿಂದ ಪಟ್ಟಣವನ್ನು ಪ್ರವೇಶಿಸಿದನು. ಚಂದ್ರವರ್ಧನನು ಅಲ್ಲಿಯೇ ತನ್ನ ಸಾಮರ್ಥ್ಯದಿಂದ ಒಂದು ಅರಮನೆಯನ್ನು ನಿರ್ಮಿಸಿದನು. ಅದರೊಳಗೆ ಸ್ಫಟಿಕದ ಮಂಟಪದಲ್ಲಿ ರತ್ನದ ಗದ್ದುಗೆಯ ಮೇಲೆ ಎರಡೂ ಬಿಲ್ಲುಗಳನ್ನಿರಿಸಿ ಪೂಜಿಸಿ ಅವುಗಳನ್ನು ರಕ್ಷಿಸುತ್ತಿದ್ದನು.

ಅತ್ತ ಜನಕರಾಜನು ಅರಮನೆಗೆ ಹೋಗಿ ಮಂತ್ರಿ-ಆಪ್ತಜನಗಳಿಗೆಲ್ಲ ತಾನು ಖೇಚರಪುರಕ್ಕೆ ಹೋದುದುದನ್ನೂ, ಅಲ್ಲಿ ನಡೆದ ಇಂದುಗತಿಯ ಕಾರ್ಯಕಲಾಪವನ್ನೂ, ವಜ್ರಾವರ್ತ-ಸಾಗರಾವರ್ತ ಬಿಲ್ಲುಗಳ ಸಂಗತಿಯನ್ನೂ ಹೇಳಿ, ಸೀತೆಯು ಸ್ವಯಂವರದ ಸಿದ್ಧತೆಯನ್ನು ಆರಂಭಿಸಿದನು. ರತ್ನಖಚಿತವಾದ ಸ್ವಯಂವರ ಮಂಟಪವು ಉಪವನದಲ್ಲಿ ಕಟ್ಟಲಾಯಿತು. ಎಲ್ಲ ರಾಜರನ್ನೂ ಕರೆಯಿಸಿದ್ದಾನೆ. ಇದನ್ನು ತಿಳುಹಲು ಜನಕರಾಜನು ನನ್ನನ್ನು ಇಲ್ಲಿಗೆ ಕಳುಹಿದನೆನ್ನಲು ದಶರಥನು ರಾಮನ ಮುಖವನ್ನು ನೋಡಿದನು. ಅದನ್ನು ತಿಳಿದು ಇದಾವ ದೊಡ್ಡ ಮಾತು ? ಹುಬ್ಬು ಏರಿಸುವ ಹಾಗೆ ಸಹಜವಾಗಿ ರಾಮಚಂದ್ರನು ಬಿಲ್ಲನ್ನೇರಿಸುವನು ಎಂದನು. ಅದನ್ನು ಕೇಳಿ ದಶರಥನು ಆನಂದಪಟ್ಟು ಜನಕಚರನಿಗೆ ತೃಪ್ತಿಯಾಗುವಂತೆ ಉಡುಗೋರೆಯನ್ನು ಕೊಟ್ಟು ಕಳುಹಿದನು.

---

## ೪ನೆಯ ಸಂಧಿ.

ದಶರಥನು ಪತ್ನೀಸುತಸಮೇತನಾಗಿ ಚತುರಂಗಬಲಪರಿವೃತನಾಗಿ ವೇಗವಾಗಿ ಪ್ರಯಾಣ ಬೆಳೆಯಿಸಿ ಮಿಥಿಳೆಗೆ ಬಂದನು. ಪಟ್ಟಣದ ಉಪವನದಲ್ಲಿ ಬೀಡು ಬಿಡ ಹೇಳಿ, ದಶರಥನು ರಾಘವ-ಲಕ್ಷ್ಮಣ-ಭರತ-ಶತ್ರುಘ್ನರನ್ನೊಡಗೊಂಡು ಸ್ವಯಂವರ ಮಂಟಪಕ್ಕೆ ಬಂದು ಮಣಿಮಯಾಸನದಲ್ಲಿ ಕುಳಿತುಕೊಂಡನು. ಅಷ್ಟರಲ್ಲಿ ಸೀತೆಯು ಸಿಂಗಾರಾಗಿ ಐನೂರು ಜನ ಗೆಳತಿಯರ ಮಧ್ಯದಲ್ಲಿ ರತ್ನಖಚಿತವಾದ ರಥದಲ್ಲಿ ಕುಳಿತು ಬಂದಳು. ಕಂಚುಕಿಯು ಆವಳನ್ನು ಸಂಗಡ ಕರೆದುಕೊಂಡು ಅರಸರನ್ನು ತೋರಿಸುತ್ತ ಬಂದನು. ಆಗ ಅರಸುಮಕ್ಕಳ ನಾನಾವಿಧದ ವಿಕಾರಚೇಷ್ಟೆಗಳು ಕಂಡು ಬಂದುವು. ಜಾನಕಿಯು ಸಂತೋಷದಿಂದ ಸ್ವಯಂವರಮಂಟಪದ ನಡುವಿರುವ ಕಟ್ಟೆಯ ನೀಲರತ್ನಗಳ ಕಂಬಗಳ ಬಳಿಯಲ್ಲಿ ಗೆಳತಿಯರುಸಹಿತವಾಗಿ ನಿಂತುಕೊಂಡಳು. ಕಂಚುಕಿಯು ಅವರವರ ಗುಣವರ್ಣನೆಯನ್ನು ಮಾಡುತ್ತಿರಲು ಸೀತೆಯು ರಾಮನನ್ನು ಕಂಡು ಆತನನ್ನೇ ನೆನೆಯಹತ್ತಿದಳು. ಕಂಚುಕಿಯ ಮಾತುಗಳಿಗೆ ಗಮನಕೊಡುತ್ತಿರಲಿಲ್ಲ.

ಇತ್ತ ಖೇಚರವಲ್ಲಭನ ಮಹತ್ತರನೊಬ್ಬನು ಎರಡೂ ಬಿಲ್ಲುಗಳನ್ನು ಪೂಜಿಸಲು ಅವುಗಳ ಕಾಪಿಗಿದ್ದ ನಾಗಗಳ ರತ್ನಕಾಂತಿಯು ಮಂಟಪವನ್ನು ವ್ಯಾಪಿಸಿತು. ಅವುಗಳ ಫೂತ್ಕಾರಕ್ಕೆ ಎಲ್ಲರೂ ಅಂಜಿಹೋದರು. ಬಿಲ್ಲುಗಳಿಂದ ಉರಿಯೂ ಕೆಂಡಗಳೂ ಹೊರಬೀಳುತ್ತಿರಲು ಇವುಗಳನ್ನು ಭೂಚರರಾರೂ ಎತ್ತಲಾರರು; ಸೀತೆಯು ಪ್ರಭಾಮಂಡಲನ ವಶವರ್ತಿಯಾಗುವಳೆಂದು ಖಚರರು ತಮ್ಮ ತಮ್ಮೊಳಗೆ

ಮಾತಾಡುತ್ತಿದ್ದರು. ಅಷ್ಟರಲ್ಲಿ ಅರಸುಮಕ್ಕಳಲ್ಲಿ ಈ ಬಿಲ್ಲುಗಳನ್ನು ಯಾರಾದರೂ ಏರಿಸಿದರೆ ಸೀತೆಯು ಆತನಿಗೆ ಮಾಲೆ ಹಾಕುವಳೆಂದು ಕಂಚುಕಿಯು ಸಾರಿದನು. ಕೆಲವು ಅರಸುಮಕ್ಕಳು ಬಿಲ್ಲುಗಳ ಸಮೀಪಕ್ಕೆ ಹೋಗಿ ಅಂಜಿ ಹಿಂದಿರುಗಿದರು. ದಶರಥನು ರಾಮನ ಮುಖವನ್ನು ನೋಡಲು, ಆತನು ಎದ್ದು ಬಿಲ್ಲಿನ ಸಮೀಪಕ್ಕೆ ಹೋದನು. ಲಕ್ಷ್ಮಣನೂ ಅವನನ್ನು ಹಿಂಬಾಲಿಸಿದನು. ರಾಮಚಂದ್ರನು ಬಿಲ್ಲಿಗೆ ಕೈನೀಡಲು ಕಾಪಿನ ಸರ್ಪಗಳು ಹಿಂಜರಿದುವು. ಬಿಲ್ಲು ಕೈಗೆ ಬಂದಿತು. ಹೆದೆಯೇರಿಸಿ ರಾಮನು ಟಂಕಾರ ಮಾಡಲು ಭೂಮಿಯು ನಡುಗಿತು; ಶೇಷನು ಅದಿರಿದನು; ಕೂರ್ಮನು ಕುಸಿದನು. ಜನಕ-ವಿದೇಹಿ, ದಶರಥ-ಅಪರಾಜಿತೆಯರಿಗೆ ಆನಂದವಾಯಿತು. ಜಾನಕಿಗೆ ಆನಂದದಿಂದ ರೋಮಾಂಚಗಳುಂಟಾದುವು. ಅಣ್ಣನ ಅಪ್ಪಣೆಯಿಂದ ಕೂಡಲೆ ಲಕ್ಷ್ಮಣನು ಸಾಗರಾವರ್ತವನ್ನೆತ್ತಿಕೊಂಡು ಹೆದೆಯೇರಿಸಿ ಟಂಕಾರ ಮಾಡಲು ಭೂಮಿಯು ನಡುಗಿತು. ಅದನ್ನು ಕಂಡು ಚಂದ್ರಧ್ವಜನೆಂಬ ರಾಜನು ಲಕ್ಷ್ಮಣನ ಬಾಹುಸಾಮರ್ಥ್ಯಕ್ಕೆ ಮೆಚ್ಚಿ, ಶಚಿಸದೃಶರಾದ ತನ್ನ ಹದಿನೆಂಟುಜನ ಕನ್ನಿಕೆಯರನ್ನು ಕೊಟ್ಟನು. ಹಲವೂ ವಜ್ರಾವರ್ತವೂ ಜಾನಕಿಯೂ ರಾಮನ ಕೈಸೇರಿದುವು; ಗದೆಯೂ ಸಾಗರಾವರ್ತವೂ ಹದಿನೆಂಟು ಜನ ರಾಜಪುತ್ರಿಯರೂ ಲಕ್ಷ್ಮಣನ ಕೈಸೇರಿದುವು. ಆಗ ದೇವದುಂದುಭಿಗಳು ಮೊಳಗಿದುವು. ಸುರಪುಷ್ಪವೃಷ್ಟಿಯಾಯಿತು. ಮಂಗಳಧ್ವನಿಯು ತುಂಬಿಕೊಂಡಿತು. ಪುಣ್ಯಾಹಸಮಯವು, ಮಾಲೆಯನ್ನಿಕ್ಕೆನ್ನಲು ಜಾನಕಿಯು ಲಜ್ಜೆಯಿಂದ ಮಂದವಾಗಿ ಸಾಗುತ್ತ ರಾಮನಿಗೆ ಮಾಲೆ ಹಾಕಿದಳು. ಸೀತೆಯು ರಾಮನ ಎಡಬದಿಯಲ್ಲಿ ನಾಚಿಕೆಯಿಂದ ಕೆಳಮೋರೆಯಾಗಿ ನಿಂತಿರಲು ದಶರಥನು ಮಕ್ಕಳುಸಹಿತವಾಗಿ ಅಲ್ಲಿಗೆ ಬಂದನು; ಉಳಿದ ಅರಸುಮಕ್ಕಳು ಅಂಜಿ ತಮ್ಮ ತಮ್ಮ ಬೀಡಿಗೆ ತೆರಳಿದರು. ದಶರಥನು ಮಕ್ಕಳು-ಜನಕರನ್ನು ಕೂಡಿಕೊಂಡು ಮಿಥಿಳೆಗೆ ಹೋದನು. ಅವರು ರಾಜಮಾರ್ಗದಿಂದ ಬರುತ್ತಿರುವಾಗ ಉತ್ಸುಕರಾದ ತರುಣಿಯರು ಉಪ್ಪರಿಗೆಗಳ ಮೇಲಿಂದ ಅವರನ್ನು ನೋಡಿ ' ಆನೆಯ ಮೇಲಿರುವಾತನು ದಶರಥನು; ಜಾನಕಿಸಹಿತವಾಗಿ ರಥದಲ್ಲಿ ಬರುತ್ತಿರುವವನು ರಾಮನು; ಕುದುರೆಯ ಮೇಲೆ ದೊಡ್ಡ ಎದೆಯ ಮೇಲೆ ಒಂದೇ ಒಂದು ಏಕಾವಳಿಯನ್ನು ಧರಿಸಿದವನು ಲಕ್ಷ್ಮಣನು; ದಶರಥರಾಜನ ಎರಡೂ ಬದಿಗಳಲ್ಲಿ ಆನೆಯನ್ನೇರಿ ಬರುತ್ತಿರುವವರು ಭರತ-ಶತ್ರುಘ್ನರು; ನಮ್ಮ ಅರಸು ಜನಕರಾಜನು ಕನಕನನ್ನೊಡಗೊಂಡು ಕುದುರೆಯನ್ನೇರಿ ಅಲ್ಲಿ ಬರುತ್ತಿದ್ದಾನೆ; ' ಎಂದು ತಮ್ಮ ತಮ್ಮೊಳಗೆ ಮಾತಾಡುತ್ತಿದ್ದರು. ರಾಮಲಕ್ಷ್ಮಣರ ಮದುವೆಯಾಯಿತು. ಕನಕನು ಊರ್ಮಿಲೆ-ಕನಕಪ್ರಭೆಯರನ್ನು ಭರತನಿಗೆ ಕೊಟ್ಟು ಮದುವೆ ಮಾಡಿದನು. ಅನೇಕ ದಾನಧರ್ಮಗಳನ್ನು ಮಾಡಿದನು.

ಅತ್ತ ಬಿಲ್ಲುಗಳನ್ನೇರಿಸಿದ ಸುದ್ದಿಯು ಇಂದುಗತಿಗೆ ತಿಳಿಯಲು ಎಲ್ಲರಿಗೂ ಆಶ್ಚರ್ಯವಾಯಿತು. ಈ ಸಂಗತಿಯ ಬಗ್ಗೆ ಮತ್ಸರಪಡುವುದು ತಮಗೆ ಯೋಗ್ಯವಲ್ಲೆಂದು ಹೇಳುತ್ತಿರಲು ಪ್ರಭಾಮಂಡಲನು ಖಡ್ಗವನ್ನು ಸೆಳೆದು ಸೀತೆಸಹಿತವಾಗಿ ರಾಮಲಕ್ಷ್ಮಣರನ್ನು ಸೆರೆಹಿಡಿದು ತರುವೆನು; ಯುದ್ಧಮಾಡಿದರೆ ಕೊಲ್ಲುವೆನು ಎಂದು ಹೊರಟನು. ಸೈನ್ಯಸಹಿತವಾಗಿ ವಿದಗ್ಧಪುರಕ್ಕೆ ಬಂದು ಜಾತಿಸ್ಮರನಾಗಿ ಅದು ತನ್ನ ಪಟ್ಟಣವೆಂದು ನೆನೆದು ಮೂರ್ಛೆಗೊಂಡನು. ಖೇಚರರು ಆತನನ್ನು ಇಂದುಗತಿಯ ಅರಮನೆಗೆ ತರಲು ಅಲ್ಲಿ ಸೀತೋಪಚಾರದಿಂದ ಮೂರ್ಛೆ ತಿಳಿದೆದ್ದನು. ಆತನ ಮೂರ್ಛೆಗೆ ಕಾರಣವೇನೆನ್ನಲು ಜಾನಕಿಯು ತನ್ನ ತಂಗಿಯೆಂದೂ, ಜನಕನು ತಂದೆಯೆಂದೂ ವಿದೇಹಿಯು ತಾಯಿಯೆಂದೂ, ರಾಮಲಕ್ಷ್ಮಣರು ತನ್ನ ಮೈದುನರೆಂದೂ, ವ್ಯರ್ಥವಾಗಿ ತಾನು ಸಿಟ್ಟಾದೆನೆಂದೂ ಹೇಳಿದನು.

ನನ್ನ ಪೂರ್ವಜನ್ಮದ ವೈರಿಯು ನನ್ನನ್ನು ಇಲ್ಲಿಗೆ ತಂದುಬಿಟ್ಟನು. ಆ ಮುಂದಿನ ಸಂಗತಿಯೆಲ್ಲವೂ ತಮಗೆ ವಿದಿತವಾಗಿಯೇ ಇದೆ. ನಮ್ಮ ಬಿಲ್ಲುಗಳು ಅನ್ಯರ ಕೈವಶವಾದುವೆಂದು ನಾನು ವ್ಯರ್ಥವಾಗಿ ಸಿಟ್ಟಾದೆನು. ಮಗನ ಮಾತನ್ನು ಕೇಳಿ ಮನಸ್ಸಿನಲ್ಲಿ ವೈರಾಗ್ಯವುಂಟಾಗಿ " ಜಾನಕಿಯು ನಿನಗೆ ದೊರೆಯದಿದ್ದುದು ಒಳಿತಾಯಿತು. ಜನಕನು ಒಪ್ಪಿಕೊಂಡು ಸೀತೆಯನ್ನು ನಿನಗೆ ಕೊಟ್ಟಿದ್ದರೆ, ಅಥವಾ ರಾಮನಿಗೆ ಬಿಲ್ಲನ್ನೆತ್ತುವುದು ಅಸಾಧ್ಯವಾಗಿದ್ದರೆ ನಮಗೆ ದುರ್ಯಶವು ಉಂಟಾಗುತ್ತಿತ್ತು ಮತ್ತು ನಮ್ಮ ಖಚರತೆಯು ನಾಶವಾಗುತ್ತಿತ್ತು. ಆ ಬಿಲ್ಲುಗಳೆರಡು ಹೋದರೂ ನಮ್ಮ ಕೀರ್ತಿಯು ಶುದ್ಧವಾಗಿದೆ. ರಾಮನ ಕೀರ್ತಿಯು ದಿಗಂತದ ವರೆಗೆ ಪಸರಿಸಿತು. ಇನ್ನು ಮೇಲೆ ನಾನು ದೀಕ್ಷೆಗೊಳ್ಳುವೆನು " ಎಂದು ರಾಜ್ಯವನ್ನು ಪ್ರಭಾಮಂಡಳನಿಗೊಪ್ಪಿಸಿ, ಮಹೇಂದ್ರೋದ್ಯಾನದಲ್ಲಿ ಸರ್ವಭೂತಹಿತಮುನಿಗಳ ಹತ್ತಿರ ಜಿನದೀಕ್ಷೆಗೊಂಡನು.

ಇತ್ತ ಜನಕರಾಜನು ತನ್ನ ಮಗಳಿಗೆ ರತ್ನಮಯ ಆಭರಣ-ವಸ್ತ್ರವಾಹನಗಳನ್ನು ಬಳುವಳಿಯಾಗಿ ಕೊಟ್ಟು ರಾಮಾದಿಗಳನ್ನು ಕಳುಹಲು ಅವರು ಬಹು ವೈಭವದಿಂದ ಅಯೋಧ್ಯೆಗೆ ಬಂದು ಸುಖದಿಂದಿದ್ದರು. ಒಂದು ದಿನ ದಶರಥರಾಜನು ಓಲಗಶಾಲೆಯಲ್ಲಿರುವಾಗ ಋಷಿಗಳ ಆಗಮನವನ್ನು ಸೂಚಿಸುವ ದೂತನು ಬಂದು ಅರಳಿದ ಮಲ್ಲಿಗೆಯ ಹೂಗಳನ್ನರ್ಪಿಸಿ ಸರಯೂನದಿಯ ದಂಡೆಯ ಮೇಲಿನ ಮಹೇಂದ್ರೋದ್ಯಾನದಲ್ಲಿ ಸರ್ವಭೂತಿಮುನಿಗಳು ಬಂದಿರುವುದನ್ನು ತಿಳಿಸಿದನು. ಕೂಡಲೆ ದಶರಥರಾಜನು ಸಿಂಹಾಸನದಿಂದೆದ್ದು ಕೈಮುಗಿದು ಪರಿವಾರಸಹಿತವಾಗಿ ಆ ದಿಕ್ಕಿಗೆ ಹೊರಟನು. ದೂರದಲ್ಲಿಯೇ ವಾಹನದಿಂದಿಳಿದು ನಡೆಯುತ್ತ ಬಂದು ಮುನಿಗಳನ್ನು ಬಲಗೊಂಡು ನಮೋಸ್ತುವಾದ ಮೇಲೆ ತನಗೆ ಯೋಗ್ಯವಾದ ಸ್ಥಳದಲ್ಲಿ ಕುಳಿತುಕೊಂಡನು. ಆಗ ಇಂದುಗತಿಮುನೀಂದ್ರನ ಸಮೀಪದಲ್ಲಿ ಪ್ರಭಾಮಂಡಳನನ್ನು ಕಂಡು ಆತನು ಇಂದು

ಗತಿಯ ಮಗನು ಹೇಗಾದನೆಂದು ಕೇಳಿದನು. ಅವರು ಹೀಗೆಂದು ಉತ್ತರವಿತ್ತರು. “ ಈತನು ಜನಕರಾಜನ ಮಗನು, ಸೀತೆಯ ಅಣ್ಣನು. ಜನನಕಾಲದಲ್ಲಿಯೇ ಜನ್ಮಾಂತರರಿಪುವು ಈತನನ್ನು ಕೊಲ್ಲಬೇಕೆಂದು ಎತ್ತಿಕೊಂಡು ಹೋಗಿ ಈ ಖಚ ರೇಶ್ವರನ ಹಾಸಗೆಯ ಮೇಲೆ ಚಲ್ಲಿಕೊಟ್ಟು ಹೋದನು. ಆತನು ಅಲ್ಲಿಯೇ ಬೆಳೆದು ಈಗ ತನ್ನ ಜನ್ಮಸಂಗತಿಯನ್ನು ತಿಳಿದುಕೊಂಡು, ಅದನ್ನು ತಂದೆಗೆ ಹೇಳಲು ಅದುವೇ ವೈರಾಗ್ಯಕ್ಕೆ ಕಾರಣವಾಗಿ ಆತನು ದೀಕ್ಷೆಯನ್ನು ತಾಳಿದನು. ” ಈ ಸಂಗ ತಿಯನ್ನು ವಿಸ್ತಾರವಾಗಿ ಹೇಳಬೇಕೆಂದು ದಶರಥನು ಪ್ರಾರ್ಥಿಸಲು ಮುನಿಗಳು ಹೀಗೆ ಹೇಳಿದರು. ‘ ಧಮುಪುರದಲ್ಲಿ ವಿಮುಂಚಿಯೆಂಬ ಬ್ರಾಹ್ಮಣನಿದ್ದನು. ಆತನ ಹೆಂಡ ತಿಯು ಅನುಮತಿಯು. ಅವರ ಮಗನು ಅತಿಭೂತಿಯು. ಅವನ ಹೆಂಡತಿಯು ಸರಸೆ. ಅವಳು ಸ್ವೈರಿಣಿಯಾಗಿ ಮನೆಯೊಳಗಿನ ಹಣವನ್ನೆಲ್ಲ ತೆಗೆದುಕೊಂಡು ಕಯನೆಂಬ ವಿಟನ ಬೆನ್ನುಹತ್ತಿ ಹೋದಳು. ಸಿಟ್ಟಿನ ಆವೇಶದಿಂದ ಕೂಡಲೆ ಅವ ರನ್ನು ಹುಡುಕಹೊರಟನು ಅತಿಭೂತಿಯು. ವಿಮುಂಚಿ-ಅನುಮತಿ–ಉರಿಗಳು ( ಇವಳು ಸರಸೆಯ ತಾಯಿ ) ಅವರನ್ನು ಹುಡುಕಲು ಹೊರಟರು. ಅವರು ಶಂಭವ ಪುರಕ್ಕೆ ಬಂದು ಅಲ್ಲಿ ಜಿನಾಲಯದಲ್ಲಿ ಸರ್ವಮುನೀಶ್ವರರ ಚರಣೋಪಾಂತ್ಯದಲ್ಲಿ ವಿಮುಂಚಿಯು ದೀಕ್ಷೆವಹಿಸಿದನು. ಅನುಮತಿ ಉರಿಗಳು ಕನಕಶ್ರೀ ಆರ್ಜಿಕೆಯರ ಸನ್ನಿಧಾನದಲ್ಲಿ ದೀಕ್ಷೆವಹಿಸಿದರು. ಅವರೆಲ್ಲರೂ ಯಥೋಕ್ತವಿಧಾನದಿಂದ ಗತಿಸಿ ದೇವ ಗತಿ ಹೊಂದಿದರು. ಅವರಲ್ಲಿ ವಿಮುಂಚಿಯು ಇಂದುಗತಿ ಚರಾಮರನಾದನು. ಅನುಮತಿಯು ಇಂದುಗತಿಯ ಸತಿ ಪುಷ್ಪವತಿ ಚರದೇವಿಯಾದಳು ಉರಿಯು ವಿದೇಹಿಯಾದಳು.

ಇತ್ತ ಸರಸಿಯು ಅನೇಕ ಭವಗಳನ್ನೆತ್ತುತ್ತ ಬಳಾಹಕವನದಲ್ಲಿ ಎರಳೆಯಾಗಿ ಬೇಗೆಯಲ್ಲಿ ಸತ್ತು, ಚಂದ್ರಪುರದ ಚಂದ್ರಧ್ವಜನಿಗೆ ಚಿತ್ರೋತ್ಸವೆಯೆಂಬ ಮಗಳಾ ದಳು. ಕಯನು ದುರ್ಗತಿಸಾಗರದಲ್ಲಿ ಮುಳುಗಿ, ಕ್ರಮೇಳಕನಾಗಿ, ಕಡೆಗೆ ಚಂದ್ರಧ್ವಜನ ಪುರೋಹಿತ ಧೂಮಕೇತುವಿಗೆ ಕಪಿಳನೆಂಬ ಮಗನಾಗಿ ಚಿತ್ರೋತ್ಸ ವೆಯ ಕೂಡ ಬೆಳೆದು, ಅವಳ ಕೂಡ ಶಿಕ್ಷಣ ಹೊಂದಿ, ಇಬ್ಬರೂ ಯೌವನ ಸಂಪನ್ನರಾಗಿ ದೇಹಗಳೆರಡಾದರೂ ಶರೀರವು ಒಂದೇ ಎಂಬಂತಿದ್ದರು. ಅವರು ಕಾಮಮೋಹಿತರಾಗಿ ಓಡಿಹೋಗಿ ವಿದಗ್ಧಪುರವನ್ನು ಸೇರಿದರು.

ಇತ್ತ ಅತಿಭೂತಿಯು ಭವನಗಳನ್ನೆತ್ತುತ್ತ ತಾರಾಕ್ಷವೆಂಬ ಸರೋವರದಲ್ಲಿ ಹಂಸನಾಗಿ ಪಂಚನಮುಸ್ಕಾರಗಳನ್ನು ಕೇಳಿ ಕಿನ್ನರಲೋಕದಲ್ಲಿ ಕುಂಡಳಮಂಡಿತ ನಾಗಿ ಹುಟ್ಟಿದನು. ಆತನು ಕುದುರೆಯೇರಿ ಬರುತ್ತಿರುವಾಗ ಚಿತ್ರೋತ್ಸವೆಯನ್ನು ಕಂಡು ಕಪಿಳನನ್ನು ಅಲ್ಲಿಂದ ಹೊರಡಿಸಿ ಅವಳನ್ನು ಮದುವೆಯಾಗಿ ಇಷ್ಟ ವಿಷಯ ಸುಖವನ್ನನುಭವಿಸುತ್ತಿರಲು ಅನರಣ್ಯನ ಸಾಮಂತನು ಅವರನ್ನು ಹೊರಡಿಸಿದನು.

ಅವರಿಬ್ಬರು ಜಿನಮುನಿಗಳ ಹತ್ತಿರ ಅಣುವ್ರತಗಳನ್ನು ತೆಗೆದುಕೊಂಡು ಅವುಗಳ ಮಹಿಮೆಯಿಂದ ಮರುಜನ್ಮದಲ್ಲಿ ದೇವಗತಿ ಪಡೆದರು. ಆಯುರವಸಾನದಲ್ಲಿ ಜನಕ ಭೂಪಾಲನ ಹೆಂಡಿತಿ ವಿದೇಹಿಗೆ ಅವಳಿಮಕ್ಕಳಾಗಿ ಜನಿಸಿದರು. ಕಪಿಳನು ತನ್ನ ವಲ್ಲಭೆಯನ್ನು ನೆನೆಯುತ್ತ ಬಾಹ್ಯತಪವನ್ನಾಚರಿಸಿ ಅಮರತೆ ಪಡೆದನು. ಕುಂಡಲ ಮಂಡಿತನು ವಿದೇಹಿಗೆ ಜನಿಸಿದುದನ್ನು ತಿಳಿದು ಕಪಿಳನು ಭವಬದ್ಧವೈರದಿಂದ ಅವನನ್ನು ಎತ್ತಿಕೊಂಡು ಹೋದನು. ಆತನ ಮುಖವನ್ನು ನೋಡಿದಕೂಡಲೆ ಕಪಿಳನ ಸಿಟ್ಟು ಇಲ್ಲದಂತಾಯಿತು. ಆತನು ತನ್ನ ಕಿವಿಯೊಳಗಿನ ಕುಂಡಲುಗಳನ್ನು ಅವನಿಗಿಡಿಸಿ ಪರ್ಣಲಘುವಿದ್ಯೆಯಿಂದ ಇಂದುಗತಿಯ ಹಾಸಗೆಯಲ್ಲಿ ಬೀಳುವಂತೆ ಮಾಡಿಹೋದನು. ಭವಬದ್ಧಸ್ನೇಹದಿಂದ ಪುಷ್ಪವತಿಯು ತಾನೇ ಹೆತ್ತಂತೆ ಅವನನ್ನು ಪಾಲಿಸಿ ವಿದ್ಯೆಕಲಿಸಿ ಬೆಳೆಯಿಸಿದಳು. ರಾಮಾಚ್ಯುತರು ನಮಿವಿನಮಿಗಳಿಂದ ತಮಗೆ ದೊರೆತ ಎರಡೂ ಬಿಲ್ಲುಗಳನ್ನು ಏರಿಸಿದರೆಂಬ ಸಿಟ್ಟಿನಿಂದ ವಿದಗ್ಧಪುರದ ಮೇಲೆ ಏರಿ ಹೋಗುತ್ತಿರುವಾಗ ಆ ಪಟ್ಟಣದ ಸಮೀಪದಲ್ಲಿ ಜಾತಿಸ್ಮರನಾಗಿ ಜಿನಮತದ ಮಹಿಮೆಯನ್ನೂ ತನ್ನ ಬಾಂಧವರ ಭವಾವಳಿಯನ್ನೂ ಕೇಳಿ ಬೆರಗಾಗಿ ನಮಿಸಿದನು. ದಶರಥನು ಸಭೆಸಹಿತ ಬೆರಗಾಗಿ ನಮಿಸಿದನು. ಸೀತೆಯು ಆನಂದದಿಂದ ಪುಳಕಿತಳಾಗಿ ಅಣ್ಣನಿಗೂ ಮುನಿಗಳಿಗೂ ನಮಿಸಿದಳು. ಪ್ರಭಾಮಂಡಳನು ದಶರಥನನ್ನು ನಮಿಸಿದನು. ರಾಮಲಕ್ಷ್ಮಣರು ಆತನನ್ನು ಪ್ರೀತಿಯಿಂದ ಅಪ್ಪಿಕೊಂಡರು. ದಶರಥನು ಮುನಿಯ ಅಪ್ಪಣೆಯಿಂದ ಎಲ್ಲರನ್ನೊಡಗೊಂಡು ಅಯೋಧ್ಯೆಗೆ ಹೋಗಿ ಜನಕವಿದೇಹಿಯರನ್ನು ಕರೆಯಿಸಿಕೊಂಡು ಅವರಿಗೆ ಪ್ರಭಾಮಂಡಳನನ್ನು ಪುತ್ರನೆಂದು ತೋರಿಸಿದನು. ಅದೇ ಪುತ್ರನನ್ನು ಪಡೆದಂತೆ ಅವರಿಗೆ ಆನಂದವಾಯಿತು. ಕೆಲವು ದಿನಗಳವರೆಗೆ ಅವರು ಅಲ್ಲಿಯೇ ಇದ್ದು ಜನಕರಾಜನು ಪರಿವಾರ ಸಹಿತವಾಗಿ ಮಿಥಿಳೆಗೆ ಹೋದನು. ಅಲ್ಲಿ ಮಿಥಿಳೆಯ ರಾಜ್ಯವನ್ನು ಕನಕನಿಗೆ ಒಪ್ಪಿಸಿ ಪ್ರಭಾಮಂಡಳಸಹಿತನಾಗಿ ಜನಕನು ರಥನೂಪುರಚಕ್ರವಾಳಪುರಕ್ಕೆ ಹೋದನು. ಒಂದು ದಿನ ದಶರಥನು ಮುನಿಗಳ ಬಳಿಗೆ ಬಂದು ತನ್ನ ಭವಾವಳಿಯನ್ನು ಕೇಳಲು ಅವರು ಹೀಗೆ ಹೇಳಿದರು.

" ನೀನು ಹಿಂದಿನ ಎಂಟನೆಯ ಭವದಲ್ಲಿ ಚಂದ್ರಪುರದ ಚಂದ್ರಧ್ವಜನ ಹೆಂಡತಿಗೆ ಧಾರಣನೆಂಬ ಮಗನಾದೆ. ನಿನ್ನ ಹೆಂಡತಿ ಸುಧರ್ಮೆಯ ಸಂಸರ್ಗದಿಂದ ಜಿನಮತವನ್ನು ಧರಿಸಿ ಅಲ್ಲಿಂದ ಬಂದು ಧಾತಕೀಷಂಡದೊಳಗಿನ ಉತ್ತರ ಕುರು ದೇಶ ದೇಶದಲ್ಲಿ ಭೋಗಭೂಮಿಜನಾದೆ. ಅಲ್ಲಿಂದ ಸೌಧರ್ಮಕಲ್ಪದಲ್ಲಿ ಎರಡು ಸಾಗರ ಪರ್ಯಂತ ದೇವನಾಗಿದ್ದೆ. ಕ್ರಮವಾಗಿ ಅಲ್ಲಿಂದ ಬಂದು ಪುಷ್ಕಳಾವತೀ ದೇಶದ ಪುಂಡರೀಕಿಣಿಪುರದಲ್ಲಿ ನಂದಿಘೋಷ ರಾಜನಿಗೂ ಆತನ ಸತಿ ವಸುವತಿಗೂ ಸುನಂದಿವರ್ಧನನಾದೆ. ನಿನ್ನ ತಂದೆಯು ದೀಕ್ಷೆಗೊಂಡು ಮಧ್ಯಗ್ರೈವೇಯಕದೊಳಗೆ ಅಹ

ಮಿಂದ್ರನಾದನು. ನೀನು ನಿನ್ನ ತಂದೆಯ ಗುರುಗಳಾದ ಯಶೋಧರ ಮುನಿಚರಣ ಕಾರುಣ್ಯದಿಂದ ಬ್ರಹ್ಮಕಲ್ಪದಲ್ಲಿ ಹುಟ್ಟಿದೆ. ಆಯುರವಸಾನದಲ್ಲಿ ಅಲ್ಲಿಂದ ಬಂದು ಅಪರವಿದೇಹದ ಶಶಿಪುರದ ಸುರತ್ನಮಾಲಿಯ ಸತಿ ವಿದ್ಯುಲ್ಲತೆಗೆ ಸುರ್ಯಂಜಯ ನೆಂಬ ಮಗನಾದೆ. ಕಡೆಗೆ ತಿಲಕಸೌಂದರಾಚಾರ್ಯರ ಕರುಣದಿಂದ ಮಹಾಶುಕ್ರ ದಲ್ಲಿ ಉದಯಿಸಿದೆ. ಆಯುರವಸಾನದಲ್ಲಿ ಅಲ್ಲಿಂದ ಬಂದು ಅನರಣ್ಯನ ಸತಿ ಪೃಥ್ವೀಮತಿ ದೇವಿಗೆ ದಶರಥನಾಗಿರುವೆ. ನಿನ್ನ ನಾಲ್ಕನೆಯ ಭವದ ತಂದೆ ನಂದಿ ಘೋಷಯತಿಯು ಮಧ್ಯಮಗ್ರೈವೇಯಕದಿಂದ ಬಂದು ನಾವಾದೆವು. ನಿನ್ನ ಆರ ನೆಯ ಭವದ ತಂದೆ ಸುರತ್ನಮಾಲಿಯು ಸಿಂಹಪುರದ ವಜ್ರಾಲೋಚನನನ್ನು ಗೆಲ್ಲ ಬೇಕೆಂದು ಹೋಗುತ್ತಿರಲು ಒಬ್ಬ ದೇವನು ಆತನ ಮುಂದೆ ಬಂದು ಯುದ್ಧವನ್ನು ನಿಲ್ಲಿಸೆಂದು ಈ ಕಥೆಯನ್ನು ಹೇಳಿದನು. ಭರತಖಂಡದೊಳಗಿನ ವಿಜಯಾರ್ಧಕ ಶಶಿ ಪುರದ ಅರಸನು ಶ್ರೀಭೂತಿ ಸುಭೂತಿಯ ಮಗ ಉಪಮನ್ಯುವು ಆತನ ಪುರೋ ಹಿತನು. ಇವರಿಬ್ಬರೂ ಕಮಳಗರ್ಭಮುನಿಗಳ ಹತ್ತರ ಮಧುಮಾಂಸ ಬಿಟ್ಟ ವ್ರತ ತೆಗೆದುಕೊಂಡರು. ಉಪಮನ್ಯುವು ವ್ರತಭಂಗದಿಂದ ಭವಸಾಗರದಲ್ಲಿ ತೊಳಲುತ್ತ ಮಂದಾರಣ್ಯದಲ್ಲಿ ಚಿಗರೆಯಾಗಿ ಹುಟ್ಟಿ ದಾವಾನಲದಲ್ಲಿ ಸಿಕ್ಕು ಸತ್ತು ಕಾಂಭೋಜ ದೇಶದಲ್ಲಿ ಮತಿಹೀನ ಕಪಿಂಗಳನೆಂಬ ಬೇಡನಾದನು. ಇತ್ತ ಉಪಮನ್ಯುವು ಮುಂದೆ ಆನೆಯಾದನು. ಅಲ್ಲಿಂದ ಸುಭೂತಿರಾಜನ ಮಗ ಅರಿಂದಮನಾದನು. ಅಲ್ಲಿ ಕಮಳ ಗರ್ಭ ಜಿನಮುನಿಗಳವರನ್ನು ಕಂಡು ಜಾತಿಸ್ಮರನಾಗಿ ಸತ್ತು ಸ್ವರ್ಗದಲ್ಲಿ ಉದಯಿಸಿ ರಲು ಶ್ರೀಭೂತಿಯು ನರಕಾಗಮನವನ್ನು ಅವಧಿಜ್ಞಾನದಿಂದ ತಿಳಿದು ಅವನನ್ನು ಪ್ರತಿಬೋಧಿಸಿದನು. ಆತನು ಪ್ರತಿಬೋಧಿಸಲು ನೀನು ಬಂದು ಸುರತ್ನಮಾಲಿಯಾದೆ. ಆ ದಿವಿಜನು ಮತ್ತೊಮ್ಮೆ ತಿಳಕಸೌಂದರಮುನಿಗಳ ಪಾದಕರುಣದಿಂದ ಹತ್ತನೆಯ ಸ್ವರ್ಗದಲ್ಲಿ ಅಮರೇಂದ್ರನಾದನು. ಆ ಉಪಮನ್ಯು ಚರಾಮರನೂ ನಿನ್ನ ವೈದನ ರಾದ ಜನಕಕನಕರಾದರು. ಈ ನಾಲ್ವರು ನಿನ್ನ ಭವಾಂತರ ಸ್ನೇಹಿತರು." ಎಂದು ಹೇಳಿದುದನ್ನು ಕೇಳಿ ದಶರಥನು ಆನಂದಪಟ್ಟು ಮುನಿನಾಥನನ್ನು ಬೀಳ್ಕೊಂಡು ಅಯೋಧ್ಯೆಗೆ ಹೋದನು.

---

## ೫ ನೆಯ ಸಂಧಿ.

ದಶರಥನು ರಾಮನನ್ನು ಆಸ್ಥಾನಕ್ಕೆ ಕರೆಯಿಸಿಕೊಂಡು ಮನುಕುಲದರಸರು ರಾಜ್ಯವನ್ನು ತಮ್ಮ ಮಕ್ಕಳಿಗೊಪ್ಪಿಸಿ ದೀಕ್ಷೆವಹಿಸಿದ ಕ್ರಮವನ್ನೂ, ಸಂಸಾರದಿಂದ ನರಕ ಮತ್ತು ಜನ್ಮಾಂತರಗಳೆಂದು ಧರ್ಮವನ್ನೂ, ತನ್ನ ಭವಾವಳಿಯನ್ನೂ ಆತ ನಿಗೆ ಹೇಳಿ ತಾನು ಜಿನದೀಕ್ಷೆ ವಹಿಸಲು ಮತ್ತು ರಾಮನು ರಾಜ್ಯಭಾರವನ್ನು ವಹಿ ಸಲು ಒಪ್ಪಿಕೊಳ್ಳುವಂತೆ ಮಾಡಿದನು. ಅದನ್ನು ಕೇಳಿ ಭರತನೂ ವೈರಾಗ್ಯಪರನಾಗಿ ತಂದೆಯ ಕೂಡ ಹೊರಡುವ ತನ್ನ ಬಯಕೆಯನ್ನು ತಿಳಿಸಿದನು. ಅದನ್ನು ಕೇಳಿ

ಒಬ್ಬ ದಾಸಿಯು ಕೈಕೆಗೆ ಈ ಸುದ್ದಿಯನ್ನು ಹೇಳಿ ಅವಳನ್ನು ಕಾತರಗೊಳಿಸಿದಳು. ಅವಳಲ್ಲಿ ಸ್ವಾಭಾವಿಕವಾಗಿ ಸವತಿಮತ್ಸರವು ಹುಟ್ಟಿತು. ಅವಳು ಹೀಗೆ ಮನಸಿನಲ್ಲಿ ಚಿಂತಿಸುತ್ತಿರಲು, ದಶರಥನು ತನಗೆ ಕೊಟ್ಟ ಎರಡು ವರಗಳ ನೆನಪಾಯಿತು. ಕೂಡಲೆ ಅವಳು ಓಲಗಶಾಲೆಗೆ ಬಂದು ವರಗಳನ್ನು ಕುರುಣಿಸಬೇಕೆಂದು ಕೇಳಿಕೊಂಡಳು. 'ದೀಕ್ಷಾವಿಘಾತವನ್ನು ಬಿಟ್ಟು ಬೇಕಾದುದನ್ನು ಕೇಳಿ'ನಲು ಅವಳು 'ಭರತನಿಗೆ ಹದಿನಾಲ್ಕು ವರುಷ ಸಾಮ್ರಾಜ್ಯಪದವನ್ನು ಕೊಡಬೇಕೆಂ'ದಳು. ದಶರಥನಿಗೆ ವಜ್ರಾಘಾತವಾದಂತಾಯಿತು. ತಾಯಿಯ ನಡತೆಯನ್ನು ಕಂಡು ಭರತನಿಗೆ ನಾಚಿಕೆಯಾಯಿತು. ಜನರೆಲ್ಲರೂ ಕೈಕೆಯನ್ನು ನಿಂದಿಸಹತ್ತಿದರು ರಾಮಚಂದ್ರನು ಭರತನ ದೆಸೆಯಿಂದ ರಾಜ್ಯವನ್ನು ಬಿಟ್ಟುಹೋಗುವೆನೆಂದು ಕೈಕೆಗೆ ಸಂತೋಷದಿಂದ ಹೇಳಿ ಅವಳನ್ನು ಸಮಾಧಾನಗೊಳಿಸಿ ತಂದೆಗೆ ರಾಜನೀತಿಯನ್ನು ಹೇಳಿ ಆತನನ್ನೂ ಸಮಾಧಾನಗೊಳಿಸಿದನು. ದಶರಥನು ಭರತನಿಗೆ ಬುದ್ಧಿವಾದವನ್ನು ಹೇಳಿ ರಾಜ್ಯದಲ್ಲಿ ನೆಲಿಸುವಂತೆ ಮಾಡಿದನು. ರಾಮನು ಭರತನನ್ನೂ ಸಮಾಧಾನಗೊಳಿಸಿದನು. ಇದನ್ನೆಲ್ಲ ಕಂಡು ಸಭಿಕರೆಲ್ಲರೂ ತಾನಾಗಿಯೇ ಬಂದ ರಾಜ್ಯಲಕ್ಷ್ಮಿಯನ್ನು ತಮ್ಮನಿಗೆ ಕೊಟ್ಟುಬಿಡುವ ರಾಮನಂತಹ ಪುಣ್ಯಾತ್ಮರು ಮತ್ತಾರೂ ಇಲ್ಲವೆಂದು ಬೆರಗಾದರು. ಲಕ್ಷ್ಮಣನು ಕೋಪಾವಿರ್ಭಾವವನ್ನು ತೋರಲು ರಾಮನು ಕಡೆಗಣ್ಣಿಂದ ಅವನನ್ನು ಸುಮ್ಮನಿರಿಸಿ ದಶರಥನಿಗೆರಗಿ ದಿಗ್ವಿಜಯಕ್ಕೆ ಹೋಗುವೆನೆಂದು ಬೀಳ್ಕೊಂಡನು. ಲಕ್ಷ್ಮಣನೂ ಹೊರಟನು. ಅದನ್ನು ಕಂಡು ಸಭಿಕರೆಲ್ಲರು ದಶರಥನ ಮುಖವನ್ನು ನೋಡುತ್ತಿರುವಾಗಲೇ ಆತನು ಮೂರ್ಛೆಗೊಂಡನು. ಭರತನೂ ಮೂರ್ಛಾಪರವಶನಾದನು. ಸಭೆಯೊಳಗಿನ ಅರಸರೆಲ್ಲರೂ ಅವರಿಗೆ ಶೀತೋಪಚಾರಗಳನ್ನು ಮಾಡುತ್ತಿದ್ದರು. ಇದನ್ನೆಲ್ಲ ಕೇಳಿದ ಸುಮಿತ್ರೆಯು ಅಪರಾಜಿತೆಯ ಬಳಿಗೆ ಹೋಗಿ ಎಲ್ಲವನ್ನೂ ಆಮೂಲಾಗ್ರವಾಗಿ ಹೇಳಿದಳು. ಅವರಿಬ್ಬರು ಹೀಗೆ ಮಾತಾಡುತ್ತಿರುವಾಗಲೇ ರಾಮಲಕ್ಷ್ಮಣರು ಬಂದು, ತಾಯಿಯಂದಿರಿಗೆ ನಮಿಸಿ, ಅವರ ಆಶೀರ್ವಾದ ಪಡೆದು ಕುಳಿತುಕೊಂಡ ಮೇಲೆ ಲಕ್ಷ್ಮಣನು ಅಪರಾಜಿತೆಗೆ ನಡೆದುಹೋದ ಸಂಗತಿಯನ್ನೆಲ್ಲ ಹೇಳಿದನು. ಅದನ್ನು ಕೇಳಿ ಕೌಸಲ್ಯೆಯು ಮೂರ್ಛೆಗೊಂಡಳು. ತುಸುಹೊತ್ತಿನಲ್ಲಿಯೇ ಮೂರ್ಛೆತಿಳಿದೆದ್ದು ದುಃಖಿಸಹತ್ತಿದಳು. 'ರಾಮನು ಚರಮದೇಹಿಯು. ಆತನಿಗೆ ಅಪಾಯವಿಲ್ಲ. ಆತನು ದಿಗ್ವಿಜಯ ಮಾಡಿ, ರಾಜ್ಯವನ್ನು ಸಂಪಾದಿಸಿ ಅಲ್ಲಿಗೆ ನಿಮ್ಮನ್ನು ತರಿಸಿಕೊಳ್ಳಲಾರನೇ ? ನೀವು ದುಃಖಿಸಬೇಡಿ. ನಾನೂ ಅಣ್ಣನ ಕೂಡ ಹೋಗುವೆನು. ಅಮ್ಮ ಸುಮಿತ್ರಾದೇವಿಯು ಇಲ್ಲಿ ನಿಮ್ಮ ಸೇವೆಗೆ ಇದ್ದೇ ಇರುವಳು. ಭರತನು ನಿಮ್ಮ ಕಡುಭಕ್ತನು. ಅದುದರಿಂದ ನಮಗೆ ಅಪ್ಪಣೆ ಕೊಡಬೇಕೆಂ'ದು ಬೇಡಿಕೊಳ್ಳಲು ಕೌಸಲ್ಯೆಯು ಸಮಾಧಾನಗೊಂಡು ಸೀತೆಯನ್ನು ಸಂಗಡ ಕರಕೊಂಡು ಹೋಗುವಂತೆ ಹೇಳಿ ಹರಿಸಿ ತಾಯಿಯಂದಿರಿಬ್ಬರೂ ಆಶೀರ್ವದಿಸಿ ಕಳುಹಿದರು.

ರಾಮ-ಲಕ್ಷ್ಮಣ-ಸೀತೆಯರು ಎಲ್ಲರ ಅಪ್ಪಣೆ ಪಡೆದು ಹೊರಟು ಬರುತ್ತಿರುವಾಗ ಜನರೆಲ್ಲರಿಗೆ ಭಯ-ಕೌತುಕ-ಕುತೂಹಲ ಮುಂತಾದ ಭಾವಗಳುಂಟಾಗಿ ಅವರನ್ನು ನೋಡಿ ದುಃಖಿಸಹತ್ತಿದರು. ಅವರು ಪೇಟೆಯ ಮಾರ್ಗವನ್ನು ದಾಟಿ ಊರಹೊರಗಿನ ಚೈತ್ಯಾಲಯಕ್ಕೆ ಹೋಗಿ ಅಲ್ಲಿ ಪರಮಾತ್ಮನನ್ನು ಬಲಗೊಂಡು, ಸಾವಿರಾರು ಸ್ತೋತ್ರಗಳಿಂದ ಸ್ತುತಿಸಿ ಸಂತೋಷಗೊಂಡು ಯೋಗ್ಯ ಸ್ಥಳದಲ್ಲಿ ಮಲಗಿಕೊಂಡರು. ಮರುದಿನ ಬೆಳಗಿನಲ್ಲೆದ್ದು ಜಿನಪಾದಗಳಿಗೆ ನಮಿಸಿ ಗಂಧೋದಕವನ್ನು ಧರಿಸಿ ಅಪ್ಪಣೆಪಡೆದು ಬಿಲ್ಲುಬಾಣಗಳನ್ನು ತೆಗೆದುಕೊಂಡು, ಜಾನಕಿಯನ್ನು ನಡುವಿರಿಸಿ ಹೊರಟರು. ಅವರು ದಕ್ಷಿಣದಿಕ್ಕಿಗೆ ಹೊರಟಿರಲು ಪುರಜನರೆಲ್ಲರೂ ಬಂದು ನಮಿಸುತ್ತಿರಲು, ಅವರ ಕೂಡ ಮಾತಾಡಿ ಅಪ್ಪಣೆ ಪಡೆಯುತ್ತಿರಲು ಭರತನು ಬಂದು ತಂದೆಯು ದುಃಖದಿಂದ ವೈರಾಗ್ಯಪರನಾಗಿ ದೀಕ್ಷೆಗೊಂಡುದನ್ನೂ, ಕೌಸಲ್ಯೆಯು ದುಃಖಿಸುತ್ತಿರುವುದನ್ನೂ ತಿಳಿಸಿದನು. ಕೌಸಲ್ಯೆಯು ಶೋಕಾಕುಲೆಯಾಗಿರುವುದನ್ನು ತಿಳಿದು ಕೈಕೆಯೂ ಪಶ್ಚಾತ್ತಾಪಪಟ್ಟು ರಾಮನಿಲ್ಲದೆ ರಾಜ್ಯವು ಒಪ್ಪಲಾರದೆಂದು ಬಗೆದು ಆತನೆಡೆಗೆ ಬಂದಳು. ರಾಮನು ಅವಳಿಗೆ ನಮಸ್ಕಾರ ಮಾಡಲು, ಅವಳು ಆತನಿಗೆ ಆಶೀರ್ವದಿಸಿ ಅಯೋಧ್ಯೆಗೆ ತಿರುಗಿ ಬರಬೇಕೆಂದು ಬೇಡಿಕೊಂಡಳು. 'ಹಾಗೆ ಮಾಡಿದರೆ ವಚನಭಂಗವಾಗುವುದು. ಮನುಕುಲದಲ್ಲಿ ಹುಟ್ಟಿದವರಿಗೆ ಅದು ಯೋಗ್ಯವಲ್ಲ' ಎಂದು ರಾಮನು ಹೇಳಿ ಅವಳು ಅದಕ್ಕೆ ಒಪ್ಪುವಂತೆ ಮಾಡಿ, ತನ್ನಾಣೆಯಿಂದ ಭರತನು ಮುಂದೆ ಮಾತಾಡದಂತೆ ಮಾಡಿ, ಭರತನಿಗೆ ರಾಜ್ಯವನ್ನು ಕೊಟ್ಟು ಆತನನ್ನು ಅಯೋಧ್ಯೆಗೆ ತಿರುಗಿ ಕಳುಹಿ, ಪರಿಜನ ಪುರಜನರನ್ನು ಹಿಂದಿರುಗಿಸಿ ತಾನು ಮುಂದೆ ಹೊರಟನು.

---

## ೬ನೆಯ ಸಂಧಿ.

ರಾಮ-ಲಕ್ಷ್ಮಣ-ಸೀತೆಯರು ಮುಂದೆ ಸಾಗಿ ಗಂಗಾನದಿಯನ್ನು ದಾಟಿ ದಕ್ಷಿಣ ದಿಕ್ಕಿಗೆ ಪಾದಚಾರಿಗಳಾಗಿ ನಡೆದರು. ಕೋಮಲೆ ಸೀತೆಯು ಬರಿಗಾಲಿನಿಂದ ನಡೆದು ಕಳವಳಗೊಂಡಳು. ಲಕ್ಷ್ಮಣನು ದಾರಿಯ ತುಂಬ ಚಿಗುರುಗಳ ಹಾಸಿಗೆಯನ್ನು ಹಾಕಿ ಸೀತೆಯು ನಡೆಯುವಂತೆ ಮಾಡಿದನು. ಹಣ್ಣುಹಂಪಲಗಳನ್ನು ಸವಿದು, ಸರೋವರದೊಳಗಿನ ತಿಳಿನೀರು ಕುಡಿದು ಅವರು ಮಾರ್ಗಕ್ರಮಣ ಮಾಡುತ್ತ ಚಿತ್ರಕೂಟಕ್ಕೆ ಬಂದರು. ಆ ಪರ್ವತವನ್ನು ಬಲಕಿಕ್ಕಿ ಮುಂದೆ ಸಾಗಲು ಒಂದು ನಿರ್ಜನವಾದ ಪ್ರದೇಶವನ್ನು ಕಂಡು ತೋಟಪಟ್ಟಿಗಳಲ್ಲಿ ಬೆಳೆಬಂದ ಹೊಲಗಳಲ್ಲಿ ಊರುಕೇರಿಗಳಲ್ಲಿ ಯಾರೂ ಇಲ್ಲದುದನ್ನು ಕಂಡು ಆಶ್ಚರ್ಯಪಟ್ಟರು. ಪರರಾಜರ ದಾಳಿಯಿಂದ ಹೀಗಾಗಿರಬಹುದೆಂದು ಲಕ್ಷ್ಮಣನು ಭಾವಿಸಿದನು. ಅಷ್ಟರಲ್ಲಿ ಎದುರುಮಾರ್ಗದಿಂದ ಭಯಚಕಿತನಾದ ದೂತನೊಬ್ಬನು ಬಂದುದನ್ನು ಕಂಡು

ಪ್ರೀತಿಯಿಂದ ಅವನಲ್ಲಿ ವಿಶ್ವಾಸವುಂಟಾಗುವಂತೆ ಮಾಡಿ ಲಕ್ಷ್ಮಣನು ‘ ಎಲ್ಲ ವೃತ್ತಾಂತವನ್ನು ಹೇಳು ’ ಎಂದನು. ‘ ಇದು ಅವಂತೀ ದೇಶವು. ಉಜ್ಜಯನಿಯು ಇದರ ರಾಜಧಾನಿ. ಅರಸನು ಸಿಂಹೋದರನು. ಈ ದಶಪುರದ ಅರಸನು ವಜ್ರಕರ್ಣನು. ಆತನು ಶ್ರಾವಕರಿಗಲ್ಲದೆ ವಂದಿಸನು. ಅದನ್ನು ಕೇಳಿ ಸಿಂಹೋದರನು ದಶಪುರವನ್ನು ಮುತ್ತಿ ಉಪಸರ್ಗಕ್ಕಾರಂಭಿಸಿದ್ದಾನೆ. ಆದರೂ ವಜ್ರಕರ್ಣನು ನಮೋಸ್ತು ಎನ್ನುವುದಿಲ್ಲ. ಆ ಊರು ಇಲ್ಲಿ ಸಮೀಪದಲ್ಲಿಯೇ ಕಾಣುವುದು. ದೇಶವೆಲ್ಲವೂ ಹಾಳಾಯಿತು ’ ಎಂದು ಹೇಳಿ ಅಪ್ಪಣೆ ಪಡೆದು ಹೋದನು. ಅವರು ವಜ್ರಕರ್ಣನನ್ನು ಸಂರಕ್ಷಿಸಬೇಕೆಂದು ಅಲ್ಲಿಂದ ಹೊರಟು ದಶಪುರಕ್ಕೆ ಬಂದರು. ಜಿನಾಲಯಕ್ಕೆ ಹೋಗಿ ಪ್ರದಕ್ಷಿಣೆ ಹಾಕಿ ಜಿನನನ್ನು ನುತಿಸಿ ಕುಳಿತುಕೊಂಡ ಮೇಲೆ ರಾಘವನು ಲಕ್ಷ್ಮಣನ ಮುಖನೋಡಲು ಆತನು ಅಪ್ಪಣೆಪಡೆದು ಬಿಲ್ಲುಬಾಣಗಳನ್ನು ಬಿಟ್ಟು ಹೊರಟನು. ಸೈನಿಕರು ಪಟ್ಟಣಕ್ಕೆ ಲಗ್ಗೆ ಹತ್ತಿರಲು ಅದನ್ನು ನೋಡುತ್ತ ಸಿಂಹೋದರನು ಬಂಡೆಗಲ್ಲಿನ ಮೇಲೆ ನಿಂತಿದ್ದನು. ಆಗ ಲಕ್ಷ್ಮೀಧರನು ಅವನ ಬಳಿಗೆ ಹೋಗಿ ಹೀಗೆಂದನು:—‘ ವಜ್ರಕರ್ಣನು ರತ್ನತ್ರಯಾರಾಧಕರಿಗಲ್ಲದೆ ಇತರರನ್ನು ವಂದಿಸನು. ಆದುದರಿಂದ ನಿನ್ನ ಜೀವದ ಮತ್ತು ಅರಸುತನದ ಆಸೆಯಿದ್ದರೆ ಮುತ್ತಿಗೆ ತೆಗೆದು ಹೋಗೆಂದು ತಿಳುಹಲು ರಾಘವನು ನನ್ನನ್ನು ಕಳುಹಿದ್ದಾನೆ.’ ಅದನ್ನು ಕೇಳಿ ಸಿಂಹೋದರನು ‘ ರಾಘವನು ಯುದ್ಧಮಾಡಿಯೇ ಮುತ್ತಿಗೆ ತೆಗೆಯಿಸಲಿ ’ ಎಂದು ಕೋಪಾಟೋಪದಿಂದ ಲಕ್ಷ್ಮಣನನ್ನು ಕಡ್ಗದಿಂದ ಹೊಡೆಯಹೋದನು. ಲಕ್ಷ್ಮಣನು ಅನುವು ಸಾಧಿಸಿ ಹೊಡತ ತಪ್ಪಿಸಿಕೊಂಡು ಆತನನ್ನು ಹಿಡಿದೆಳೆದು ಕಂಕುಳಲ್ಲಿ ಸಿಕ್ಕಿಸಿಕೊಂಡು ಎಳೆಯುತ್ತ ನಡೆದನು. ಅದನ್ನು ಕಂಡು ತನ್ನ ಮೇಲೆ ಬೀಳುತ್ತಿರುವ ಜನರನ್ನು ಸದೆಬಡೆದು ಮನುಷ್ಯರನ್ನು ಮನುಷ್ಯರಿಂದ ಕುದುರೆಗಳನ್ನು ಕುದುರೆಗಳಿಂದ ಆನೆಗಳನ್ನು ಆನೆಗಳಿಂದ ಅಪ್ಪಳಿಸಿ ಕೊಂದು ಸಿಂಹೋದರನನ್ನು ರಾಮನ ಬಳಿಗೆ ತಂದನು. ಅವನ ಹೆಂಡಂದಿರು ರಾಮನ ಬಳಿಗೆ ಬಂದು ಅಳುತ್ತ ಪತಿದಾನ ಬೇಡಹತ್ತಿದರು. ಅವರಿಗೆ ಅಂಜಬೇಡಿರೆಂದು ಕೇಶವನು ಹೇಳುತ್ತಿರಲು, ಇವರು ಕಾರಣಪುರುಷರೆಂದು ತಿಳಿದು ಸಿಂಹೋದರನು ಶರಣಾಗತನಾದನು. ‘ ದುರಾಗ್ರಹವನ್ನು ಬಿಟ್ಟು ವಜ್ರಕರ್ಣನಲ್ಲಿ ಸ್ನೇಹ ಬೆಳಸು ’ ಎಂದು ಹೇಳಿ ಆತನಿಗೆ ಅಭಯವಿತ್ತನು. ಇದನ್ನೆಲ್ಲ ನೋಡುತ್ತಿದ್ದ ವಜ್ರಕರ್ಣನು ಇವರು ರಾಮಾಚ್ಯುತರು ಆಗಿರುವುದು ನಿಶ್ಚಯವು. ಅವರೇ ಬಂದು ಈ ಉಪಸರ್ಗವನ್ನು ಬಿಡಿಸಿದರು, ಎನ್ನುತ್ತ ಪುರಜನಪರಿಜನಸಹಿತ ಬಂದು ಜಿನನಿಗೆ ನಮಿಸಿ ಆ ತರುವಾಯ ರಾಮಾಚ್ಯುತರಿಗೆ ನಮಿಸಿದನು. ರಾಮನು ಆತನ ಪಾವನಚರಿತ್ರಕ್ಕೆ ಮೆಚ್ಚಿ ವರವನ್ನು ಬೇಡಿಕೊಳ್ಳೆಂದನು. ‘ ತಮ್ಮ ದಯೆಯಿಂದ ನನಗೇನೂ ಕಡಿಮೆಯಿಲ್ಲ. ತಾವು ಕೊಡುವುದೇ ಆದರೆ ಸಿಂಹೋದರನನ್ನು ಕರುಣಿಸಬೇಕು ’ ಎಂದನು. ಅದಕ್ಕೆ ಲಕ್ಷ್ಮಣನು ಮೆಚ್ಚಿ

ರಾಜ್ಯವನ್ನು ಇಬ್ಬರಿಗೂ ಹಂಚಿಕೊಟ್ಟು ಸುಖದಿಂದಿರಿಯೆಂದು ಕಳುಹಿದನು. ವಜ್ರ ಕರ್ಣನು ಅವರನ್ನು ದಶಪುರಕ್ಕೆ ಕರೆದುಕೊಂಡು ಹೋಗಿ ಆದರಾತಿಥ್ಯದಿಂದ ತೃಪ್ತ ಗೊಳಿಸಿ ತನ್ನ ಎಂಟು ಮಂದಿ ಕುವರಿಯರನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆ ಮಾಡಿದನು. ಉಳಿದ ಅರಸರು ತಮ್ಮ ಮುನ್ನೂರುಜನ ಕುವರಿಯರನ್ನು ಅವನಿಗೆ ಕೊಟ್ಟು ಮದುವೆ ಮಾಡಿದರು. ಅಲ್ಲಿ ಕೆಲವು ದಿನವಿದ್ದು ಬೇಸಗೆ ಬರಲು ಅವರು ಸಿಂಹೋದರನ ಅಪ್ಪಣೆಯಿಂದ ದಕ್ಷಿಣಮುಖವಾಗಿ ಹೊರಟರು. ಮುಂದೆ ಹೋಗುತ್ತ ದೊಡ್ಡದೊಂದು ಅರಣ್ಯವನ್ನು ದಾಟಿ ಕೂಗವನಗರಕ್ಕೆ ಬಂದು ಅದರ ಸಮೀಪದಲ್ಲಿ ರುವ ಆಲದ ಮರದ ನೆರಳಿನಲ್ಲಿ ಕುಳಿತರು. ಜಾನಕಿಯು ನೀರಡಿಸಿರಲು ನೀರುತರಲೆಂದು ಲಕ್ಷ್ಮಣನು ಒಂದು ಸರೋವರಕ್ಕೆ ಹೋದನು. ಅದನ್ನು ರಾಜಪುರುಷರು ಕಾಯು ತ್ತಿದ್ದರು. ಕಮಲದೆಲೆಯ ದ್ರೋಣದೊಳಗೆ ನೀರು ತುಂಬಿಕೊಂಡು ಬರುತ್ತಿರುವಾಗ ಒಬ್ಬ ಸುಂದರ ಪುರುಷನನ್ನು ಕಂಡನು. ಕೂಡಲೆ ಇವಳು ಯಾರೆಂದು ಲಕ್ಷ್ಮಣನು ಕೇಳಿದನು. ಅರಸನನ್ನು ಕಂಡು ಸ್ತ್ರೀಯೆನ್ನುವನೆಂದು ಕಾವಲಿನವರು ಕೆರಳಿದರು. ಅಷ್ಟರಲ್ಲಿ ಅವನು ಅಲ್ಲಿಗೆ ಬಂದನು. ಲಕ್ಷ್ಮಣನನ್ನು ಕಂಡು ಆತನು ಕಾರಣಪುರುಷ ನೆಂದು ತಿಳಿದು ಪಟ್ಟಣಕ್ಕೆ ಬರಬೇಕೆಂದು ಕೇಳಿಕೊಂಡು ಮೂವರನ್ನೂ ಅರಮನೆಗೆ ಕರೆದುಕೊಂಡು ಹೋದನು. ಆದರಾತಿಥ್ಯ-ಮಜ್ಜನಭೋಜನಗಳಾದ ಮೇಲೆ ಅವನ ತಾಯಿಯು ರಾಮನಿಗೆ ಹೀಗೆಂದಳು:—

ವಾಲಖಿಲ್ಯನು ಇಲ್ಲಿಯ ಅರಸನು. ರೌದ್ರಭೂತಿಯೆಂಬ ಕಿರಾತನು ಅವನನ್ನು ಯುದ್ಧದಲ್ಲಿ ಸೆರೆಹಿಡಿದುಕೊಂಡು ಹೋದನು. ಅವನಿಗೆ ಮಕ್ಕಳಿಲ್ಲೆಂದು ಅವಂತೀ ದೇಶದ ಅರಸನು ಸಿಂಹೋದರನು ಈ ದೇಶವನ್ನು ಆಕ್ರಮಿಸಲು ಬರುವ ವಿಚಾರ ದಲ್ಲಿದ್ದನು. ಆದರೆ ವಾಲಖಿಲ್ಯನು ಹೆಂಡತಿಯು ಬಸುರಿಯೆಂದು ತಿಳಿದಿರುವುದರಿಂದ ಅವಳು ಹೆರುವ ವರೆಗೆ ಅಲ್ಲಿಗೆ ಹೋಗುವುದು ಯೋಗ್ಯವಲ್ಲೆಂದು ನೀತಿ ಹೇಳಿದ ಮೇರೆಗೆ ಆತನು ತಡೆದನು. ಇತ್ತ ನಾನು ಮಗಳನ್ನು ಹೆತ್ತೆನು. ಮಂತ್ರಿಗಳು ಗಂಡು ಮಗುವೆಂದು ಪ್ರಕಟಗೊಳಿಸಿ ಅವಳಿಗೆ ಕಲ್ಯಾಣಮಾಲೆಯೆಂದು ಹೆಸರಿಟ್ಟು ಪುರುಷ ವೇಷದಿಂದ ಬೆಳೆಯಿಸಿ ಶಸ್ತ್ರಶಾಸ್ತ್ರ ಮುಂತಾದ ಎಲ್ಲ ವಿದ್ಯೆಗಳನ್ನು ಕಲಿಸಿದರು. ಒಂದು ದಿನ ಇವಳು ಹೆಣ್ಣೆಂದು ಗುರುತಿಸಿದವನಿಂದ ಅರಸನು ಬಿಡುಗಡೆ ಹೊಂದುವ ನೆಂದೂ ಅವನೇ ಅವಳಿಗೆ ಪತಿಯೆಂದೂ ಒಬ್ಬ ಮುನಿಯಿಂದ ತಿಳಿದುಕೊಂಡೆವು. ಆ ಕುರುಹು ಈ ಹೊತ್ತು ನೆರವೇರಿತು. ಅಷ್ಟರಲ್ಲಿ ಕಲ್ಯಾಣಮಾಲೆಯು ಸ್ತ್ರೀವೇಷ ವನ್ನು ತಾಳಿ ಬಂದಳು. ಅವಳ ಸೌಂದರ್ಯಕ್ಕೆ ಲಕ್ಷ್ಮೀಧರನು ಮೆಚ್ಚಿದನು. ಅವಳನ್ನು ಮದುವೆಯಾಗಿ ವಾಲಖಿಲ್ಯನನ್ನು ಬಿಡಿಸೆಂದು ರಾಮನು ಹೇಳಿದನು. ಮೊದಲು ಇವಳ ತಂದೆಯನ್ನು ಬಿಡಿಸಿಕೊಂಡು ಬರುವೆನೆಂದು ರಾಮನಪ್ಪಣೆ ಪಡೆದು ಲಕ್ಷ್ಮ ಣನು ಹೊರಟನು. ಆತನೊಬ್ಬನೇ ಗಹನವಾದ ಅರಣ್ಯವನ್ನು ಪ್ರವೇಶಿಸುತ್ತಿರುವುದು

ಶಬರರಿಗೆ ಆಶ್ಚರ್ಯವನ್ನುಂಟುಮಾಡಿತು. ಅವರು ಬಂದು ಅವನನ್ನು ಮುತ್ತಿದರು. ಅವರೆಲ್ಲರನ್ನು ಆತನು ಸದೆಬಡಿದನು. ಉಳಿದವರು ಓಡಿಹೋದರು. ಅವರು ಹೋಗಿ ರೌದ್ರಭೂತಿಗೆ ತಿಳಿಸಲು ಅವನು ಸಿಟ್ಟಿನಿಂದ ಕಿಡಿಕಿಡಿಯಾಗಿ ಚತುರಂಗ ಸೇನೆ ಯೊಡನೆ ಬಂದನು. ತನ್ನನ್ನು ಎದುರಿಸಿದ ಅನೇಕ ಸೇನೆಯನ್ನು ಸಂಹರಿಸಲು ರೌದ್ರಭೂತಿಯು ಸಿಟ್ಟಿನಿಂದ ಬಿಲ್ಲಿನ ಟಂಕಾರ ಮಾಡುತ್ತ ಬಂದನು. ಲಕ್ಷ್ಮೀಧರನು ತನ್ನ ಬಿಲ್ಲಿಗೆ ಹೆದೆಯೇರಿಸಿ ಟಂಕಾರ ಮಾಡಲು ಶಬರನು ಅಂಜಿ ಶರಣಾಗತನಾದನು. ವಾಲಖಿಲ್ಯನನ್ನು ಬಿಡಿಸಿಕೊಂಡು ಶಬರಸಹಿತನಾಗಿ ಕುವರನಗರಕ್ಕೆ ಬಂದನು. ರಾಮನು ಅವರನ್ನು ಮನ್ನಿಸಿದ ಮೇಲೆ ವಾಲಖಿಲ್ಯನು ಲಕ್ಷ್ಮೀಧರನಿಗೆ ಕಲ್ಯಾಣ ಮಾಲೆಯನ್ನು ಕೊಟ್ಟು ಮದುವೆ ಮಾಡಿದನು. ಅಲ್ಲಿ ಕೆಲವು ದಿನಗಳವರೆಗೆ ಇದ್ದು ಅವರು ಮತ್ತೆ ದಕ್ಷಿಣಕ್ಕೆ ಹೊರಟರು. ವಿಂಧ್ಯಗಿರಿಯನ್ನು ದಾಟಿ ಅರುಣಿಯೆಂಬ ಅಗ್ರಹಾರಕ್ಕೆ ಬಂದು ಒಬ್ಬ ಬ್ರಾಹ್ಮಣನ ಮನೆಯ ಕಟ್ಟೆಯ ಮೇಲೆ ಕುಳಿತು ಕೊಂಡರು. ಸ್ತ್ರೀಯರು ಅವರನ್ನು ಕಂಡು ಅಲ್ಲಿ ನೆರೆದರು. ಆ ಮನೆಯ ಬ್ರಾಹ್ಮ ಣನು ಬಂದು ಅವರನ್ನು ಅಲ್ಲಿಂದ ಹೊರಡಿಸಿದನು. ಅವರು ಅಲ್ಲಿಂದ ಹೊರಟು ಪ್ರಯಾಣ ಮಾಡುತ್ತ ಒಂದು ನದಿಯನ್ನು ದಾಟಿ ಅದರ ದಂಡೆಯ ಮೇಲಿನ ಆಲದ ಗಿಡದ ಅಡಿಯಲ್ಲಿ ವಿಶ್ರಮಿಸಿದರು. ಅಲ್ಲಿ ಕ್ರೀಡಾಪೂತನೆಂಬ ಯಕ್ಷನು ಬಂದು ಒಂದು ಪಟ್ಟಣವನ್ನು ಕೂಡಲೆ ಅಲ್ಲಿ ನಿರ್ಮಿಸಿ ಅವರ ಸತ್ಕಾರ ಮಾಡಿದನು. ವರ್ಷಾ ಕಾಲವು ಸಮೀಪಿಸಿರಲು ಯಕ್ಷನು ಅವರನ್ನು ಅಲ್ಲಿಯೇ ನಿಲ್ಲಿಸಿಕೊಂಡನು.

ಹೀಗೆ ವರ್ಷಾಕಾಲವನ್ನು ಅಲ್ಲಿ ಕಳೆದ ಮೇಲೆ ಶರತ್ಕಾಲವು ಬರಲು ಮುಂದೆ ಹೊರಡಲು ಕ್ರೀಡಾಪೂತನ ಅಪ್ಪಣೆಯನ್ನು ಕೇಳಲು ಆತನು ರಾಮಲಕ್ಷ್ಮಣಸೀತೆ ಯರಿಗೆ ರತ್ನಾಭರಣಗಳನ್ನು ಕಾಣಿಕೆಯಾಗಿ ಕೊಟ್ಟು ಕಳುಹಿದನು.

---

## ೭ನೆಯ ಸಂಧಿ

ರಾಮ-ಲಕ್ಷ್ಮಣ-ಸೀತೆಯರು ಮಾರ್ಗಕ್ರಮಿಸುತ್ತ ಒಂದು ದೊಡ್ಡ ಅರಣ್ಯ ವನ್ನು ಕಳೆದು ವಿಜಯಪುರಕ್ಕೆ ಬಂದರು. ರಾತ್ರಿಯಲ್ಲಿ ರಾಮ-ಸೀತೆಯರು ವಿಶ್ರಮಿಸಿ ಕೊಂಡಿರಲು ಲಕ್ಷ್ಮಣನು ವನದೊಳಗೆ ಅಲೆಯುತ್ತ ಹೋದನು. ಆಗ ಕದಳಿಯ ವನದೊಳಗಿನಿಂದ ಒಬ್ಬ ಸುಂದರಿಯು ಬರುತ್ತಿರುವುದನ್ನು ಕಂಡನು. ಕಾಮ ಮೋಹಿತನಾಗಿ ಒಂದು ತಮಾಲ ಗಿಡದ ಮರೆಗೆ ನಿಂತು ನೋಡುತ್ತಿರಲು ಅವಳು ಒಂದು ದೊಡ್ಡ ಆಲದ ಮರದ ಕೆಳಗೆ ಹೋಗಿ ದುಃಖದಿಂದ '' ಲಕ್ಷ್ಮಣದೇವನನ್ನು ಮದುವೆಯಾಗಬೇಕೆಂದಿರುವಾಗ ಆತನು ತಂದೆಯ ಸತ್ಯಕ್ಕೆ ಕಟ್ಟು ಬಿದ್ದು ರಾಮನ ಸಂಗಡ ವನವಾಸಕ್ಕೆ ಹೋದನೆಂದು ಕೇಳಿ ನಮ್ಮ ತಂದೆ ಪೃಥ್ವೀಧರನು ನನ್ನನ್ನು ಇಂದ್ರಪುರದ ಅರಸು ಸೌಂದರನೃಪನಿಗೆ ಕೊಡಲಿರುವನು. ಅದನ್ನು ಸಹಿಸದೆ ನಾನು

ಇಲ್ಲಿಗೆ ಬಂದು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೇನೆ. ಈ ಗಿಡದ ಕೆಳಗೆ ವಾಸಿಸುವ ದೇವತೆಗಳೆಲ್ಲರೂ ಈ ಸಂಗತಿಯನ್ನು ಲಕ್ಷ್ಮಣ ದೇವನಿಗೆ ತಿಳಿಸಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ,'' ಎಂದು ನುಡಿದು ಆ ಗಿಡದ ನೇತುಬಿದ್ದ ಬೇರೊಂದನ್ನು ತೆಗೆದುಕೊಂಡು ಕುತ್ತಿಗೆಗೆ ಸಿಕ್ಕಿಸಿಕೊಳ್ಳುವಷ್ಟರಲ್ಲಿ ಲಕ್ಷ್ಮಣನು ಮುಂದೆ ಬಂದು ತಾನೇ ಲಕ್ಷ್ಮಣನೆಂದು ಹೇಳಿ ಅವಳನ್ನು ಸಂತೈಸಿ ರಾಮ-ಸೀತೆಯರೆಡೆಗೆ ಕರೆದು ತಂದನು. ಅವಳ ಸಖೀಜನರು ಅವಳನ್ನು ಹುಡುಕುತ್ತ ಇವರ ಹತ್ತಿರಿರುವದನ್ನು ಕಂಡು ಇವರು ರಾಮಲಕ್ಷ್ಮಣರೆಂದು ತಿಳಿದು ಹೋಗಿ ಅರಸನಿಗೆ ತಿಳಿಸಿದರು. ಅವನು ಅವರೆಲ್ಲರನ್ನು ವೈಭವದಿಂದ ಕರೆದುಕೊಂಡು ಹೋಗಿ ವನಮಾಲೆಯನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆ ಮಾಡಿದನು.

ಒಂದು ದಿನ ಅತಿವೀರ್ಯನ ಕಡೆಯಿಂದ ದೂತನೊಬ್ಬನು ಬಂದು ಆತನು ಭರತನ ಮೇಲೆ ದಂಡೆತ್ತಿ ಹೋಗುವವನಿದ್ದಾನೆ. ಆತನಿಗೆ ಸಹಾಯ ಮಾಡಲು ಬರಬೇಕೆಂದು ಹೇಳಿ ಕಳುಹಿದ್ದಾನೆನಲು ಪೃಥ್ವೀಧರನನ್ನು ನಿಲ್ಲಿಸಿ ರಾಮಲಕ್ಷ್ಮಣರು ನಂದ್ಯಾವರ್ತ ಪಟ್ಟಣಕ್ಕೆ ಬಂದರು. ರಾಮಸೀತೆಯರನ್ನು ಚೈತ್ಯಾಲಯದಲ್ಲಿ ಬಿಟ್ಟು ಲಕ್ಷ್ಮಣನು ಅರಮನೆಗೆ ಹೋಗಿ ನಮಿಸದೆ ಅತಿವೀರ್ಯನೆದುರಿಗೆ ನಿಂತು 'ಭರತನಿಗೆ ಶರಣುಹೋಗು, ನಿನಗೆ ಸಹಾಯವಾಗಿ ಬಂದವರನ್ನು ನಂಬಬೇಡ' ಎಂದು ಉಪದೇಶಿಸಿದನು. ಅದನ್ನು ಸಹಿಸದೆ ಅತಿವೀರ್ಯನು ಕತ್ತಿಯನ್ನು ಸೆಳೆಯಲು ಲಕ್ಷ್ಮಣನು ಆತನನ್ನು ಹಿಡಿದೆಳೆದು ಬಾಯ್ಬಾಯಿ ಹೊಡೆದು ಹೆಡಮುಡಿ ಗಟ್ಟಿದನು. ಅವನ ಆಸ್ಥಾನದೊಳಗಿದ್ದ ಅರಸರೆಲ್ಲರೂ ಅಂಜಿ ಓಡಿಹೋದರು. ಲಕ್ಷ್ಮಣನು ಆತನನ್ನು ರಾಮನ ಹತ್ತರ ಎಳೆದು ತಂದನು. ಅತಿವೀರ್ಯನು ಶರಣಾಗತನಾಗಿ ದೀಕ್ಷೆವಹಿಸಿ ತಪೋರಾಜ್ಯದಲ್ಲಿ ನಿಂತನು. ಆತನ ಮಗ ವಿಜಯರಥನಿಗೆ ಆತನ ರಾಜ್ಯವನ್ನು ಕೊಟ್ಟು ಉಳಿದ ಅರಸರನ್ನು ಕ್ಷಮಿಸಿದನು. ವಿಜಯರಥನು ತನ್ನ ತಂಗಿ ರತಿಮಾಲೆಯನ್ನ ಲಕ್ಷ್ಮಣನಿಗೆ ಕೊಟ್ಟು ಮದುವೆ ಮಾಡಿದನು. ಅಲ್ಲಿ ಅವರು ಕೆಲವು ದಿನಗಳವರೆಗೆ ಇದ್ದು ಮುಂದೆ ಕ್ಷೇಮಾಂಜಲಿಪುರಕ್ಕೆ ಹೋದರು.

ಅಲ್ಲಿಯ ಅರಸನು ಶತ್ರುಂದಮನು. ಆತನ ಹೆಂಡತಿ ಕನಕಾಭೆ. ಅವರ ಮಗಳು ಜಿತಪದ್ಮೆ. ಅವಳು ಹುಟ್ಟಿದ ದಿನವೇ ಅರಸನ ಶಸ್ತ್ರಶಾಲೆಯಲ್ಲಿ ಶಕ್ತ್ಯಾಯುಧವು ಹುಟ್ಟಿತು. ಅರಸನು ಅದರಿಂದ ಹೊಡೆಯಲು ಅಂಜದೆ ಅದನ್ನು ಹಿಡಿದವನೇ ಜಿತಪದ್ಮೆಗೆ ಗಂಡನಾಗುವನು ಎಂಬ ಸಂಗತಿಯನ್ನು ಜನರ ಮುಖದಿಂದ ಲಕ್ಷ್ಮಣನು ತಿಳಿದುಕೊಂಡನು. ಜಿತಪದ್ಮೆಯೂ ಆಗ ಪ್ರಾಪ್ತವಯಸ್ಕಳು. ಆದಿನ ರಾಮಸೀತೆಯರು ಪುರೋದ್ಯಾನದೊಳಿದ್ದಾಗ ಲಕ್ಷ್ಮಣನು ಅರಮನೆಗೆ ಹೋಗಿ ಅರಸನು ಹೊಡೆದ ಶಕ್ತ್ಯಾಯುಧವನ್ನು ಹಿಡಿದನು. ಶತ್ರುಂದಮನು ಮೆಚ್ಚಿ ಎಲ್ಲರನ್ನೂ ಅರಮನೆಗೆ ಕರೆದುಕೊಂಡು ಹೋದನು.

ಮೂವರೂ ಮತ್ತೆ ಪ್ರಯಾಣಮಾಡುತ್ತ ವಂಶಸ್ಥಳೀಪುರಕ್ಕೆ ಬಂದರು. ಆ ಪಟ್ಟಣದ ಜನರು ಸಂಜೆಯಲ್ಲಿ ಸ್ವೈರವಾಗಿ ಓಡುತ್ತಿರುವುದನ್ನು ಕಂಡು ಏನೆಂದು ವಿಚಾರಿಸಲು ಒಬ್ಬನು ಹೀಗೆಂದನು:—'ಮೂರು ದಿನಗಳಿಂದ ಸಮೀಪದ ಬೆಟ್ಟದ ಮೇಲೆ ರಾಕ್ಷಸನ ಸೈನ್ಯವು ಗುಂಪು ಮಾಡಿ ಗರ್ಜಿಸುತ್ತಿರುವುದು. ಅದೇನೆಂಬುದು ತಿಳಿಯದು.' ಅದನ್ನು ವಿಚಾರಿಸುವೆವೆಂದು ಮೂವರೂ ಆ ಬೆಟ್ಟವನ್ನೇರಿದರು. ಅಲ್ಲಿ ಜಿನಮುನಿಯೊಬ್ಬನು ಯೋಗನಿರತನಾಗಿರಲು ದಾನವರು ನಾನಾರೀತಿಯಾಗಿ ಉಪಸರ್ಗವನ್ನುಂಟುಮಾಡುತ್ತಿದ್ದರು. ರಾಮಲಕ್ಷ್ಮಣರು ತಮ್ಮ ಬಿಲ್ಲುಗಳಗೆ ಹೆದೆಯೇರಿಸಿ ಟಂಕಾರ ಮಾಡಲು ಉಪಸರ್ಗವನ್ನುಂಟುಮಾಡಿದ ಅಗ್ನಿಪ್ರಭದೇವನು ಅಂಜಿ ಓಡಿಹೋದನು. ಆಗ ಮುನಿಗಳಿಗೆ ಕೇವಲಲಬ್ಧಿಯಾಯಿತು. ರಾಮ ಲಕ್ಷ್ಮಣ ಸೀತೆಯರು ಅವನನ್ನು ಮೂರು ಸಲ ಬಲಗೊಂಡು ನಮಿಸಿ ಉಚಿತಾಸನ ದಲ್ಲಿದ್ದರು. ಕೇವಲಜ್ಞಾನಕಲ್ಯಾಣಪೂಜೆಯಾಯಿತು. ಅಗ್ನಿಪ್ರಭನು ಬಂದು ನಮಿಸಿ ಸದ್ದೃಷ್ಟಿಯಾದನು. ಗರುಡಪತಿಯು ಬಂದು ನಮಿಸಿ ರಾಮ ಲಕ್ಷ್ಮಣರನ್ನೂ ಆದರಿಸಿದನು. ರಾಘವನು ಅದನ್ನೆಲ್ಲ ಕಂಡು ಅಗ್ನಿಪ್ರಭನು ಉಪ ಸರ್ಗವನ್ನೇಕೆ ಮಾಡಿದನು, ಮತ್ತು ಗರುಡಪತಿಯು ಅಕಾರಣವಾಗಿ ತಮ್ಮನ್ನೇಕೆ ಆದರಿಸಿದನು ಎಂದು ಕೇಳಲು ಅವರು ತಮ್ಮ ಭವಾವಳಿಯನ್ನು ಹೇಳಿದರು.

---

## ೮ ನೆಯ ಸಂಧಿ.

ರಾಮ–ಲಕ್ಷ್ಮಣರು ಸೀತೆಸಹಿತರಾಗಿ ದಂಡಕಾರಣ್ಯಕ್ಕೆ ಬಂದರು. ಜಟಾಯುವೂ ಅವರನ್ನು ಹಿಂಬಾಲಿಸಿದನು. ರಾಮಸೀತೆಯರು ವಿಶ್ರಮಿಸಿರಲು ಲಕ್ಷ್ಮಣನು ಅರಣ್ಯದೊಳಗೆ ಅಲೆಯುತ್ತ ಶಂಭುಕನು ತಪಮಾಡುತ್ತಿದ್ದ ಬಿದಿರ ಹಿಂಡಿಲ ಸಮೀಪಕ್ಕೆ ಬರುತ್ತ ಆಕಾಶದಿಂದ ಬರುತ್ತಿದ್ದ ಹೊಳೆಹೊಳೆಯುವ ಸೂರ್ಯ ಹಾಸವೆಂಬ ಖಡ್ಗವನ್ನು ಕಂಡನು. ಅದರ ರಕ್ಷಣೆಗೆಂದು ಸಾವಿರಾರು ಯಕ್ಷರು ಬರುತ್ತಿದ್ದರು. ಲಕ್ಷ್ಮಣದೇವನು ಕೈಚಾಚಿದ ಕೂಡಲೆ ಆ ಖಡ್ಗವು ಕೈವಶವಾಯಿತು. ಅದನ್ನು ತೆಗೆದುಕೊಂಡು ಮುಂದಿದ್ದ ಬಿದಿರ ಬೆಟ್ಟವನ್ನು ಹೊಡೆಯಲು ಅದರೊಳಗಿನ ಶಂಬುಕನ ಶಿರಸಹಿತವಾಗಿ ಅದು ತುಂಡಾಗಿ ಉರುಳಿತು. ತಪಮಾಡಿ ಖಡ್ಗವನ್ನು ಸಂಪಾದಿಸಿ ತರುವಾಯ ಅದರಿಂದಲೇ ಶಂಭುಕನು ಮೃತನಾದನೆಂದು ದಯೆ ಹುಟ್ಟಿ ತನ್ನ ಕೃತ್ಯದ ಬಗ್ಗೆ ಪಶ್ಚಾತ್ತಾಪಪಟ್ಟು ರಾಮನೆಡೆಗೆ ಬಂದನು. ಆ ವೃತ್ತಾಂತವನ್ನೆಲ್ಲ ರಾಮನಿಗೆ ಹೇಳಿದ ಕೂಡಲೆ ಪಂಚಾಶ್ಚರ್ಯಗಳಾದುವು. ಯಕ್ಷರು ಅವರನ್ನು ಪೂಜಿಸಿ ಹೋದರು.

ಸೂರ್ಯಹಾಸಾಸಿಯು ಬರುವ ಚೆಲ್ವಿಕೆಯನ್ನು ನೋಡಬೇಕೆಂಬ ಕುತೂಹಲದಿಂದ ಚಂದ್ರನಖಿಯು ಶಂಭುಕನೆಡೆಗೆ ಬಂದು ಹದ್ದುಕಾಗೆಗಳು ಕುಕ್ಕುತ್ತಿರುವ

ಆತನ ಹೆಣವನ್ನು ಕಂಡಳು. ಮಗನ ಮರಣದಿಂದ ಶೋಕವಿಹ್ವಲೆಯಾಗಿ ಮೂರ್ಛೆ ಹೋಗಿ ಎಚ್ಚತ್ತು ದುಃಖಿಸಿ ತರುವಾಯ ಸೇಡು ತೀರಿಸಿಕೊಳ್ಳುವ ನಿಶ್ಚಯಮಾಡಿ ವೈರಿಯ ಹೆಜ್ಜೆಗಳನ್ನು ಅನುಸರಿಸಿ ಹೋದಳು. ತನ್ನ ಮಗನನ್ನು ಕೊಂದವನು ಮನುಷ್ಯನೆಂದು ನಿಶ್ಚಯಿಸಿ ಹುಡುಕುತ್ತ ಬಂದು ಪಂಚವಟ್ಟಿಯಲ್ಲಿ ರಾಮಲಕ್ಷ್ಮಣ ರನ್ನು ಕಂಡು ಮೋಹಿಸಿ ವೈರವನ್ನು ಮರೆತು ನವತರುಣಿಯ ರೂಪವನ್ನು ಧರಿಸಿ ದುಃಖಿಸುತ್ತ ಸೀತೆಯೆಡೆಗೆ ಬಂದಳು. ಲಕ್ಷ್ಮಣನು ಅವಳ ದುಃಖದ ಕಾರಣವನ್ನು ಕೇಳಿದನು. ತಾಯಿತಂದೆಗಳೂ ಅಣ್ಣತಮ್ಮಂದಿರೂ ಗತಿಸಿದರು. ಅರಣ್ಯದಲ್ಲಿ ಹುಲಿ ಕರಡಿ ಸಿಂಹಗಳ ಪಾಲಾಗಬೇಕೆಂದು ಒರುತ್ತಿರಲು ನಿಮ್ಮನ್ನು ಕಂಡು ಕಾಮಬಾಣ ಪೀಡಿತೆಯಾದೆನು. ನಿಮ್ಮಿಬ್ಬರಲ್ಲಿ ಒಬ್ಬರು ನನ್ನನ್ನು ಸ್ವೀಕರಿಸಬೇಕೆಂದು ಬೇಡಿ ಕೊಂಡಳು. ಇವಳು ಮನುಷ್ಯಳಲ್ಲೆಂದು ಬಗೆದು ಲಕ್ಷ್ಮಣನು ಅವಳನ್ನು ಅಪಮಾನ ಗೊಳಿಸಲು ಅವಳು ಮಿಂಚಿನ ವೇಗದಿಂದ ಆಕಾಶಕ್ಕೆ ಹಾರಿ ಖರನ ಸಭೆಗೆ ಹೋದಳು. ಅಲ್ಲಿ ಇಬ್ಬರು ನರರಿಂದ ಶಂಭುಕನು ತುಂಡಾದ ಸಂಗತಿಯನ್ನು ಹೇಳಿ ಅವರ ಕೈಯೊ ಳಗಿನ ಸೂರ್ಯಹಾಸಾಸಿಗೆ ಅಂಜದೆ ತಾನು ಅವರ ಮೇಲೆ ಬೀಳಲು ಅವರು ತನ್ನನ್ನು ಅಪಮಾನಗೊಳಿಸಿದರು. ಅವರು ಪಂಚವಟಿಯಲ್ಲಿರುವರೆಂದು ಅವಳು ದುಃಖದಿಂದ ಹೇಳಿದಳು. ಮಗನನ್ನು ಕೊಂದ ನರಕೀಟಕರ ರಕ್ತವನ್ನು ಹೀರುವೆನೆಂದು ಯುದ್ಧಕ್ಕೆ ಹೊರಡಲು ಮಂತ್ರಿಗಳು ತಡೆದು ಸೂರ್ಯಹಾಸವನ್ನು ಒಂದು ಕ್ಷಣದಲ್ಲಿ ಸಹಜವಾಗಿ ವಶಪಡಿಸಿಕೊಂಡವರು ಸಾಮಾನ್ಯರಲ್ಲ. ವಿದ್ಯಾಧರಬಲವನ್ನೆಲ್ಲ ಕರೆ ಯಿಸಿಕೊಳ್ಳೆಂದು ಹೇಳಿದರು. ಆಮೇರೆಗೆ ಆತನು ಸಮರಭೇರಿಯನ್ನು ಹೊಡೆ ಯುವಂತೆ ಆಜ್ಞೆಯಿತ್ತನು. ಅದರ ಧ್ವನಿಯನ್ನು ಕೇಳಿ ಚತುರಂಗಬಲವು ಸಿದ್ಧ ವಾಗಿ ಹೊರಟಿತು. ಈ ಸಂಗತಿಯನ್ನು ರಾವಣನಿಗೆ ತಿಳುಹಲು ಚಾರರನ್ನು ಕಳುಹಿ ಖರದೂಷಣರು ಸೈನ್ಯಸಹಿತವಾಗಿ ರಾಮಲಕ್ಷ್ಮಣರಿದ್ದ ಪಂಚವಟಿಯ ಕಡೆಗೆ ಸಾಗಿ ದರು. ಆ ಸೈನ್ಯದೊಳಗಿನ ನಾನಾತರದ ವಾದ್ಯಧ್ವನಿಯನ್ನು ಕೇಳಿ ಸೀತೆಯು ಅಂಜುತ್ತಿರಲು ‘ ವೈರಿಗಳು ಬರುತ್ತಿದ್ದಾರೆ ಅಂಜಬೇಡಿ. ಸೂರ್ಯಹಾಸಖಡ್ಗವನ್ನು ಸಾಧಿಸುತ್ತಿದ್ದ ತರುಣನ ತಂದೆತಾಯಿಬಾಂಧವರು ಸೈನ್ಯಸಹಿತರಾಗಿ ಬರುತ್ತಿದ್ದಾರೆ. ಅವರನ್ನು ಸಂಹರಿಸಿ ಮೃಗಗಳಿಗೆ ಆಹುತಿಕೊಡುವೆನು ’ ಎಂದು ಲಕ್ಷ್ಮಣನೆಂದನು. ರಾಮನು ಬಿಲ್ಲಿಗೆ ಕೈಚಾಚಿದನು. ಅವನನ್ನು ಲಕ್ಷ್ಮಣನು ತಡೆದು ‘ ರಾಕ್ಷಸರು ಮಾಯಾವಿಗಳು. ಆದುದರಿಂದ ದೇವಿಯನ್ನು ಬಿಟ್ಟುಹೋಗದೆ ರಕ್ಷಿಸುತ್ತ ನೀವು ಇಲ್ಲಿಯೇ ಇರಬೇಕು. ಅವರು ನನಗೆ ಅಸಾಧ್ಯವೆಂದು ಕಂಡುಬಂದರೆ ಅಲ್ಲಿಂದಲೇ ಸಿಂಹಧ್ವನಿಗೈಯುವೆನು. ಆಗ ನೀವು ಬರಬೇಕೆಂದು ನುಡಿದು ಲಕ್ಷ್ಮಣನು ಯುದ್ಧಕ್ಕೆ ಹೋದನು. ಚೂಣಿಯಲ್ಲಿ ತ್ರಿಶಿರನು ಸೈನ್ಯಸಹಿತ ಬಂದನು. ವೈರಿಯು ಒಬ್ಬನೇ ಎಂದು ರಾಕ್ಷಸರು ಆತನನ್ನು ಮುತ್ತಿದರು. ಲಕ್ಷ್ಮಣನು ಕಾಲಾಳು

ರಾಹುತರು ರಥಿಕರು ಮುಂತಾದ ಚತುರಂಗಬಲವನ್ನು ಒಂಟಿಗನಾಗಿ ಸೂರ್ಯ ಹಾಸದಿಂದ ಸಂಹರಿಸಿದನು. ಅದನ್ನು ಕಂಡು ತ್ರಿಶಿರನು ರಥದಲ್ಲಿ ಕುಳಿತುಕೊಂಡು ಲಕ್ಷ್ಮಣನೆದುರು ಬಂದು ಶಸ್ತ್ರಾಸ್ತ್ರಗಳಿಂದ ಆತನನ್ನು ಮುಚ್ಚಿದನು. ಲಕ್ಷ್ಮಣನು ಅವುಗಳನ್ನೆಲ್ಲ ಖಂಡಿಸಿ ಸೂರ್ಯಹಾಸಾಸಿಯಿಂದ ಹೊಡೆಯಲು ಸಾರಥಿಯು ಮಡಿದನು. ರಥವು ಮುರಿಯಿತು. ತ್ರಿಶಿರನು ಕೆಳಗೆ ಹಾರಿ ವಜ್ರದ ಶಕ್ತಿಯಿಂದ ಲಕ್ಷ್ಮಣನನ್ನು ಇರಿಯಲು ಬರಲು ಅದನ್ನು ಹೊರಕೈಯಿಂದ ನಿವಾರಿಸಿ ಸೂರ್ಯಹಾಸದಿಂದ ಅಪ್ಪಳಿಸಿ ಆತನ ತಲೆಯನ್ನು ಕತ್ತರಿಸಿದನು. ಅದನ್ನು ಕಂಡು ದೂಷಣನು ಸಿಟ್ಟಿನಿಂದ ಕೈಯಲ್ಲಿ ಸುರಗಿಯನ್ನು ತೆಗೆದುಕೊಂಡು ಲಕ್ಷ್ಮಣನ ಮೇಲೆ ಹಾಯಲು ಆತನು ದೂಷಣನನ್ನು ಸೂರ್ಯಹಾಸದಿಂದ ಅಪ್ಪಳಿಸಲು ಆತನ ತಲೆಯು ಕತ್ತರಿಸಿತು. ದೇವತೆಗಳು ಹೂಮಳೆ ಸುರಿಸಿದರು.

ಇದೆಲ್ಲವನ್ನು ನೋಡುತ್ತಿದ್ದ ವಿರಾಧಿತನು ಲಕ್ಷ್ಮಣನೇ ತನಗೆ ಒಡೆಯನೆಂದು ಆತನ ದರ್ಶನಕ್ಕೆ ಬಂದನು. ಪೂರ್ವದಲ್ಲಿ ದಿವ್ಯಜ್ಞಾನಿಗಳು ತನಗೆ ಅರುಹಿದ ಕಾರಣಪುರುಷನು ಈತನೇ ಎಂದು ನಮೋಸ್ತುಗೈದನು. ‘ಮಹಾನುಭಾವನೇ, ಖರದೂಷಣರನ್ನು ಕೊಂದ ನಿನ್ನ ಬಾಹುಬಲವನ್ನು ಕಂಡೆನು. ಪರಮಜ್ಞಾನಿಗಳು ಹೇಳಿದ ಕಾರಣಪುರುಷನು ನೀನೇ. ಖರನು ನಮ್ಮ ತಂದೆಯನ್ನು ಕೊಂದು ನಮ್ಮ ಪಟ್ಟಣವನ್ನು ಆಕ್ರಮಿಸಿರುವನು. ನಮ್ಮ ಆ ಅಪಮಾನವನ್ನು ಹೋಗಲಾಡಿಸಿ ಸಂರಕ್ಷಿಸಬೇಕು’ ಎಂದು ಮತ್ತೆ ಎರಗಿದನು. ‘ಅಲ್ಲಿ ಬರುತ್ತಿರುವ ಸೈನ್ಯವು ನನ್ನದು. ಖರನನ್ನು ಕೊಂದು ಆತನ ತಲೆಯನ್ನು ಈಗಲೇ ತರುವೆನು. ಅಪ್ಪಣೆ ಕೊಡಬೇಕು’ ಎಂದು ನುಡಿದು ಖರನ ಸೈನ್ಯದ ಮೇಲೆ ಬಿದ್ದನು. ಯುದ್ಧವು ಭೀಕರವಾಯಿತು. ಆಗ ಖರನು ವಿರಾಧಿತನನ್ನು ಕಂಡು ಕಣ್ಣುಗಳಿಂದ ಕಿಡಿಗಳನ್ನು ಉಗುಳುತ್ತ ಆತನ ಎದುರು ಬಂದನು. ಇಬ್ಬರ ಕಾಳಗವು ಘೋರವಾಗಿ ನಡೆಯಿತು.



॥ ಶ್ರೀವೀತರಾಗಾಯ ನಮಃ ॥

# ಶ್ರೀಕುಮುದೇಂದುರಾಮಾಯಣಂ.

## ಪೀಠಿಕಾಸಂಧಿ *

ರಾಗ—ದೇಶಾಭ. ಪರಿವರ್ಧಿನಿಷಟ್ಪದಿ.[೧]

ರಾಮ[ಕಥಾಮೃತವಯ್ಯಾ][೨] ಮಂಗಳ- ।
ನಾಮದ ದಾಮದ [ಸುಮ]ದಾಮವಿದುವೆ ।
ಕಾಮಿತ ಫಲಸಂಸಿದ್ಧಿಯನೀವುದು ಭೂಮಿಯ ಸುಜನಾವಳಿಗೆಯ್ದೆ ॥ ಪಲ್ಲವ ಪದ ॥

ಶ್ರೀಮದುರಗನರಸುರಪತಿನತಸಂ- ।
ಸ್ತೋಮಮುಕುಟಮಣಿಗಣ[ರುಚಿ]ರಾಜಿತ ।
ಸಾಮೋದ್ಭವರಿಪುಪೀಠಾ[೪]ಳಂಕೃತಚರಣಕಮಳಯುಗಳಂ ॥
ರಾಮಾಚ್ಯುತಸೀತಾನುತ ಮಂಗಳ- ।
ನಾಮಂ ಮುನಿಸುವ್ರತಜಿನಪತಿ ಸು- ।
ಪ್ರೇಮದೆ ಜಿನಮುನಿಸುವ್ರತತತಿಫಲಚಿನ್ಮಯಪದವಂ ಪದೆದೀಗೆ ॥ ೧ ॥

---

* ಹಸ್ತಲಿಖಿತ ಮೂರೂ ಪ್ರತಿಗಳಲ್ಲಿ ಈ ಸಂಧಿಯು ಎರಡನೆಯದಾಗಿದೆ. ಇದು ಮೊದಲನೆಯದಾಗಿರುವುದು ಪರಂಪರೆಗೆ ಸಮ್ಮತವು. ಆದುದರಿಂದ ಸಂಧಿಗಳನ್ನು ಕ್ರಮಗೊಳಿಸಲು ಪೀಠಿಕಾಸಂಧಿಯೆಂದು ಇದನ್ನು ಆರಂಭದಲ್ಲಿ ಕೊಡಲಾಗಿದೆ. ಈ ಸಂಧಿಯು ಪೂರ್ಣವಾಗಿಲ್ಲ. ಕವಿಯು ಮೊದಲನೆಯ ಸಂಧಿಗೆ ಬದಲಾಗಿ ಇದನ್ನು ಇರಿಸಬೇಕೆಂದು ಬರೆಯಹತ್ತಿ ಅದು ಪೂರ್ಣಗೊಳ್ಳುವ ಪೂರ್ವದಲ್ಲಿಯೇ ಗತಿಸಿದಂತೆ ತೋರುತ್ತದೆ.

೧ ಇದರೊಳಗಿನ ಷಟ್ಪದಿಗಳು ಆವ ಛಂದೋಗ್ರಂಥಗಳೊಳಗಿನ ನಿಯಮಗಳನ್ನೂ ಅನುಸರಿಸುವದಿಲ್ಲ. ೬ನೆಯ ಚರಣಗಳಲ್ಲಿ ಬಹಳ ಕಡೆಗೆ ೩೦ ಮಾತ್ರೆಗಳು ಕಂಡುಬರುತ್ತವೆ. ಅಲ್ಲಲ್ಲಿ ಗಣಭಂಗದೋಷಗಳೂ ಇವೆ. ೨-೨ (ಕಖ) ಕಥೆಯಯ್ಯಾ, (ಗ) ಕಥೆಯಂ. ೪-೪ (ಗ) ಶಿರಾ.

ಕೊರಗೆ ಕರಂ [೧][ಕರ್ಮಾಷ್ಟಕ][೧]ಕಮಳಾ- ।
ಕರಮರಳೆ ಗುಣಾಷ್ಟಕಕುಮುದಾಕರ ।
[೨][ಉರುತರ][೨] ಪರಮಾನಂದಸುಧಾಂಬುಧಿ ಪರಿವಿಡಿಯಿಂ ಪಿರಿದುಂ ॥
ಚರಮತನುಗೆ ಕಿಂಚಿನ್ನ್ಯೂನಾಕೃತಿ ।
ದೊರೆಕೊಂಡೊಪ್ಪುವ ಚಿನ್ಮಯಚಂದ್ರಿಕೆ ।
ಯರಸ[೩][ರೆನಿಪ್ಪಾ][೩] ಸಿದ್ಧಸುಧಾಕರರೆಮಗೀಗಕ್ಷಯಸಿದ್ಧಿಯನು ॥ ೨ ॥

ಸ್ಥೈರ್ಯಂ ದಶಧರ್ಮಧ್ಯಾನದೊಳತಿ ।
ಧೈರ್ಯಂ ವಿವಿಧಪರೀಷಹಜಯದೊಳ್ ।
ಶೌರ್ಯಂ ಪಂಚಾಸ್ತ್ರನನುಱದಿಕ್ಕುವ ನಿಜಭುಜವಿಜಯದೊಳು ॥
ಕಾರ್ಯಂ ಮೂವತ್ತಾಱುಂ ಗುಣದೊಳು ।
ವರ್ಯಮತಿಯನೊಲವಿಂ ತಳೆದಿರ್ಪಾ- ।
ಚಾರ್ಯರ್ನಿಶ್ಚಯಪಂಚಾಚಾರದ ನಿರ್ಮಲ ಪದವಿಯ ಪದೆದೀಗೆ ॥ ೩ ॥

ಹೇಯಂ ಮಿಥ್ಯಾಪಂಚಕ[೪]ಮಿ[೪]ವುಪಾ- ।
ದೇಯಂ ಪಂಚಗುರುಕ್ರಮಯುಗಳಂ ।
ಈಯೆರಡುಂ ಸಂಸೃತಿಮೋಕ್ಷಕ್ಕಂ ಸಲೆ ಕಾರಣಬೀಜಂ ॥
ಸ್ವೀಯನಿರಂಜನಚಿನ್ಮಯತತ್ತ್ವ- ।
ಧ್ಯೇಯಧ್ಯಾನಧ್ಯಾತೃಫಲಂ ಸಂ- ।
ಶ್ರೇಯಃ ಪದಮೆಂದಱಿಪುವುಪಾಧ್ಯಾಯರ ಚರಣಂ ಶರಣಕ್ಕೆಮಗೆ ॥ ೪ ॥

ಶೀಲಂ ಪದಿನೆಣ್ಛಾಸಿರಮಮಲಗು- ।
[೫]ಣಾಳಿಚತು[೫]ರಸೀತಿ ಸಹಸ್ರಂ ರ- ।
ತ್ನಾಳಂಕಾರಂ ಸಾಮ್ರಾಜ್ಯಂ ಸದ್ವಯರತ್ನತ್ರಿತಯಂ ॥
ಏಳನೆಯ ಗುಣಸ್ಥಾನದಿ ನಿಜಶ್ರೀ*- ।
ಲೀಲಾಗೃಹಮಾಗಿರ್ದು ವಿರಾಜಿಪ ।
ಮೂಲೋಕ[೬]ಸ್ತುತ[೬]ಸಾಧುಮುನೀಶ್ವರಚಕ್ರೇಶ್ವರರೀಗಭೀಮತವ ॥ ೫ ॥

---

೧-೧ (ಕಖಗ) ಕರ್ಮತ್ರಯ. ೨-೨ (ಕಖಗ) ಮುರುತರ. ೩-೩ (ಕಖಗ) ರೆನಿಪ. ೪-೪ (ಕಖ) ಮೆಯು. ೫-೫ (ಕಖಗ) ಣಾವಳಿಚತುರಾ. ೬-೬ (ಕಖಗ) ಸ್ತುತಿಗೆಂದು.

ನಯನಿ[1]ಕ್ಷೇಪ[1]ಪ್ರಮಿತಿಪ್ರಚಯಾ[2]- |
ಶ್ರಯಭೇದಾಭೇದೋಜ್ಜ್ವಲರತ್ನ- |
ತ್ರಯಮು[3]ಪಗತಸಂಸ್ಥಿತಿಯಿಂ [4]ಪರ್ಯವಸಾನಾದ್ಯವಸಾ[4]ಯಾ ||
ಶ್ರಯಣೀಯಂ ಸುಜನಾವಳಿಗತುಳಾ- |
ಕ್ಷಯಲಕ್ಷ್ಮೀಮಣಿಮಂಡನಮಧಿಕ- |
ಪ್ರಿಯದಿಂದೆಮ್ಮ ಮನೋಮಂಜೂಷೆಯೊಳಿಕ್ಕೆ [5]ಜಿನಾಧೀಶ್ವ[5]ರಧರ್ಮಂ || ೬ ||

ದೂರಾಸನ್ನಸಮಂ ಮಧುರಂ ಗಂ- |
ಭೀರ[6][ಮಖಿಲಭಾಷಾತ್ಮಕಮಸ್ತ][6] ಸ- |
ಮೀ[7][ರಮತಾ][7]ಲ್ಪೋಷ್ಠಪುಟವ್ಯಾಪಾರ[ಂ] ವಿಷಮವಿದೂರಂ ||
ಸಾರಂ ಸರ್ವಪ್ರಾಣಿಹಿತಂ ವಿ- |
ಸ್ತಾರಿತವಸ್ತುಪದಾರ್ಥಂ ಮುಕ್ತಿ- |
ಶ್ರೀರಮಣೀಪತಿ ಜಿನಪತಿದಿವ್ಯಧ್ವನಿ ನಮಗೀಗೆ ವಚಶ್ರೀಯಂ || ೭ ||

ನರತಿರ್ಯಗು[8]ಲೋಕದೊಳಂ ಭವನಾ- |
ಮರಲೋಕದೊಳಂ ನಿಶ್ಶೇಷವ್ಯಂ- |
ತರಲೋಕದೊಳಂ ಜ್ಯೋತಿರ್ಲೋಕದೊಳಂ[9] ಕಲ್ಪಸ್ಥಿತಿಯಾ ||
ಸುರಲೋಕದೊಳಮಕೃತ್ರಿಮಕೃತ್ರಿಮ- |
ವೆರಡುಂ ಪರಿಯೊಳಸಂಖ್ಯಾತಜಿನೇ- |
ಶ್ವರ ಮಂದಿರಸಂದೋಹವೆಸೆ[ಯು]ವ ಕ್ಷಯಲಕ್ಷ್ಮಿಯ[10]ನೆಮಗೊದವಿಸುಗೆ || ೮ ||

ಕ್ರಮದಿಂ ರಂಜಿ[ಪ]ವೂರ್ಧ್ವಾಧೋಮ- |
ಧ್ಯಮಲೋಕದ[11]ನಂ[ತಾ][11]ಕೃತ್ರಿಮಕೃ- |
ತ್ರಿಮಮೆಂಬೆರಡುಂ ಪರಿಗತಚೈತ್ಯಾಲಯದೊಳು ಪ್ರ*ಜ್ವಲಿಪ ||
ವಿಮಲಕನಕರಜತಮಯಂ ನವರ- |
ತ್ನಮಯಂ ಸಂಖ್ಯಾತೀತಂ ಲೋಕೋ- |
ತ್ತಮವೆನಿಸಿದ ಜಿನಚೈತ್ಯಸಮೂಹಂ ಮಚ್ಚಿ[12]ತ್ತ[12]ಭವನದೊಳ[ಗೆ][13]ಸೆಗೆ || ೯ ||

---

೧-೧ (ಕಖ) ನಿಕ್ಷೇಪ. ೨ (ಕಖ) ಯೋ. ೩ (ಕಖ) ಮ. ೪-೪ (ಕಖ) ಪರ್ಯಾಸನಾದ್ಯಂತ ಸಾರಂ. ೫-೫ (ಕಖ) ಜಿನಾಧೀಶ್ವರೆ. ೬-೬ (ಕಖಗ) ಮಖಿಲಾತ್ಮಕಸಮಸ್ತ. ೭-೭ (ಕಖಗ) ರಂತಾ. ೮ (ಕಖ) ಗೂರ್ಧ್ವ. ೯ (ಕಖ) ಳು. ೧೦ (ಕಖ) ವೆ. ೧೧-೧೧ (ಕಖ) ದನಂತ; (ಗ) ದನಂತರ. ೧೨ (ಕಖ) ತ್ತೊ. ೧೩ (ಗ) ಸ.

ಮೃದುಪದವಿನ್ಯಾಸದ ಚೆಲುವಿಂದ- ।
ರ್ಥದ ಸಾಮರ್ಥ್ಯವನೀವುದಱಿಂ ಭಾ- ।
ವದ ರಸದಿಂಪಿನಲಂಪಂ ಪೊಂಪುಟಿಯಾಗಿರೆ ಮಾಟ್ಪುದಱಿಂ ॥
ಸದಮಲಗುಣಮಣಿಗಣದಿನಲಂಕಾ- ।
ರದ [೧][ಸೊಗಸಿಂ][೧] ಸೊಗಯಿಪ ಭಾರತಿ ಜಿನ- ।
ವದನಾಂಭೋಜವಿರಾಜಿತೆ[೨] ಮನ್ಮುಖಲಕ್ಷ್ಮೀಮಂಡನಮೆನಿಸಿರಲಿ ॥ ೧೦ ॥

ಅತಿಶಯಕೇವಳಿಗಳುಮನುಬದ್ಧ- ।
ಕ್ಷಿತಿನುತಕೇವಳಿಗಳುಮಪ್ರತಿಮ- ।
ಶ್ರುತಕೇವಳಿಗಳು[ಮಾ[೩]] ಸಂತತಿಯಿನನುಕ್ರಮದಿಂ ಬಂದ ॥
ಯತಿಮುಖ್ಯರ್ ಜಿನಮತಶಾಸ್ತ್ರಕಳಾ- ।
ನ್ವಿತಮತಿಗಳ್ ನಮಗೀಗೆ ದಯಾಮೃತ- ।
ದತಿವೃಷ್ಟಿಗೆ [ವರತರ] ವಾಗ್ವೃತ್ತಿಯನತುಳವಚನ ಸಂಪನ್ನತೆಯಂ ॥ ೧೧ ॥

ಸಮವಸೃತಿಶ್ರೀವಿಹರಣಸಮಯದೊ- ।
ಳಮರೇಶ್ವರಕೃತಕಾಂಚನಮಯದಾ- ।
ಕಮಳದ ಕರ್ಣಿಕೆಯಂ ನಾಲ್ವೆರಳಂ ಮುಟ್ಟದೆ ವಿಹರಿಸುವ ॥
ವಿಮಳಜಿನೇಂದ್ರರೊಳೆಣೆಯೆನ್ನದೆ ವಿ- ।
ಕ್ಕ ಮುನೀಂದ್ರರೊಳೆಣೆಯೆಂಬುದೆ ಲೋಕೋ- ।
ತ್ತಮರಂ ಚತುರಂಗುಳಚಾರಣ[ರೆನಿಪಾ] ಕುಂದ[೪]ಕುಂದಾಚಾರ್ಯ[೪]ರಂ ॥೧೨॥

ದ್ರಾಕ್ಷಾರಾಮದ ಭೀಮೇಶವಿರೂ- ।
ಪಾಕ್ಷರ್ ನಿಜಸಾಮರ್ಥ್ಯಸಹಸ್ರದ ।
ಸಾಕ್ಷಿಯೆನಿಪ ಭೇದಾಭೇದೋಜ್ವಲರತ್ನತ್ರಯಮುಯರು ॥
ಲಕ್ಷಣಲಕ್ಷ್ಯವಿಚಕ್ಷಣನವನಯ ।
ನಿಕ್ಷೇಪಪ್ರಮಿತಿಸ್ಯಾದ್ವಾದಸು- ।
ರಕ್ಷಣದಕ್ಷತೆಯಂ ನಮಗೀ[ಯ[೫]ಲಿ] ಸಮಂತಭದ್ರಸ್ವಾಮಿಗಳು[೬] ॥ ೧೩ ॥

---

೧-೧ (ಕಖಗ) ಸೊಗಸಿನೊಳಂ. ೨ (ಕಖಗ) ತ. ೩ (ಕಖಗ) ಮ. ೪-೪ ಇಲ್ಲಿ ಅಜಕಂಸಾರಿ ಗಣಗಳಾಗುತ್ತವೆ. (ಕಖಗ) ಚಾರಣರಂ ಕುಂದಕುಂದಾಚಾರ್ಯರಂ. ಎಂಬ ಪಾಠವಿದೆ. ಅಲ್ಲಿ ನಾಕಿಗ-ಕಂಸಾರಿಗಣಗಳಾಗಿ ಈ ಚರಣಕ್ಕೆ ೨೮ ಮಾತ್ರೆಗಳಾಗುತ್ತವೆ. ೫ (ಕಖಗ) ಗೆ. ೬ (ಕಖಗ) ಳ್. ಈ ಚರಣವು ೧೨ನೆಯ ಪದ್ಯದ ಕೊನೆಯ ಚರಣದಂತೆ.

ಕವಿಪರಮೇಷ್ಠಿಸ್ವಾಮಿಗಳ ಗುಣಾ- |
ರ್ಣವಗುಣಭದ್ರಸ್ವಾಮಿಗಳ ಜಗ- |
ತ್ಪ್ರವರರುಮಾಸ್ವಾತಿಗಳ ಶ್ರೀಪಾದಸ್ವಾಮಿಹೃದಯರ ||
ಭುವನಸ್ತುತ್ಯರ ಪಾದಾಂಭೋರುಹ- |
ನಿವಹಂ ಮ<sup>೧</sup>ಚ್ಚಿತ್ಸರದೊಳ್ನೆಲಸುಗೆ |
ಭುವನತ್ರ*ಯಸ್ವಾಮಿಗಳಿವರೆಂದೆನಿಸುವ[ರಾವಗಮು]ತಿಶಯದಿಂದೆ[೧] || ೧೪ ||

ಧರೆಯ ವಚೋಮಳಮೆಲ್ಲಮುಮಂ ವ್ಯಾ- |
ಕರಣದೆ ಚೇತೋಮಳಮೆಲ್ಲಮುಮಂ |
ಪರಮಾಗಮದೆ ವ[೨]ಪು[೨]ರ್ಮಳಮೆಲ್ಲ[೩][ವನು][೩] ವೈದ್ಯಸಂಹಿತೆಯಿಂ ||
ಪರಿಹರಿಸಿ ಜಗತ್ತ್ರಯಮಂ ನಿಜಪದ[೪]- |
ಸರಸಿರುಹದ ಪರಿಮಳದಿಂ ಪಾಲಿಸಿ- |
ದುರುತರ [೫][ಮಹಿಮಾಸ್ಪದರಂ][೫] ನೆನೆವೆಂ ಶ್ರೀಪೂಜ್ಯಪಾದಸ್ವಾಮಿಗಳಂ || ೧೫ ||

ಸಕಳಂಕಂ ಮಿಥ್ಯಾಪಂಚಕಮೆಂ- |
ದಕಳಂಕಂ ಶ್ರೀಜಿನಶಾಸನಮೆಂ- |
ದು ಕುಮಾರ್ಗದ ಸನ್ಮಾರ್ಗದ ಹೇಯದು[೬]ಪಾದೇಯದ[೬] ತೆಱನಂ ||
ಪ್ರಕಟಂ ಮಾಡಿ ಧರಿತ್ರಿಗೆ ನೆಱೆ ತಾ- |
ರ್ಕಿಕಚಕ್ರೇಶ್ವರಪದವಿಗೆ ಪಕ್ಕಾ- |
ದಕಳಂಕಮುನೀಂದ್ರರ್ತವಿಸುಗೆ ವಾಗ್ವಜ್ರದೆ ಪರಮತಗಿರಿತತಿಯಂ || ೧೬ ||

ವಿದ್ಯಾನಂದರನಂತವೀರ್ಯರ[೭]ಾ- |
ವಿದ್ಯಾನಂತಾನಂತವೀರ್ಯದ ಮ- |
ಹೋದ್ಯತ್ತರ್ಕಸುಧಾನಿಧಿ ಬಳಸಿ ಧರಾತಳಮೆಲ್ಲಮುಮಂ ||
ಉದ್ಯದ್ವಾದಿಮಹಾಹಿವಿಷವನೆ[ೞ೦] |
ಚೋದ್ಯಮೆ ನಿರ್ವಿಷಮಂ ಮಾಳ್ಪುದು ಸ- |
ದ್ವಿದ್ಯಾಕಲ್ಪದ್ರುಮಚಿಂತಾಮಣಿಯೆ[ನಿಸಿದರೆ]ಮಗೀವು[೮]ದಮೃತಮಂ[೮] || ೧೭ ||

೧-೧ (ಕಖ) ಮಚ್ಚಿತ್ಸರಸಿಯೊಳತಿಶಯದಿಂ ನೆಲಸುಗೆ ಭುವನತ್ರಯ ಸ್ವಾಮಿಗಳಿವರೆಂದೆನಿಸುವರ. ಇದು ಪ್ರತಿ ಮಾಡುವವರ ದೋಷವಾಗಿರಬಹುದು. ೨-೨ (ಖ) ವಕಪು. (ಗ) ಘು. ೩-೩ (ಕಖಗ) ಮುಮಂ. ೪ (ಕಖ) ಕ್ಷ. ೫-೫ (ಕಖಗ) ಮಹಿಮರ ಸ್ವಾ. ಈ ಪದ್ಯದಲ್ಲಿ ಗಣಭಂಗದೋಷವಿದೆ. ೩೧ ಮಾತ್ರೆಗಳು. ೬-೬ (ಗ) ದುಪಾಯದ. ೭ (ಕಖಗ ರಂ. ೮-೮ (ಕಖ) ದಮೃತಸಹಿತಂ.

ಶ್ರುತದೇವತೆಯ ಚತುರ್ಭುಜದಂಡದ ।
ಚತುರನುಯೋಗದ ಮುಖ್ಯಭುಜಂ ವಿ- ।
ಸ್ಮೃತಮೆನಿ[ಸಿರುವ] *ಪ್ರಥಮಾನುಯೋಗದ ಸಾರಸಮುಚ್ಚಯಮಂ ॥
ಕ್ಷಿತಿಗೆಯ್ದೆ ಪ್ರಕಟಂ ಮಾಡಿ ಮಹಾ ।
ವಿತತ ಪುರಾಣವನೊಲವಿಂ ಪೇಟ್ದ- ।
ಪ್ರತಿಮರ ವೀರಸೇನಜಿನಸೇನರ ಮಹಿಮೆಯ ಪೇಟ್ವಡೆ[ಯೆ]ನ್ನಳವೆ ॥ ೧೮ ॥

ಸತತಂ ಜಂಬುದ್ವೀಪಮನಹಿಮ- ।
ದ್ಯುತಿ ಶಿಶಿರದ್ಯುತಿಗಳ್ ಬೆಳಗುವ ವೋ- ।
ಲತಿಶಯದಿಂ ತ್ರಿಜಗನ್ಮಂಗಳಸಿದ್ಧಾಂತವನೊಲವಿಂದೆ ॥
ಯತಿಜನಕೆಯ್ದೆ ಬೆಳಗಿ ಮಾಣ್ದರೊ ನೆಱೆ ।
[ವಿ]ತರಿಸಿದರ್ತೇಜಃ ಕೀರ್ತಿಗಳಂ ।
ಬ್ರತಿಪ[ರೆನಿಪ್ಪಾ] ಭೂತಬಲಿಪುಷ್ಪದಂತಾಚಾರ್ಯರು ನಯಧರರು ॥ ೧೯ ॥

ವ್ರತದುರ್ಧರತಪನಾಗಿರ್ದನುಪಮ- ।
ಗತಭೀಮಪರಾಕ್ರಮನಾತ್ಮೈಕಾ- ।
ಗ್ರತೆಯಿಂ ತಳೆದು ಸಮಸ್ತತೆಯಿಂ ಸಂಶೋಭಿಪನನವರತಂ ॥
ಯತಿಗಣಪತಿಭೂಷಣನಾಗಿರ್ದಾ- ।
ವಿತತಸುರುಚಿರಪ್ರಹರಣದಿಂ ಪರಿ- ।
ಗತನಿದು [ಚಿತ್ರತರ] ಸಿಂಹನಂದ್ಯಾಚಾರ್ಯನುದಾರತಪೋಮಹಿಮೆ ॥ ೨೦ ॥

ವಿಮಳ*ಪ್ರಮೇಯಕಮಳಮಾರ್ತಂಡಂ ।
ಸಮದೋಗ್ರನ್ಯಾಯ[ಕುಮುದ]ಚಂದ್ರಂ ।
ಕಮನೀಯೋಜ್ವಲಶಬ್ದಾಂಭೋರುಹಭಾಸ್ಕರನೆಂದೆನಿಪ ॥
ಸ್ವಮತದ ತರ್ಕವ್ಯಾಕರಣಂಗಳ- ।
ನಮಳಿನ ನಿಗಮನಿಧಾನಂಗಳನು- ।
ತ್ತಮರಭಿವರ್ಣಿಸುತಿರೆ ಪೇಟ್ದ *ಪ್ರಭಾಚಂದ್ರರ ಮಹಿಮೆಯುದಾರಳವೊ ॥ ೨೧ ॥

---

೧-೧ (ಕಖಗ) ಪ. ೨-೨ (ಗ) ದ್ಯುತಿಗಳ್ ಬೆಳಗುವ. ೩ (ಕಖಗ) ರೆ. ೪-೪ (ಕಖಗ) ಬಿತ್ತರಿಸಿ. ೫-೫ (ಕಖ) ಬ್ರತಿಪಭೂತಬಲಿಗಳ ೬-೬ (ಗ) ದ್ರುತ. ೭-೭ (ಗ) ಪ್ರಹರದಿಂ. ೮-೮ ಚಿತ್ರಂ. ೯-೯ (ಕಖಗ) ಕ. ೧೦-೧೦ (ಕಖ) ನಿಂದಂಗಳ; (ಗ) ನಿಧಂಗಳ.

ವೀರಜಿನೋದಿತ ತತ್ತ್ವಪದಾರ್ಥವಿ-|
ಚಾರಕರಂ ಸ್ಯಾದ್ವಾದಸಮಯವಿ- |
ಸ್ತಾರಕರಂ ನಯನಿಕ್ಷೇಪಪ್ರಮಿತಿಜಯೋದ್ಧಾರಕರಂ ||
ಸಾರಾಸಾರವಿಚಾರಕಳಾವಿ- |
ಸ್ತಾರಕರಂ ದುರ್ಮದಮನ್ಮಥಸಂ- |
ಹಾರಕರಂ ನೆನೆವೆಂ [ಪರಮ]ಶ್ರೀವರ್ಧಮಾನಭಟ್ಟಾರಕರಂ || ೨೨ ||

ಆಧಾತ್ರೀ[೧]ಸ್ತುತಸ್ತು[೧]ತ್ಯರ್ ಮೇರುಧ- |
ರಾಧರಧೈರ್ಯರಗಾಧಕ್ಷೀರಾಂ- |
ಭೋ[೨]ಧಿಸಮಾನ[೨] ಯಶೋ[ನಿಧಿ]ವೀರ್ಯರ್ಕಲಿಯುಗಗಣಧರರು ||
ಬೋಧನಿಧಾನರ್ಮನಸಿಜಮದಧಾ- |
ರಾಧರಪವಮಾನರ್ಮಗೀ[ಯಲಿ] |
[*]ಶ್ರೀಧರರ[೩]ಭಿನವನಾಮ[೩]ರ್ತ್ಯಾವ್ಯಕ್ತಮಳಿನ [೪]ವಾಕ್ಚತುರತೆಯಂ[೪] || ೨೩ ||

ಯೋಗಮತಂ [೫]ಭಸ್ಮಮಯಂ[೫] ಕ್ಷಣಿಕಂ |
ಸೌಗತ ಭಾಟ್ಟಂ[ಕರ್ಮಠ] [೬*]ಶ್ರುತ್ಯು- |
ದ್ಯೋ[೬]ಗಂ ಹಿಂಸಾನಂದಂ ಶೈವರು ನಿರ್ಗುಣ[೭]ವಾದಿಗಳೆ[೭] ||
ಏಗೆಯ್ದುಂ ಚಾರ್ವಾಕರನಾತ್ಮರ- |
ನಾಗಮಮೆಂದೊಲ್ಲದೆ ವಾಗ್ದೇವತೆ |
ರಾಗದೆ ವಾಸುಪೂಜ್ಯಮುನೀಂದ್ರರ ವದನಾಂ[ಭೋ]ಜದೊಳು ನೆಲಸಿದಳು || ೨೪ ||

[೮][ಅಂತೆನಿವಾ][೮]ವಾಸುಪೂಜ್ಯತ್ರೈ[*]ವಿ- |
[೯]ದ್ಯಾಂತೇವಾಸಿಗಳಂ ಜಿನಮತ ಸಿ- |
ದ್ಧಾಂತಸುಧಾರತ್ನಾಕರಸಂವರ್ಧಕರ ನಿಜಕರರಂ ||

---

೧-೧ (ಕಖ) ನುತಸ್ತುತ. ೨-೨ (ಕಖ) ಸಮ್ಮಾರ್. ೩-೩ (ಕಖ) ಮಭಿನಾವಮ್ಮಾರ್. ೪-೪ (ಕಖ) ವಾಕ್‌ಶ್ರೀಧರತೆಯನು. ೫-೫ (ಗ) ಭಾಸ್ಕರಮತಂ. ೬-೬ (ಕಖಗ) ಶ್ರುತ್ಯಾದ್ಯೋಗಂ. ೭-೭ (ಗ) ವಾದವಿಮೆಂ. ೮-೮ (ಕಖಗ) ಅಂತಾ. ೯ (ಕಖಗ) ತ.

[೧]ಸಂತಾನ[೧]ಸಮುದ್ಭವದೋರ್ವಲವಿ- |
ಕ್ರಾಂತಿತ ಮನ್ಮಥವಿಧ್ವಂಸಕರಂ |
ಶಾಂತರಸಾತ್ಮರನಭಯೇಂದುಗಳಂ ನೆನೆವೆಂ ಕಲಿಯುಗಗಣಧರರಂ || ೨೫ ||

ತತ್ಸುತರಂ ಮೂಲೋತ್ತರಗುಣಸಂ- |
[೨]ಪತ್ಸಂಪನ್ನ[೨]ರನಗಣಿತವಿಬುಧಜ- |
ಗತ್ಸಂಸೇವ್ಯರನಧ್ಯಾತ್ಮಾಖಿಲಶಾಸ್ತ್ರಸಮುನ್ನತರಂ ||
ಚಿತ್ಸುಖಮಯರಂ ನಿಜರತ್ನತ್ರಿತ- |
[೩]ಯೋತ್ಸವ[೩]ಮಂಗಳಮಹಿಮಾನ್ವಿತರಂ |
ಸೋತ್ಸಾಹದೆ [೪]ಕುಮುದೇಂದು[೪]ವ್ರತಿಪರ ಪದಕಮಳವನಾಂ ವಂದಿಸುವೆಂ || ೨೬ ||

ಮಾಧವ-ಗಿರಿಜಾಧವ-ವಾ[೫]ಗ್ಧವರಿ[ಂ] |
ಮಾಧವತನಯಂ [೬]ಗಂಭೀರ[ನು ತಾಂ][೬] |
ಮಾಧವಮಲಯಾನಿಳಚಂದ್ರಪ್ರಮುದಾಬಲದಿಂದೆಂದು ||
ಮಾಧವಚಂದ್ರತ್ರೈವಿದ್ಯಂ ನಯ- |
ಮಾಧವಸುತನಂ ಬೆಂಕೊಂ[[೭]ಡುಂ] ಜಯ- |
ಮಾಧವನಾದುದನಱಿಯ[ದು]ದೆ[ೀ] ಲೋಕಂ ಸಮರತಪೋಮಾಧವನಂ[೮] || ೨೭ ||

ತ್ರಿಭುವನಮಂಗಳಮಣಿದರ್ಪಣಸ- |
ನ್ನಿಭಮಂ ಸಕಲಪದಾರ್ಥಪ್ರಕಟನ- |
ವಿಭವವಿಲಾಸವಿಭೂಷಣಮಂ ಸಿದ್ಧಾಂತತ್ರಿತಯವನು ||
ಅಭಯೇಂದುವ್ರತಿನಾಥರ್ವಿಬುಧ- |
ಪ್ರ[ಭವ]ತತಿಗಳತಿಶಯಮೆನೆ ತಳೆದ- |
[೯]ಶುಭಲಕ್ಷಣಲಕ್ಷಿತ ಸರ್ವಾಂಗರನಂಗಧರಾಧರಪತಿಧರರು || ೨೮ ||

---

೧-೧ (ಖ) ಸ್ವಸ್ಥಾನ. ೨-೨ (ಕಖ)ಪತಜ್ಜಂನ. ೩-೩ (ಕಖ) ಯೋತ್ಸವರಂ. ೪-೪ (ಕಖ) ಕುಂದೇಂದು. ೫ (ಕಖ) ಗ್ದ. ೬-೬ (ಕಖ) ಗಭೀರನಾ. ೭ (ಕಖ) ಡೂ ವಿ. ೮ ಈ ಚರಣದ ಮೂಲಪಾಠದಲ್ಲಿ ಸಪ್ತಗಣಗಳಿವೆ. ೯ (ಕಖ) ಕ್ಷಣಮೆನೆ.

ವಷ್ಟರಲ್ಲಿ ೧ನೆಯ ಸಂಧಿಯಲ್ಲಿ ಪಂಚಪರಮೇಷ್ಠಿಗಳ ಸ್ತುತಿ, ಕುಕವಿನಿಂದೆ, ಸುಕವಿ ಸ್ತುತಿ, ತನ್ನ ಗುರುಪರಂಪರೆ ಮುಂತಾದ ವಿಷಯುಗಳು ಇಲ್ಲದಿರುವುದು ಕಂಡುಬಂದ ಮೇಲೆ ಆ ಸಂಧಿಯನ್ನು ಪುನಃ ಬರೆದಂತೆ ತೋರುತ್ತದೆ. ಈ ಹೊಸ ಸಂಧಿಯು ಮೂರೂ ಪ್ರತಿಗಳಲ್ಲಿ ಅರ್ಧಕ್ಕೆ ನಿಂತುಹೋಗಿದೆ. ಇತ್ಯರ್ಥವೇನಂದರೆ ಕವಿಯು ಅದು ಪೂರ್ಣವಾಗುವ ಪೂರ್ವದಲ್ಲಿಯೇ ಗತಿಸಿಹೋಗಿರಬೇಕು. ಹೀಗಾದ ಸಂಗತಿಯು ಕನ್ನಡ ಸಾಹಿತ್ಯಭಕ್ತರಿಗೆ ಹೊಸದಲ್ಲ. ನೇಮಿಚಂದ್ರನೂ ಹೀಗೆಯೇ ಹರಿವಂಶಪುರಾಣವನ್ನು ಅರ್ಧ ಬರೆದು ಗತಿಸಿರುವುದರಿಂದ ಅದಕ್ಕೆ ಅರ್ಧನೇಮಿ ಪುರಾಣವೆಂಬ ಹೆಸರು ಬಂದಿದೆ. ಕುಮುದೇಂದು–ಮುನೀಶ್ವರನು ತಾನು ೧ನೆಯ ಸಂಧಿಯನ್ನು ಪುನಃ ಬರೆದ ಕಾಲವನ್ನು ಹೀಗೆ ಹೇಳುತ್ತಾನೆ:—

ಪ್ರತಿಕೃತಿದಿವಸಂ ಭಕ್ತಿಮುದಾಪ್ರೇ- ।
ರಿತನುಜ್ಜುಗಿಸಿದೆನಿದನಾನೆಂತುಂ ।
ಶತದಳನಾಳದಿನಮೃತಾಂಬುಧಿಯಂ ತವೆ ಪೀರುವೆನೆಂಬವನಂತೆ ॥

ಪೀ. ಸಂ. ೪೮.

ಇಲ್ಲಿ ಪ್ರತಿಕೃತಿ ದಿವಸಂ ಎಂದರೆ ಪ್ರತಿ ಮಾಡಿದ ( Copied ) ದಿವಸವಲ್ಲ. ಮತ್ತೊಮ್ಮೆ ಅಥವಾ ಪುನಃ ರಚಿಸಿದ ದಿವಸ. ಕವಿಯು ತನ್ನ ಗ್ರಂಥವನ್ನು ತಾನೇ ಪ್ರತಿಮಾಡಿದ ದಿವಸವನ್ನು ಹೇಳುವುದಕ್ಕೆಂದು ಒಂದು ಪದ್ಯವನ್ನು ರಚಿಸಿ ಕಾವ್ಯದಲ್ಲಿ ಇರಿಸಲಾರನು. ಭಕ್ತಿಯು ಎಂಟರ ಸಂಖ್ಯೆಯ ಸೂಚಕವು, ಮದವೂ ಎಂಟರ ಸೂಚಕವು, ಶತದಳವು ನೂರರ ಸೂಚಕವು ಮತ್ತು ಅಮೃತಾಂಬುಧಿಯು ಒಂದರ ಸೂಚಕವು. ಇದರ ಮೇಲಿಂದ ಪ್ರತಿಕೃತಿಯ ಕಾಲವು ಶಕ ೧೧೮೮ ಎಂದು ಹೇಳಿದ ಹಾಗಾಯಿತು. ಇದಕ್ಕೆ ಸರಿಯಾದ ಕ್ರಿಸ್ತಾಬ್ದಕಾಲವು ೧೨೬೬. ಅಂದರೆ ಪೀಠಿಕಾ ಸಂಧಿಯು ೧೨೬೬ ರಲ್ಲಿ ರಚಿತವಾದಂತಾಯಿತು. ಹೀಗೆ ಹೇಳುವಾಗ ಕವಿಯು ಶ್ಲೇಷೆಯನ್ನೂ ಇಟ್ಟುಕೊಂಡಿದ್ದಾನೆ.

ಕವಿಯು ತನ್ನ ಕಾಲವನ್ನು ಹೀಗೆ ಗೂಢವಾಗಿ ಹೇಳಿರಬಹುದೇ ? ಎಂಬುದೊಂದು ಆಕ್ಷೇಪ. ಈ ಮುಂದಿನ ಪದ್ಯವನ್ನು ನೋಡಿ:—

ಶಕಸಮಗತಿ ಋತುಯುಗಶಶಿ ।
ನಿಕರಾಂಕಂ ಚಿತ್ರಭಾನು [ ಸಂವತ್ಸರ ] ಕಾ- ॥
ರ್ತಿಕ ಸಿತ ಸಪ್ತಮಿ [ ದಿನದೊಳ್ ] ।
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ ॥

ಎಂದು ರನ್ನನು ತನ್ನ ಗದಾಯುದ್ಧವನ್ನು ಶಕ ೯೦೪ ಚಿತ್ರಭಾನುಸಂವತ್ಸರದಲ್ಲಿ ರಚಿಸಿದಂತೆ ಹೇಳುತ್ತಾನೆ. ನಯಸೇನನು ತನ್ನ ಕಾಲವನ್ನು ಹೀಗೆ ಹೇಳಿದ್ದಾನೆ.

ಗಿರಿಶಿಖಿವಾಯುಮಾರ್ಗ ಶಶಿಸಂಖ್ಯೆಯೊಳಾವಗವೊಂದಿ ವರ್ತಿಸು- ।
ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್.... ||

ಎಂದರೆ ಶಕ ೧೦೩೭ ರಲ್ಲಿ ಆತನು ತನ್ನ ಧರ್ಮಾಮೃತವನ್ನು ಬರೆದನಂತೆ. ಇನ್ನೂ ಕೆಲವು ಉದಾಹರಣೆಗಳನ್ನು ಕೊಡಬಹುದು. ಆದರೆ ಆದರಿಂದ ಬೇಸರವುಂಟಾಗುವುದೆಂಬ ಭೀತಿ. ಸಾರಾಂಶವೇನೆಂದರೆ ಗೂಢವಾಗಿ ಕಾಲವನ್ನು ಹೇಳುವ ಪದ್ಧತಿಯೊಂದಿತ್ತು. ಆದನ್ನು ಕವಿಯು ಅನುಸರಿಸಿ ತಾನು ಪೀಠಿಕಾಸಂಧಿಯನ್ನು ೧೧೮೮ರಲ್ಲಿ ಅಂದರೆ ಕ್ರಿ. ಶ. ೧೨೬೬ರಲ್ಲಿ ಬರೆದಂತೆ ಹೇಳುತ್ತಾನೆ.



# ಶ್ರೀಕುಮುದೇಂದುರಾಮಾಯಣದ ಕಥೆ.

## ಪೀಠಿಕಾ ಸಂಧಿ.

ಅನಂತಾನಂತ ವಿಭುವೆನಿಸುವ ಆಕಾಶದ ಮಧ್ಯದಲ್ಲಿ ಹದಿನಾಲ್ಕು ರಜ್ಜುವಿನ ಪ್ರಮಾಣದಿಂದ ಶೋಭಿಸುತ್ತಿರುವ ಮತ್ತು ವೇತ್ರಾಸನ-ಝಲ್ಲರಿ-ಮುರಜಗಳ ಹಾಗೆ ಒಪ್ಪುತ್ತಿರುವ ಪಾತಾಲ-ಮಧ್ಯ-ಊರ್ಧ್ವಲೋಕಗಳೆಂಬ ಲೋಕತ್ರಯಗಳು ಕ್ರಮವಾಗಿ ಉರಗನರಾಮರರಿಂದ ಒಪ್ಪುತ್ತಿರುವುವು. ಅವುಗಳಲ್ಲಿ ಮಧ್ಯಲೋಕದ ನಟ್ಟನಡುವೆ ಮೇರುಪರ್ವತವಿರುವದು. ಅದರ ದಕ್ಷಿಣ ದಿಕ್ಕಿನಲ್ಲಿ ಭರತಕ್ಷೇತ್ರದ ಆರ್ಯಾಖಂಡವು ಅಡಕೆ, ಮಾವು, ಹಲಸು, ಕಪ್ಪುರ ಮುಂತಾದ ಗಿಡಗಳ ವನಗಳಿಂದ ಶೋಭಿಸುತ್ತಿತ್ತು. ಅಲ್ಲಿ ಚತುರ್ದಶ ಮನುಗಳೂ, ಚತುರ್ವಿಂಶತಿ ತೀರ್ಥಂಕರರೂ, ನವಬಲವಾಸವರೂ, ನವನಾರದರೂ, ಏಕಾದಶರುದ್ರರೂ ಆಗಿಹೋದರು. ಅಲ್ಲಿ ಗಂಗಾ, ಸಿಂಧು ಮುಂತಾದ ನದಿಗಳು ಹರಿಯುತ್ತವೆ. ರಜತಪರ್ವತವಿದೆ. ಆ ಭರತಖಂಡದಲ್ಲಿ ಕೋಶಲದೇಶವು ರಂಜಿಸುತ್ತದೆ. ಅಲ್ಲಿ ಅಡಕೆ, ತೆಂಗು, ಕಂಚಿ, ಹಲಸು ಮುಂತಾದ ಫಲಗಳೂ, ಬತ್ತ ಮುಂತಾದ ಸಸ್ಯಾದಿಗಳೂ ನಾನಾ ತರದ ಹೂಗಳೂ ಹೇರಳವಾಗಿ ಬೆಳೆಯುತ್ತಿದ್ದವು. ಆ ದೇಶದಲ್ಲಿ ಸರಯೂ ನದಿಯು ಹರಿಯುತ್ತದೆ. ಅದರ ಎರಡೂ ದಂಡೆಗಳ ಮೇಲಿನ ಉದ್ಯಾನಗಳು ನಾನಾತರದ ಫಲಪುಷ್ಪಭರಿತವಾಗಿದ್ದುವು.

---

## ೧ ನೆಯ ಸಂಧಿ.

ಆ ದೇಶಕ್ಕೆ ಭೂಷಣವಾಗಿರುವುದು ಅಯೋಧ್ಯೆಯು. ಅಲ್ಲಿ ಇಕ್ಷ್ವಾಕುವಂಶದ ನಾಭಿರಾಜನು ಅರಸನು. ಆತನ ಹೆಂಡತಿಯು ಮರುದೇವಿಯು. ಅವರ ಮಗನು ಪುರುಜಿನಾಧಿಪತಿಯು. ಆತನೇ **ಆದಿನಾಥನು.** ಆತನ ಮಗನು **ಭರತೇಶ** ಚಕ್ರವರ್ತಿಯು. ಆತನ ಮಗನು ಅರ್ಕಕೀರ್ತಿಯು. ಆತನಿಂದ ಆ ವಂಶವು ಮುನಿಸುವ್ರತ ತೀರ್ಥಂಕರರ ವರೆಗೆ ನಿರಾಂತಕವಾಗಿ ಸಾಗುತ್ತ ಬಂದಿತು. ಆಗ ಆ ಕುಲದೊಳಗೆ ವಿಜಯರಥನೆಂಬ ಅರಸನಿದ್ದನು. ಆತನ ಪಟ್ಟದರಸಿಯು ಹೇಮಮಾಳಿಕೆ. ಅವರ ಮಗನು ಸುರೇಂದ್ರಮನ್ಯುವು. ಆತನ ಅರಸಿಯು ಕೀರ್ತಿಶ್ರೀ. ಅವರ ಮಕ್ಕಳು ವಜ್ರಬಾಹು ಪುರಂದರರು. ಒಂದು ದಿನ ವಿಜಯರಥನು ಓಲಗಶಾಲೆಯಲ್ಲಿ ಅರಸರ ನಡುವೆ ಒಪ್ಪಿ ಕುಳ್ಳಿರುವಾಗ ನಾಗಪುರದ ಅರಸು ಇಭವಾಹನನ ಮಗನು ಉದಯಸೌಂದರನು ಬಂದು ಕಾಣಿಕೆಯನ್ನರ್ಪಿಸಿ ತನ್ನ ತಂಗೆಯಾದ ಗುಣೋ

ದಯೆಯನ್ನು ವಿಜಯುರಥನ ಮೊಮ್ಮಗನಾದ ವಜ್ರಬಾಹುವಿಗೆ ಕೊಟ್ಟು ಮದುವೆ ಮಾಡಬೇಕೆಂಬ ಉದ್ದೇಶದಿಂದ ತನ್ನ ತಂದೆಯು ತನ್ನನ್ನು ಕಳುಹಿಸಿದನು, ಎಂದು ಹೇಳಲು ಆವನು ಅದಕ್ಕೆ ಸಂತೋಷದಿಂದ ಸಮ್ಮತಿಸಿದನು; ಮತ್ತು ಒಂದು ಶುಭ ಮುಹೂರ್ತದಲ್ಲಿ ಆತನನ್ನು ವೈಭವದಿಂದ ಪರಿವಾರದೊಡನೆ ಕಳುಹಿಸಿದನು. ಅವರಿಬ್ಬರೂ ಬರುತ್ತಾ ದಾರಿಯಲ್ಲಿ ವಸಂತಗಿರಿಯ ಹತ್ತಿರ ಗುಣಸಾಗರಭಟ್ಟಾರಕರನ್ನು ಕಂಡು, ಬಲಗೊಂಡು, ಧರ್ಮವನ್ನು ಕೇಳಿ ದೀಕ್ಷೆಗೊಂಡರು. ಇತ್ತ ವಿಜಯುರಥನು ಪುರಂದರನಿಗೆ ರಾಜ್ಯವನ್ನೊಪ್ಪಿಸಿ ಶತಮನುಷ್ಯಸಹಿತವಾಗಿ ದೀಕ್ಷೆವಹಿಸಿದನು. ಆತನ ಮಗನು ಕೀರ್ತಿಧರನು; ಆತನ ಮಗನು ಸುಕೋಶಲನು; ಹೆಂಡಿತಿ ವಿಚಿತ್ರಮಾಲೆ. ಅವರ ಮಗನು ಹಿರಣ್ಯಗರ್ಭ. ಸೌಂದರನು ಅವನ ಮಗನು. ಅವನ ಮಗನು ಸಿಂಹರಥನು. ಆತನ ಮಗನು ಬ್ರಹ್ಮರಥ; ಆತನ ಮಗನು ಚತುರ್ಮುಖನು; ಆತನ ಮಗನು ಹೇಮರಥನು; ಆತನ ಮಗನು ಇಂದುರಥನು; ಇಂದುರಥನಿಂದ ಭಾನುರಥನು ಹುಟ್ಟಿದನು. ಆತನ ತರುವಾಯ ಆ ವಂಶದಲ್ಲಿ ಮಯನು ಹುಟ್ಟಿದನು; ಮುಂದೆ ಮಾಂಧಾತನು, ವೀರಸೇನ, ಕಮಳಬಂಧು, ವಸಂತತಿಲಕ, ಕುಬೇರದತ್ತ, ಮೃಗಾರಿ, ದಮನ, ದ್ವಿಪರಥ, ಹಿರಣ್ಯಕಶಿಪು, ಅರ್ಕರಥ, ದಿಳೀಪ, ರಘುವೀರ ಮೊದಲಾದ ಅರಸರಾದರು. ಅವರಲ್ಲಿ ಅನರಣ್ಯನು ವಿದ್ಯಾವಿಶಾರದನೂ, ಪುಣ್ಯವಂತನೂ, ದಿಗಂತಕೀರ್ತಿಯುತನೂ ಆಗಿದ್ದನು. ಆತನ ಮಕ್ಕಳು ಅನಂತರಥ-ದಶರಥರು. ಒಂದು ದಿನ ಅನರಣ್ಯನು ತನ್ನ ಮಕ್ಕಳನ್ನು ಕರೆದು ದಶರಥನಿಗೆ ಪಟ್ಟಗಟ್ಟಿ ತಾನೂ ಅನಂತರಥನೂ ಅಭಯಘೋಷ ಮುನಿಪರ ಹತ್ತಿರ ದೀಕ್ಷೆಗೊಂಡರು.

---

## ೨ ನೆಯು ಸಂಧಿ.

ದಶರಥನು ಬಿದಿಗೆಯ ಚಂದ್ರನಂತೆ ಬೆಳೆದು ಯೌವನಸಂಪನ್ನನಾಗಿ ಪೃಥ್ವಿಯನ್ನು ಪಾಲಿಸಹತ್ತಿದನು. ಪ್ರಜೆಗಳೆಲ್ಲರೂ ಸುಖಿಯಾಗಿದ್ದರು. ಆವ ಕೊರತೆಯೂ ಇಲ್ಲದುದರಿಂದ ಕಾಮಧೇನುವನ್ನು ಪಶುವೆಂದು ತಿರಸ್ಕರಿಸುವ ಹಾಗಾಯಿತು. ದಶರಥನ ಆಳಿಕೆಯಲ್ಲಿ ಅಪರಾಜಿತೆ–ಸುಮಿತ್ರೆ-ಸುಪ್ರಭೆ ಎಂಬ ಮೂವರು ಆತನ ಹೆಂಡಿಂದಿರು. ಒಂದು ದಿನ ಆತನು ಒಡ್ಡೋಲಗದಲ್ಲಿರುವಾಗ ನಾರದನು ಬಂದನು. ಅರಸನು ಅವನನ್ನು ಕಂಡು ಎದುರಿಗೆ ಹೋಗಿ ಬಲಗೊಂಡು ನಮೋಸ್ತು ಮುಂತಾದ ಆದರಾತಿಥ್ಯಗಳನ್ನು ಮಾಡಿ ‘ ತಾವು ಇಲ್ಲಿಗೆ ಬಂದಿರುವ ಸಂಗತಿಯು ನನ್ನಲ್ಲಿ ಬಹಳ ಕುತೂಹಲತೆಯನ್ನು ಹುಟ್ಟಿಸುತ್ತದೆ. ಆ ಸಂಗತಿಯನ್ನೆಲ್ಲ ನನಗೆ ಹೇಳಬೇಕೆಂದು ದಶರಥನನ್ನೂ ಮಂತ್ರಿ ಸಮುದ್ರಹೃದಯನನ್ನೂ ಏಕಾಂತ ಸ್ಥಳಕ್ಕೆ ಕರೆದೊಯ್ದು ಹೀಗೆ ಹೇಳಿದನು. ‘ ಶಾಂತಿಜಿನಪತಿವಂದನಾರ್ಥವಾಗಿ ನಾನು

ಲಂಕಾಪುರಕ್ಕೆ ಹೋಗಿರಲು ಅಲ್ಲಿ ಸಾಗರಬುದ್ಧಿಯೆಂಬವನು ಜಾನಕಿಯು ದೆಸೆಯಿಂದ ದಾಶರಥಿಯು ಕೂಡ ದಶವದನನು ಕಾದಿ ಮರಣಹೊಂದುವನು ಎಂದು ವಿಭೀಷಣನಿಗೆ ಹೇಳಿದನು. ಅದನ್ನು ಕೇಳಿ ಆತನು ಬಹಳ ಸಿಟ್ಟಾಗಿ ಕಾರಣವನ್ನು ನಾಶಮಾಡಿದರೆ ಕಾರ್ಯವು ತನ್ನಿಂದ ತಾನೇ ನಾಶವಾಗುತ್ತದೆ. ಆದುದರಿಂದ ದಶರಥಜನಕನನ್ನು ಸಂಹರಿಸಿದರೆ ಹತ್ತೂ ದಿಕ್ಕುಗಳಲ್ಲಿ ರಾವಣನನ್ನು ಗೆಲ್ಲುವವರಾರು? ಎಂದು ಆ ಉದ್ಯೋಗದಲ್ಲಿರುವನು. ಅದನ್ನು ನಿಮಗೆ ತಿಳಿಸಲು ಇತ್ತ ಬಂದೆನು. ಇನ್ನು ಮೇಲೆ ಈ ಸಂಗತಿಯನ್ನು ಜನಕನಿಗೆ ತಿಳಿಸುತ್ತೇನೆ.' ಎಂದು ಹೇಳಿ ಆಕಾಶಮಾರ್ಗವಾಗಿ ಹೋದನು.

ಇತ್ತ ಸಮುದ್ರಹೃದಯನು ದಶರಥನ ಕೋಪಾವಿರ್ಭಾವವನ್ನು ಶಾಂತಗೊಳಿಸಿ ಆತನ ರೂಪವನ್ನಡಗಿಸಿ ಮಂಗಳಪುರದರಸುಮಗಳು ಕೈಕೆಯಿಯ ಸ್ವಯಂವರಕ್ಕೆ ಪರಿಜನಕ್ಕೆ ತಿಳಿಯದಂತೆ ಕಳಿಸಿ ಯಾರಿಗೂ ತಿಳಿಯದ ಹಾಗೆ ಚಿತ್ರದ ದಶರಥನನ್ನಿಟ್ಟುಕೊಂಡು ಓಲಗಿಸುತ್ತಿದ್ದನು. ಜನಕನಾದರೂ ಆ ಸಂಗತಿಯನ್ನು ನಾರದನ ಮುಖದಿಂದ ತಿಳಿದು ಆಪ್ತಮಂತ್ರಿಯನ್ನು ವಿಚಾರಿಸಿ ವೇಷಾಂತರಿಸಿ ಬಂದು ದಶರಥನನ್ನು ಸೇರಿದನು. ವಿಭೀಷಣನು ಬಂದು ಚಿತ್ರದ ದಶರಥಜನಕರ ತಲೆಗಳನ್ನು ಕೊಯ್ದುಕೊಂಡು ಹೋಗಿ ಸಮುದ್ರಕ್ಕೆ ಹಾಕಿದನು. ಅಯೋಧ್ಯಾಪುರ-ಮಿಥಿಳಾಪುರಗಳ ಜನರು ದುಃಖಿಸುತ್ತಿರಲು ಮಂತ್ರಿಗಳು ಅವರನ್ನು ಸಮಾಧಾನಗೊಳಿಸಿ ಸುಖವಾಗಿದ್ದರು. ಅತ್ತ ದಶರಥ-ಜನಕರು ಅಲೆಯುತ್ತ ಮಂಗಳಪುರಕ್ಕೆ ಬಂದು ಸ್ವಯಂವರಮಂಟಪಕ್ಕೆ ಬಂದು ಅದನ್ನು ಪ್ರವೇಶಿಸಿದರು. ಅವರು ಅಲ್ಲಿನ ಒಂದು ಮಂಚದ ಸಮೀಪಕ್ಕೆ ಬರುವಷ್ಟರಲ್ಲಿ ಸೌಂದರ್ಯದಿಂದ ರತಿಯನ್ನು ಮಿಕ್ಕುವ ಕೈಕೆಯು ಆ ಮಂಟಪಕ್ಕೆ ಬಂದಳು. ಅವಳು ಮಂಗಳಮಾಲೆಯನ್ನು ಕೈಯಲ್ಲಿ ಹಿಡಿದುಕೊಂಡು ಕಂಚುಕಿಯ ಸಂಗಡ ಎಲ್ಲ ಅರಸುಮಕ್ಕಳನ್ನು ನೋಡುತ್ತ ಆತನು ಅವರ ವಿಷಯವಾಗಿ ಹೇಳಿದ ಸಂಗತಿಗಳನ್ನು ಕೇಳುತ್ತ ಬರುತ್ತಿದ್ದಳು. ಚೇರ ಚೋಳ ಕಳಿಂಗ ಪಲ್ಲವ ಮಗಧಮುಂತಾದ ಅರಸರನ್ನೊಲ್ಲದೆ ಬಲಭಾಗದಲ್ಲಿದ್ದ ಉದಾರಗಂಭೀರಾಕೃತಿಯ ದಶರಥನನ್ನು ಮೆಚ್ಚಿ ಆತನಿಗೆ ಮಾಲೆಯನ್ನು ಹಾಕಿದಳು. ಮಂಗಳವಾದ್ಯಗಳು ಬಾರಿಸಿದುವು. ತರುಣಿಯರು ಮಂಗಳಾರತಿಯೆತ್ತಿದರು. ಆದರೆ ಕೈಕೆಯು ಏನೂ ತಿಳಿಯದೆ ದೇಶಾಂತರಿಯನ್ನು ವರಿಸಿದಳೆಂದು ಉಳಿದ ಅರಸುಮಕ್ಕಳು ಭ್ರಮಿಸಿ, ಎಲ್ಲರೂ ಕೂಡಿ ಆತನನ್ನು ಗೆದ್ದು ಕನ್ನೆಯನ್ನು ಅಪಹರಿಸೋಣವೆಂದು ಹೊರಟರು. ಅದನ್ನು ತಿಳಿದು ಕೈಕೆಯ ತಂದೆ ಶುಭಮತಿಯು ರಥವನ್ನು ಸಿದ್ಧಪಡಿಸಿಕೊಂಡು ಬಂದು 'ನೀವಿಬ್ಬರೂ ಇದರೊಳಗೆ ಕುಳಿತು ಪಟ್ಟಣಕ್ಕೆ ತೆರಳಿರಿ. ನಾನು ಇವರೆಲ್ಲರನ್ನು ಸೋಲಿಸಿ ಓಡಿಸಿ ಬರುವೆನು' ಎಂದನು. ಅದನ್ನು ಒಪ್ಪದೆ ದಶರಥನು ವೈರಿಗಳ ಕೂಡ ಯುದ್ಧಮಾಡಲು ಕೈಕೆಸಹಿತವಾಗಿ

ರಥದಲ್ಲಿ ಕುಳಿತು ಹೊರಟನು. ಯುದ್ಧವು ಭರದಿಂದ ಸಾಗಿತು. ದಶರಥನೊಬ್ಬನೇ ಒಂದೇ ರಥದಿಂದ ಅನೇಕ ರಾಜಪುತ್ರರನ್ನು ಸೋಲಿಸಿದನು. ಅಷ್ಟರಲ್ಲಿ ಆತನ ಸಾರಥಿಯು ಬಿದ್ದನು. ಧ್ವಜವು ಸಡಲಿಸಿತು. ಕೂಡಲೆ ಕೈಕೆಯು ರಥವನ್ನು ಜೋಡಿಸಿ ಸಾರಥಿಯ ಕಾರ್ಯವನ್ನು ಕೈಕೊಂಡಳು. ಹೇಮಪ್ರಭ ಮುಂತಾದವರು ಸೋತು ಹೋದರು. ಅದನ್ನು ಕಂಡು ಉಳಿದ ಅರಸುಮಕ್ಕಳು ಶರಣುಬರಲು, ಅವರಿಗೆ ಅಭಯವಿತ್ತನು. ಹೀಗೆ ಜಯಶೀಲನಾಗಿ ದಶರಥನು ಕೈಕೆಸಹಿತವಾಗಿ ಆನೆಯನ್ನೇರಿ ಆತನ ಎಡಕ್ಕೂ ಬಲಕ್ಕೂ ಶುಭಮತಿ-ಜನಕರು ಆನೆಯನ್ನೇರಿ ವಿಜಯೋತ್ಸವದಿಂದ ಮಂಗಳಪುರದ ಶೋಭೆಯನ್ನು ನೋಡುತ್ತ ಬಂದರು. ಅವರು ದಶರಥ-ಜನಕರೆಂದು ತಿಳಿದ ಮೇಲೆ ಶುಭಮತಿಗೆ ಬಹಳ ಆನಂದವಾಯಿತು. ದಶರಥನ ಮದುವೆಯಾಯಿತು. ದೀನಾನಾಥರು ದಾನದಿಂದ ಸಂತುಷ್ಟರಾದರು. ದಶರಥಜನಕರು ಕೆಲವು ದಿನಗಳ ವರೆಗೆ ಅಲ್ಲಿದ್ದು ತಿರುಗಿ ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದರು. ಒಂದು ದಿನ ಆಪ್ತಜನರ ಕೂಡ ದಶರಥನು ಯುದ್ಧಗೋಷ್ಠಿಯಲ್ಲಿ ತೊಡಗಿರಲು ಕೈಕೆಯೂ ಅಲ್ಲಿಯೇ ಇದ್ದಳು. ಅವಳನ್ನು ನೋಡಿ ದಶರಥನು ಹೀಗೆಂದನು—"ಇವಳು ಸಾರಥಿಯ ಕಾರ್ಯವನ್ನು ಕೈಕೊಳ್ಳದಿದ್ದರೆ ಅಂದಿನ ಯುದ್ಧದಲ್ಲಿ ನನಗೆ ಜಯವೇ ದೊರೆಯುತ್ತಿರಲಿಲ್ಲ. ಆದುದರಿಂದ ನಾನು ನಿನಗೆ ಮೆಚ್ಚಿದ್ದೇನೆ. ಬೇಕಾದ ವರವನ್ನು ಬೇಡು." ಅದಕ್ಕೆ ಉತ್ತರವಾಗಿ ಅವಳು ತನಗೆ ಆಗಬೇಕಾದುದೇನೂ ಇಲ್ಲವೆಂದೂ, ವರಗಳು ಆತನ ಭಂಡಾರದಲ್ಲಿಯೇ ಇರಬೇಕೆಂದೂ ಕೇಳಿಕೊಂಡಳು.

ಹೀಗೆ ನಾಲ್ವರು ಕಾಂತೆಯರ ಸಂತೋಷಕ್ಕನುಕೂಲವಾಗಿ ದಶರಥನು ಅಪರಾಜಿತೆಯನ್ನು ಪಟ್ಟದರಸಿಯನ್ನು ಮಾಡಿ ಸುಖದಿಂದಿರಲು ಅಪರಾಜಿತೆಯು ಋತುಮತಿಯಾಗಿ ಚತುರ್ಥಸ್ನಾನಾನಂತರ ರಾತ್ರಿಯಲ್ಲಿ ಸುಖಸುಪ್ತೆಯಾಗಿ ಬೆಳಗಿನ ಜಾವದಲ್ಲಿ ಕನಸಿನಲ್ಲಿ ಮದಗಜ, ಸಿಂಹ, ಸೂರ್ಯ, ಚಂದ್ರ ಮುಂತಾದ ಮಂಗಳ ವಸ್ತುಗಳನ್ನು ಕಂಡಳು. ಮರುದಿನ ಆ ಕನಸನ್ನು ತನ್ನ ಪತಿಗೆ ಹೇಳಲು ಆತನು ಅದರ ಅರ್ಥವನ್ನು ವಿಶದೀಕರಿಸಿ ದಾನಿಯೂ ಪರಾಕ್ರಮಿಯೂ ತೇಜಸ್ವಿಯೂ ಕಳಾಧರನೂ ಆದ ಮಗನು ಹುಟ್ಟುವನೆಂದು ಹೇಳಿದುದನ್ನು ಕೇಳಿ ಸಂತೋಷದಿಂದಿದ್ದಳು. ಅವಳ ಗರ್ಭವು ಬೆಳೆದು ಒಂಬತ್ತು ತಿಂಗಳು ತುಂಬಿದ ಮೇಲೆ ಅವಳು ಗಂಡುಮಗುವನ್ನು ಹೆತ್ತಳು. ಆಗ ಅನೇಕ ಶುಭ ಶಕುನಗಳಾದುವು. ದಶರಥನು ಜಾತಕರ್ಮವನ್ನು ಮಾಡಿದನು. ಹತ್ತನೆಯ ದಿನ ಶುಭಮುಹೂರ್ತದಲ್ಲಿ ಮಗುವಿಗೆ ರಾಮನೆಂದು ಹೆಸರಿಟ್ಟರು.

ಕೆಲವು ದಿನಗಳ ತರುವಾಯ ಸುಮಿತ್ರೆ, ಕೈಕೆ, ಸುಪ್ರಭೆಯರು ಗರ್ಭವತಿಯರಾಗಿ ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮಕ್ಕಳನ್ನು ಕ್ರಮವಾಗಿ ಹೆತ್ತರು. ಅವರು ಶುಕ್ಲಪಕ್ಷದ ಚಂದ್ರನಂತೆ ಬೆಳೆದು ಸಕಲ ವಿದ್ಯಾಕುಶಲರಾದರು. ಒಂದುದಿನ ಇವರೆಲ್ಲರೂ ಒಡ್ಡೋಲಗದಲ್ಲಿರಲು ಜನಕರಾಜನ ಕಡೆಯಿಂದ ಚರನೊಬ್ಬನು ಬಂದು

ನಮಿಸಿ, ತಾನು ತಂದ ಕಾಣಿಕೆಗಳನ್ನರ್ಪಿಸಿ, ಓಲೆಯೊಂದನ್ನು ಮುಂದಿಟ್ಟನು. ಅದನ್ನು ಸೇನಬೋವನು ತನ್ನ ಮಗಳು ಜಾನಕಿಯನ್ನು ರಾಮನಿಗೆ ಈ ಮೊದಲೇ ಕೊಟ್ಟು ಲಗ್ನಕ್ಕೆ ಉದ್ಯೋಗಿಸುತ್ತಿರಲು "ಒಬ್ಬ ಖೇಚರನು ಕಪಟದಿಂದ ತನ್ನನ್ನು ಎತ್ತಿಕೊಂಡು ಹೋದನು. ಆ ಮುಂದಿನ ಸಂಗತಿಯನ್ನು ದೂತನಿಂದ ತಿಳಿದುಕೊಳ್ಳಬೇಕು," ಎಂದು ಓದಿದನು. ಅದನ್ನು ಕೇಳಿ ರಾಮ-ಲಕ್ಷ್ಮಣ-ಭರತ-ಶತ್ರುಘ್ನರು ಆ ಖೇಚರನ ಮೇಲೆ ತಮ್ಮ ಕೋಪಾಟೋಪವನ್ನು ತೋರಿಸಲು ಉದ್ಯುಕ್ತರಾಗಿ ತಂದೆಯ ಅಪ್ಪಣೆಯನ್ನು ಕೇಳಹತ್ತಿದರು. ಅಷ್ಟರಲ್ಲಿ ಮಂತ್ರಿ ಸಮುದ್ರಹೃದಯನು ಚರನು ಹೇಳಿದುದನ್ನು ಕೇಳಿಕೊಂಡು ಆಮೇಲೆ ಯುದ್ಧಕ್ಕೆ ಸಿದ್ಧರಾಗಬಹುದೆಂದನು. ಅದನ್ನು ಕೇಳಿ ದೂತನು ಜನಕರಾಜನು ತಿರುಗಿ ಬಂದು ಜಾನಕಿಯ ಸ್ವಯಂವರವನ್ನು ಆರಂಭಿಸಿದ್ದಾನೆನ್ನಲು ಎಲ್ಲರಿಗೂ ಆಶ್ಚರ್ಯವಾಯಿತು. ಅದನ್ನು ಕೇಳಿ ಜನಕರಾಜನ ಸಕಲ ವೃತ್ತಾಂತವನ್ನು ಹೇಳೆನ್ನಲು ಆತನು ಹೇಳತೊಡಗಿದನು.

---

## ೩ ನೆಯ ಸಂಧಿ.

ಮಿಥಿಳೇಶ್ವರನ ವಲ್ಲಭೆ ವಿದೇಹಿಯು ಗರ್ಭವತಿಯಾಗಿ ಅವಳಿ-ಮಕ್ಕಳನ್ನು ಹೆತ್ತಳು. ಅವರ ಜಾತಕರ್ಮ ಸಮಯದಲ್ಲಿ ಅಸುರನೊಬ್ಬನು ಸಿಟ್ಟಿನಿಂದ ಆ ಸೂತಿಕಾಗೃಹವನ್ನು ಪ್ರವೇಶಿಸಿ ಗಂಡುಮಗುವನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿ ಹೋದನು. ಆದರಿಂದ ಮಿಥಿಳೆಯಲ್ಲಿ ಎಲ್ಲ ಕಡೆಯಲ್ಲಿ ಹಾಹಾಕಾರವುಂಟಾಯಿತು. ಎಲ್ಲರೂ ದುಃಖದಲ್ಲಿ ಮುಳುಗಿರಲು ಒಬ್ಬ ನಿಮಿತ್ತಕನು ಬಂದು 'ಅಂಜಬೇಡಿ, ನಿಮ್ಮ ಮಗನು ಖೇಚರೇಶ್ವರನಾಗಿ ನಿಮ್ಮನ್ನು ಕಾಣುವನು' ಎಂದು ಹೇಳಲು ಜನಕನು ತುಸು ಸಮಾಧಾನಗೊಂಡು ವಿದೇಹಿಯನ್ನು ಸಂತವಿಸಿದನು. ಆ ಮೇಲೆ ತಮ್ಮ ನಂದನೆಯ ಜಾತಕರ್ಮವನ್ನು ಮಾಡಿ ಹತ್ತನೆಯ ದಿನದಲ್ಲಿ ಸೀತೆಯೆಂದು ಹೆಸರಿಟ್ಟು ಕಾಪಾಡುತ್ತಿದ್ದರು. ಅವಳು ಶುಕ್ಲಪಕ್ಷದ ಚಂದ್ರನಂತೆ ಬೆಳೆದು ವಯಸ್ಕಳಾದಳು. ಅವಳ ಸೌಂದರ್ಯವು ಕವಿಗಳನ್ನು ಬೆರಗುಗೊಳಿಸಿತು. ಅವಳನ್ನು ರಾಮಚಂದ್ರನಿಗೆ ಕೊಟ್ಟು ಮದುವೆ ಮಾಡಬೇಕೆಂದು ಜನಕನು ಸಂತೋಷದಿಂದಿರಲು ಒಬ್ಬ ಚರನು ಓಡಿ ಬಂದು "ವರ್ಧನಪುರವೆಂಬ ಶಬರದೇಶದ ಮಯೂರಮಾಲಿಯೆಂಬ ಪಟ್ಟಣದ ಅರಸನು ತರಂಗತಮನು ಶಬರರನ್ನು ಕೂಡಿಕೊಂಡು ರಾಜ್ಯವನ್ನು ಹಾಳು ಮಾಡುತ್ತ ದಂಡೆತ್ತಿ ಬರಹತ್ತಿದ್ದಾನೆ" ಎಂದನು. ಅದನ್ನು ಕೇಳಿ ರಣಭೇರಿಯನ್ನು ಹೊಡೆಯಿಸಿ ಸೈನ್ಯವನ್ನು ಕೂಡಿಸಿ ಪಟ್ಟಣದ ಹೊರಗೆ ಬೀಡುಬಿಟ್ಟು ಪಯಣದ ಮೇಲೆ ಪಯಣ ಬೆಳೆಯಿಸುತ್ತ ಸಾಗಿದನು. ಶಬರಸೇನೆಯ ಸಮೀಪಕ್ಕೆ ಬಂದು ಅದನ್ನು ನಿರೀಕ್ಷಿಸುತ್ತಿರಲು ಒಬ್ಬ ದೂತನು ಬಂದು 'ರಾಮಲಕ್ಷ್ಮಣರು ಸೈನ್ಯಸಹಿತ

ವಾಗಿ ಬಂದಿರುವರು. ಶಬರಸೇನೆಯನ್ನು ಗೆಲ್ಲುವುದು ಆವ ದೊಡ್ಡ ಮಾತು? ' ಎಂದು ಹೇಳುತ್ತಿರುವಾಗ ಶಬರರು ತರಂಗತಮನನ್ನು ಹಿಡಿದುತಂದು ಜನಕನಿಗೆ ಒಪ್ಪಿಸಿದರು. ಜನಕನು ಅವನಿಗೆ ಅಭಯವನ್ನು ಕೊಟ್ಟು ರಾಮ-ಲಕ್ಷ್ಮಣರು ಬಂದಿರುವರೆಂದನು. ಅದೇ ಕಾರಣದಿಂದ ಶಬರಸೇನೆಯು ಅಂಜಿ ಕೆಟ್ಟು ಹೋಯಿತೆಂದನು. ತರಂಗತಮನು 'ಅವರು ಎಂಟನೆಯ ಬಲಕೇಶವರಾದುದರಿಂದ ಅವರನ್ನು ಎದುರಿಸುವುದು ಯಾರಿಗೂ ಸಾಧ್ಯವಿಲ್ಲ. ಅವರು ಭರತತ್ರಿಖಂಡಮಂಡಳಕ್ಕೆ ಅಧಿಪರು' ಎಂದನು. ಮಗಧೇಶನು ಅವರ ಧೈರ್ಯ-ಶೌರ್ಯ-ಔದಾರ್ಯ-ಗಾಂಭೀರ್ಯಗಳಿಗೆ ಮೆಚ್ಚಿ ಎಲ್ಲರಿಗೂ ತಿಳಿಯುವಂತೆ ಜನಕನು ರಾಮನಿಗೆ ಸೀತೆಯನ್ನು ಕೊಟ್ಟ ಸಂಗತಿಯನ್ನು ಸಾರಿದನು. ದೇಶವನ್ನು ಬಾಧಿಸದಂತೆ ಶಬರಾಧಿಪತಿಗೆ ಕಟ್ಟಪ್ಪಣೆಮಾಡಿ ಕಳುಹಿ ಜನಕನು ಮಿಥಿಲೆಗೆ ಬಂದು ಸಂತೋಷದಿಂದಿದ್ದನು.

ಜನಕರಾಜನು ರಾಮನಿಗೆ ಸೀತೆಯನ್ನು ಕೊಟ್ಟ ಸಂಗತಿಯು ಜನಜನಿತವಾಗಿರಲು, ನಾರದನು ಅದನ್ನು ಕೇಳಿ ಸೀತೆಯನ್ನು ನೋಡಬೇಕೆಂದು ಕನ್ನೆವಾಡಕ್ಕೆ ಬಂದನು. ಅವನನ್ನು ಕಂಡು ಸೀತೆಸಹಿತೆಯಾಗಿ ಎಲ್ಲ ತರುಣಿಯರು ಓಡಿಹೋಗಿ ಬಾಗಿಲವನ್ನು ಇಕ್ಕಿಕೊಂಡರು. ಕಾವಲುಗಾರರು ಆಯುಧಗಳನ್ನು ತೂಗುತ್ತ ಬರಲು, ನಾರದನು ಆಕಾಶಕ್ಕೆ ಹಾರಿ ಕೈಲಾಸಪರ್ವತಕ್ಕೆ ಬಂದಿಳಿದನು. ಅಲ್ಲಿ ವಿಶ್ರಾಂತಿಗೊಂಡು ಸೇಡು ತೀರಿಸಿಕೊಳ್ಳುವ ಬುದ್ಧಿಯಿಂದ ಸೀತೆಯ ಚಿತ್ರವೊಂದನ್ನು ಬರೆದು ವಿದ್ಯಾಧರಶ್ರೇಣಿಗೆ ಹೋಗಿ ರಥನೂಪುರಚಕ್ರವಾಳಪುರದರಸು ಇಂದುಗತಿಯ ಬಳಿಗೆ ಹೋಗಿ ಆ ಚಿತ್ರವನ್ನು ತೋರಿಸಿ, ' ಈ ಕನ್ನೆಯು ನಿನ್ನ ಮಗ ಪ್ರಭಾಮಂಡಳನಿಗೆ ಯೋಗ್ಯಳು. ಇವಳು ಮಿಥಿಳೆಯ ಜನಕರಾಜನ ಮಗಳು. ಯಾವಾತನ ಕೈಯನ್ನು ಇವಳು ಹಿಡಿಯುವಳೋ ಅವನೇ ಭರತಖಂಡದ ಒಡೆಯನಾಗುವನು' ಎಂದು ಹೇಳಿ ಹರಿಸಿ ಹೊರಟುಹೋದನು. ಈ ವಿಷಯದಲ್ಲಿ ಇಂದುಗತಿಯು ತನ್ನ ಮಂತ್ರಿಗಳ ಅಭಿಪ್ರಾಯವನ್ನು ಕೇಳಲು ಸೀತೆಯನ್ನು ತರಬೇಕೆಂದರವರು. ತಂದೆಯು ಕೊಡದಿರುವಾಗ ಅವಳನ್ನು ಅಪಹರಿಸಿಕೊಂಡು ಬಂದರೆ ನಮಗೆ ಅಪಯಶವು. ಮತ್ತು ಭೂಚರರು ಖೇಚರರಿಗೆ ತಮ್ಮ ಮಕ್ಕಳನ್ನು ಕೊಡುವುದಿಲ್ಲ. ಇದಕ್ಕೆ ಉಪಾಯವೆಂದರೆ ಜನಕನನ್ನು ಇಲ್ಲಿಗೆ ತರಿಸುವುದು ಎಂದು ಮಂತ್ರಿಗಳು ಸೂಚಿಸಿದರು. ಅದನ್ನು ಕೇಳಿ ಚಪಳಮತಿಯೆಂಬ ಖೇಚರನು ಜನಕನನ್ನು ಕರೆದು ತರುವೆನೆಂದು ಅಪ್ಪಣೆಪಡೆದು ಹೊರಟನು. ಆತನು ಮಿಥಿಳೆಗೆ ಬಂದು ಉದ್ಯಾನದಲ್ಲಿ ವಿಶ್ರಾಂತಿಗೊಂಡು ಜನಕನು ಕುದುರೆಗಳಲ್ಲಿ ಪ್ರೀತಿಯುಳ್ಳವನೆಂದು ತಿಳಿದು ಒಂದು ದುಷ್ಟ ಕುದುರೆಯ ರೂಪವನ್ನು ಧರಿಸಿದನು. ಅದು ಪಟ್ಟಣವನ್ನು ಪ್ರವೇಶಿಸಿ ಭರದಿಂದ ಓಡುತ್ತ, ಒದೆಯುತ್ತ, ಕಚ್ಚುತ್ತ, ಮೇಲೆ ಹಾರುತ್ತ ಕೋಲಾಹಲವನ್ನೆಬ್ಬಿಸಿತು. ಆ ಕಳಕಳ ಧ್ವನಿಯನ್ನು ಕೇಳಿ ಜನಕನು ಅದರ ಸಮೀಪಕ್ಕೆ ಬರಲು ಆ ಕುದುರೆಯು

ಗ್ರಾಮಚಯಂ ಪುರನಿಚಯಂ ಖೇಡ- |
ಸ್ತೋಮಂ ಖರ್ವಡಸಂದೋಹಂ ದ್ರೋ- |
ಣಾಮುಖ ವಿತತಮಡಂಬಕದಂಬಂ ಸಂವಾಹಸಮೂಹಂ ||
ಆಮಹನೀಯವಿಲಾಸಸುಕೋಶಲ- |
ನಾಮದ ಜನಪದದೊಳು ನಲವಿಂದಭಿ- |
ರಾಮತೆವಡೆದುದು ಚಂ[ದ್ರಕರ]ಗಳೆ ಪಥಾಂತರದೊಳು ತರತರದಿಂದ || ೬೧ ||

ಆನಾಡಿನ ಪೂರ್ಗಳ ಪರಿಸರದು- |
ದ್ಯಾನಾಳಿಯ ತರುಲತಿಕಾವಳಿ ನಿಜ- |
ನಾನಾಂಕುರಪಲ್ಲವಕೋರಕಕುಸುಮಫಲಂಗಳ ಬೆಳಗಿಂ ||
ಆನಿರ್ಜರವಲ್ಲಭಧನವಲ್ಲಭ- |
ರಾನಂದನಚೈತ್ರರಥಂಗಳಿಗಪ- |
ಮಾನವನೀವುವು [ಶೋಭಿಪ] ಕಮಳಾಕರಕುಮುದಾಕರತತಿಯಿಂದ || ೬೨ ||

ಅಸಿತೋತ್ಪಳದ ವ್ಯಹೋತ್ಪಳದ ಸಮು- |
ಲ್ಲಸಿತ ಸರಸ್ಸಂತತಿಯೊಳು ಪರಿವ- |
ರ್ತಿಸುವೆಡೆಯಾಡುವ ಸಾರಸಚಯಮತಿಮುದಸಾರಸ[ದ]ಚಯಂ ||
ಕುಸುಮಿತಸುರಭಿಲತಾಮಂಟಪದಾ- |
ರಸಫಲಭಾರಾನತ ತರುಷಂಡದ |
ಮಿಸುಪಳಿಮಾಳಾಘೋಂಕೃತಿ ಕಳಕೋಕಿಳರುತಿಯುಪವನದೊಳಗೆಯ್ದೆ || ೬೩ ||

ರತಿಪತಿ ವಿಜಯಪತಾಕಾಮುಧ್ಯಾ- |
ಸಿತನನಿಮಿಷರಾಜನ [ನೆಱೆ] ನಚ್ಚಿನ |
ಸತಿಯರ ಲೀಲಾಶಶಿಕಾಂತಸ್ಥಳಮಾಳಿಕೆಗಳೊ ಮೇಣು ||
ರತಿಯ ರತೀಶನ ಪರಿಣಯನದೆ ವಿರ- |
ಚಿತಮಣಿಮಯವೇದಿಕೆಗಳೊ ಮೇಣು- |
ನ್ನತಲಕ್ಷ್ಮಿಯಮಳ[ತರ]ಮುಕುರಂಗಳೊ ಮೇಣೆನಲೆಸೆದವು ಸರಸಿಗಳು || ೬೪ ||

---

೧ (ಗ) ಡ. ೨-೨ (ಕಖ) ಚಂದ್ರಿಕೆಗಳ. ೩ ಈ ಚರಣವು ನಿಯಮಕ್ಕನುಸಾರವಾಗಿ ೨೬ ಮಾತ್ರೆಯುಳ್ಳುದು. ಉಳಿದ ಚರಣಗಳನ್ನು ಹೋಲುವಂತೆ ಮಾಡಲು "ಶೋಭಿಪ" ಎಂಬ ಪದವನ್ನು ಇಟ್ಟುಕೊಳ್ಳಬೇಕಾಯಿತು. ೪-೪ (ಕಖ) ಪದೆದ. ೫-೫ (ಕಖ) ಮಂಟಪದಮಹಾ. ೬-೬ (ಗ) ರಲಂಕೃತಿ. ೭-೭ (ಕಖ) ದುಲಿ. ೮-೮ (ಗ) ನರ್ಚಿನ. ೯-೯ (ಕಖ) ಮೋಣೋ.

ಆವನಮಾಳೆಯು ವಿರಹದ [೧]ಪಾಳೆಯಂ[೧]- |
ಪಾವನಮಾಳೆ [೨][ಸಕಲ][೨]ಶೃಂಗಾರಾ- |
ಜೀವನಮಾಳೆ ರತಿಯ ನವಯೌವನಮಾಳೆ ಮಧುಶ್ರೀಯ ||
ಜೀವನಮಾಳೆ ಮನೋಭವಸುಖಸಂ- |
ಜೀವನಮಾಳೆಯುಮಮರತರುಲತಿಕಾ- |
ಪಾವನಮಾಳೆ ಸುಕೋಶಲದೇಶದೊಳೊಪ್ಪುವುದತನುಕಳಾಲೀಲೆ || ೬೫ ||

ಪೆಣ್ಗಳ ಕೆಂದ[೩][ಳದಾಸ್ಯ ಸುಧೆಯು][೩] ನಗೆ- |
ಗಣ್ಗಳ ಸೋಂಕಿನ ನನೆಕೊನೆ[೪][ಯಲರಿ][೪]ಹ |
ಪಣ್ಗಟಿ[೫][ದಶೋಕ-ಬಕುಳ-ತಿಳಕ-ಕುರವಕ][೫] ತರುಪರಿಕರದಿಂ ||
ಪಣ್ಗಾಯಿಂ [೬]ತೀವಿದ [೬]ಪೊಂಬಾಳೆಯ |
ಬಿಣ್ಗೊನೆಯಿಂದುಪವನಮಾಳಿಕೆಗಳು |
ಕಣ್ಗಂ ಮನಕ[೭]ಮಲಂಪಂ[೭] ಮಾಡುವವೆಸೆ[ಯು]ವ ಕೋಶಲಜನಪದದ || ೬೬ ||

ಆಲರ್ದ[*] ಕಮಲವನ[೮]ಷಂಡಂಗಳಿನು[೮]- |
ಳ್ಳಲರ್ದ[*] ಕುಮುದವನರಾಜಿಗಳಿಂ ಪ- |
ಣ್ಗೊ[೯][ಲೆ]ಯಿಂ ಬಳುಕುವ ಕೌಂಗುಗಳಿಂ ಕಾಯ್ಗುರುಗಲ ತೆಂಗುಗಳಿಂ ||
ಸಲೆ ಕತ್ತಲಿಪೆಲೆವಳ್ಳಿಗಳಿಂ[೧೦] ಪ- |
ಣ್ಣಲೆವೀಳೆಗಳಿಂ ಬೇರಿಂದಂ ಕಾ- |
ಯ್ನಲೆ[೧೧]ವೆರ್ಚಿದ[೧೧] ಪನಸಂಗಳಿನಾನಂದನ[೧೨]ಮಾನಂದಮನೊದ[೧೩]ವಿಪುದು || ೬೭ ||

ಆದೇಶದೊಳೊಪ್ಪುವ ಸುರಭಿಕಮಳ- |
ಕೇದಾರದ ಪರಿಮಳ[೧೪]ಲೋಚನ[೧೪]ನಾ- |
ಶಾದಂತಾ[೧೫]ವಳಿಕಟತಟಮಂ ಬಿಟ್ಟಳಿಕುಳಮೆ[೧೬]ಯ್ತಂದು ||

---

೧-೧ (ಕಖ) ಪಾಳೆ. ೨ (ಕಖಗ) ಸಹಸ್ರ. ೩ (ಕಖಗ) ಳಾಸ್ಯಸಂದೆಯ. ೪-೪ (ಕಖಗ) ಯಾಗಿ ೫-೫ (ಕಖಗ) ದಸುಗೆಯ ಕೇಸರದಕುರವಕದ. ೬-೬ (ಕಖ) ತೀವಿದ ಶರ್ಕರೆಯಿಂ; (ಗ) ತೀವಿದ ಶರ್ಕರೆ ಮಳೆಯ. ೭-೭ (ಕಖ) ಮಲ್ಲಂಪಂ. ೮-೮ (ಕಖ) ಷಂಡಗಳೆನು. ೯ (ಕಖಗ) ನೆ. ೧೦ (ಕಖ) ಳಂ. ೧೧-೧೧ (ಕಖ) ಪೆರ್ಚಿಸಿದ. ೧೨(ಕಖ) ವ. ೧೩ (ಕಖಗ) ಯಿ. ೧೪-೧೪ (ಕಖ) ಲೋಚನದಿಂ ನಾ ೧೫ (ಖ) ಳ. ೧೬ (ಕಖ) ಯ್ದು

ಆದರದಿಂ ಪಾಮರೆಯ[೧][ರ] ನಲವಿಂ[೧]- ।
ದಾದಂ ಬಂದೆಱಗುವವಳಿಗಳಿ[೨]ನು- |
ದ್ಬಾಧಿಪ ಬಾಧೆಗೆ ಕೂಡೆ ಮುಸುಂಕಿದ ನೀಲ[೩][ವಸನವ][೩] ನೆನೆಯಿಸುತಿರೆ || ೧೮ ||

ಹರಿತ ಕಮಳಕೇದಾರಂಗಳೆ ಪಾ- |
ಮರಿಯರ ಕಡೆಗಣ್ಗಳೆ ಮುಕ್ತಾಫಲ- ।
ಮರಗಿಳಿಗಳ ಪಕ್ಕಂಗಳೆ ಗರುಡೋಪಲಮಾಚಂಚುಗಳೆ ॥
ಅರುಣೋಪಲಮೆನೆ ಭೂರಮೆಗಂಬರ- |
ಪರಿವೃ[ತ][೪] ನೀಲಮಣಿ[೫]ಮಯ[೫]ವಿತಾನದ |
ಪರಿಯಿಂ ರಾಜಶುಕಾ[ವ]ಳಿಯಂ ಸೋವಬಲೆಯರಿಂ ಪೊಱಪೊಳಲೆಸೆಗುಂ[೬] || ೧೯ ||

ಬರೆ ದೂರದೆ ಕಂಡೆಮ್ಮನಿಯರನಾ- |
ದರದಿಂ ಗುಡಿಗಟ್ಟಿಕ್ಕನೆ[೭]ಯೆನು[ತ] ಮ- |
ಧುರವಚನಗಳಿಂದಱಿಪುವ ರಾಜಶುಕಾವಳಿ ತಗುಳುವುದೇ ||
ಸರಸಸುರಭಿಕಣಿಸಂಗಳನೊಯ್ಯಲಿ |
ಪರಿದುತ್ಸವದಿಂದೆನುತೀಕ್ಷಿಪ ಪಾ- |
ಮರಿಯರ ಸರ್ವಾಂಗದ ಚೆಲುವಿಕೆಯುಂ[೮] ಪಥಿಕರ್ಕಂಗಳನೀಕ್ಷಿಪರು || ೨೦ ||

ನೇವುರದ ರವಕ್ಕೆಳಸಿ[೯] ಬಳಸೆ ಹಂ- |
ಸಾವಳಿ ರಸನಾಸೂತ್ರದ ರಸಿತ- ।
ಕ್ಕಾ[೧೦]ವರಿಸಿ[ರೆ][೧೦] ಸಾರಸತತಿ ತನುಸೌರಭಕಳಿಗಳ ಬಳಗಂ ||
ನೆರೆ[೧೧][ಯೆ] ತರದೆ ಪೀ[೧೨]ಲಿಯ[೧೨] ಝಲ್ಲರಿಯಂ- |
ತಿರೆಯರಗಿಳಿಯಂಬರದೊಳು ಪಾಮರಿ- |
ಯರು ವನದೇವತೆಯರ ವೊಲ್ಸಂಚಳಿಸುವರಾ[ದೇಶದ] ಕೆಯ್ವೊಲ[ದೊಳ್][೧೩] ॥ ೨೧ ||

---

೧-೧ (ಕಖ) ಯರ್ನ. ೨ (ಕಖ) ಳ. ೩-೩ (ಕಖ) ವನವಂ; (ಗ) ವಸನವುಂ. ೪ (ಕಖಗ) ಥ. ೫-೫ (ಕಖ) ಮಯದ. ೬ (ಕಖಗ) ಗೂ. ೭ (ಕಖ) ತಂ. ೮ (ಕಖ) ಯುಂ. ೯ (ಗ) ಸೆ. ೧೦-೧೦ (ಕಖಗ) ಕ್ಕಾವರಿಸಿ. ೧೧ (ಕಖಗ) ದು. ೧೨-೧೨ (ಗ) ಪಿರಿಯ. ೧೩ (ಕಖ) ದೊಳು; (ಗ) ದೊಳಗೆ. ಈ ಚರಣವು ನಿಯಮಕ್ಕನುಸಾರವಾಗಿ ೨೬ ಮಾತ್ರೆಗಳುಳ್ಳುದು. ಉಳಿದ ಚರಣಗಳನ್ನು ಹೋಲುವಂತೆ ಮಾಡಲು " ದೇಶದ " ಎಂಬ ಪದವನ್ನು ಇಟ್ಟುಕೊಳ್ಳಬೇಕಾಯಿತು.

ಆನಾಡುದ್ಯಾನದ ಶಾಲಿಕ್ಷೇ- |
ತ್ರಾನೀಕದ ಘಂಟಾಪಥದೆಡೆಯೊ- |
ಳ್ಪಾನೀಯ ಮಹಾಶಾಲೆಗಳೊಪ್ಪುವುವಲ್ಲಿ ಪಥಿಕನಿಕರಂ ||
ಭೂನುತಸುರಭಿಸುರಸಶೀತಳಜಳ- |
ಪಾನಮನೊಲ್ಲದೆಯಾಕಾಮಿನಿಯರ |
ಪೀನೋನ್ನತಕುಚಕುಂಭದ ಲಾವಣ್ಯಾಂಬುವನೀಂಟುವರೆರ್ದೆಯಾರೆ* || ೭೨ ||

ತನುಲತಿಕಾಸುಧೆಯಂ ಸೋಂಕಿಂ ಪಾ- |
ವನಮಧುರಾಧರಸುಧೆಯಂ ರಸನೆಯಿಂ[೧]- |
ನನುಪಮಸರ್ವಾಂಗಿಣಿಸುರಭಿಸುಧೆಯ[೨] ನಾಸಾಪುಟದಿಂದ ||
ಘನಲಾವಣ್ಯಸುಧೆಯ[೩] ನಲವಿಂ ಲೋ- |
ಚನದಿಂ ಲಲಿತವಚನಸುಧೆಯಂ ಪಥಿ- |
ಕನಿಕಾಯಂ ಕಿವಿಯಿಂದೀಂಟುವುದಾಪ್ರಪೆಗಳೊಳಿರ್ದ ಯುವತಿಜನದ || ೭೩ ||

ಅಂತೆಸೆವ ಸುಕೋಶಲದೇಶಂ ವನ- |
ಸಂತತಿಯಿಂ ಲತಿಕಾಮಂಟಪದಿಂ- |
ದಂ[೪][ತರತರದ[೪]] ಪುರಗ್ರಾಮಾರಾಮನದೀನದಗಿರಿಯಿಂ ||
ಕಾಂತಕಮಲಕುಮುದಾಕರ ನಿಷ್ಕುಟ- |
ಸಂತಾನದಿನಬಲಾಶೃಂಗಾರರ- |
ಸಾಂತರ್ವರ್ತಿಯೆನಿಸೆ ಸೊಗಯಿಪುದು ತರಂಗಿಣಿ ಸರಯೂನಾಮಕದ || ೭೪ ||

ಆನದಿಯೆರಡುಂ ತಡಿವಿಡಿವಿಡಿದು- |
ದ್ಯಾನಾಳಿಯಿನುದ್ಯಾನಾಳಿಗೆ ಸರ- |
[೫][ಸೀನಿಕರದೆ ಸರಸೀನಿಕರಕೆ] ಲತೆ[೫]ವನೆಯಿಂ ಲತೆವನೆಗೆ ||
ನಾನಾಕೃ[೬]ತಕಗಿರಿಗೆ[೬] ಕೃತಗಿರಿಯಿಂ- |
ದಾನಂದದಿನೆಡೆಯಾಡುವ ಪಿಕಸಂ |
ತಾನಂ ಹಂಸಚಯಂ ಭೃಂಗಿಕುಳಂ ಭ್ರಮರಗಣಂ ಪರಿರಂಜಿಪುದು || ೭೫ ||

---

೧ (ಕಖ) ಯ. ೨ (ಕಖ) ಯಂ. ೩ (ಕಖಗ) ಯಂ. ೪-೪ (ಕಖ) ಸಂವಾಂತಿತ; (ಗ) ಸಂದಾತೀತ. ೫-೫ (ಕಖ) ಸೀನಿಕರಲತೆ; (ಗ) ಸೀನಿಕರಕೆ ಲತೆ. ೬-೬ (ಕಖ) ಕೃತಗಿರಿಗೆ.

ಗಿರಿಯೆಲ್ಲಂ ಪರುಷಂ ಚಿಂತಾಮಣಿ ।
ತರುವೆಲ್ಲಂ ಶ್ರೀಖಂಡಂ ಸುರತರು ।
ನರರೆಲ್ಲಂ ಸಕಳಕಳಾಸುಖಭೋಗಿಗಳುಂ[೧] ತ್ಯಾಗಿಗಳು ॥
ಸರವೆಲ್ಲಂ ಸುಧೆಯುಂ[೨] ಸಿದ್ಧರಸಂ ।
ಪರಿವರ್ಣಿಸಲಾವಂ ನೆಱೆವಂ ಸುರ- ।
ಪುರದುಪವನಮಂ ನಗುವುದು ತನ್ನದಿಯುದ್ಯಾನಂ ನಿಜರು[೩]ಚಿಯಿಂ[೩] ॥ ೭೬ ॥

ಸ್ಮರನೃಪನೋಲಗಶಾಲೆಗಳೆಂಬಂ- ।
ತಿರೆ ಕೈರವದಿಂ ಮಾವುಗಳಿಂದಂ ।
ಸ್ಮರನ ರತಿಯ [೪]ಪರಿಣಯನವಿತಾ[೪]ನದ ಪರಿಯ ಲತಾಗೃಹದಿಂ ॥
ಸ್ಮರಪರಿವಾರದ ಪಡೆವೀಡಿನ ವೊ- ।
ಲ್ಪರಿರಂಜಿಪ ನಾನಾತರುಲತಿಕಾ- ।
ಸರಸಿಜವನಶುಕಪಿಕಮಧುಕರಮಳಯಾನಿಳ[ದಿಂದು]ಪವನದೊಳಗೆ ॥ ೭೭ ॥*

× × × ×

× × × ×

೧ (ಗ) ಳಂ. ೨ (ಕಖಗ) ಯಂ. ೩-೩ (ಕಖ) ರುಚಿತೆಯಿಂ. ೪-೪ (ಕಖಗ) ಪರಿಣಯನದ ಲತಾ.

* ಈ ಮುಂದಿನ ಪದ್ಯಗಳು ಅವ ಪ್ರತಿಯಲ್ಲಿಯೂ ದೊರೆಯುವುದಿಲ್ಲ. ಸಂಧಿಯು ಅಪೂರ್ಣವಾಗಿದೆ.

# ೧ನೆಯ ಸಂಧಿ.



ರಾಗ—ಘಳಮಂಜರಿ. ಕುಸುಮಷಟ್ಪದಿ.

ರಾಮಕಥೆಯಂ ಮನಃ ।
ಪ್ರೇಮದಿಂ ಕೇಳ್ವರಿಗೆ ।
ಕಾಮಿತಾರ್ಥಂ ತಪ್ಪದಪ್ಪುದರಿದೆ ॥ ಪಲ್ಲವ ಪದ ॥ ‡

‡ ಈಮುಂದಿನ ಪದ್ಯಗಳು ಈ ಸಂಧಿಯಲ್ಲಿರುವ ಆವಶ್ಯಕತೆಯು ತೋರುವುದಿಲ್ಲ. ಅವುಗಳಿಗೆ ಸಮಾನವಾದ ಪದ್ಯಗಳು ಪೀಠಿಕಾಸಂಧಿಯಲ್ಲಿ ಬಂದಿವೆ. ಆದುದರಿಂದ ಅವುಗಳನ್ನು ಕೆಳಗೆ ಬೇರೆಯಾಗಿ ಕೊಟ್ಟಿದೆ.

ಶ್ರೀಮಹಿತಸಕಳಸುಖ- ।
ಧಾಮನನವದ್ಯತರ ।
ನಾಮನವನತನರಸುರೋರಗೇಂದ್ರಂ ॥
ರಾಮಣೀಯಕಗುಣಂ ।
ಪ್ರೇಮದಿಂದೀಗತಿ ।
ಕ್ಷೇಮಮಂ ಸುವ್ರತಂ ಸುವ್ರತವನು ॥ ೧ ॥

ಶ್ರೀಮದವನತಸುರ- ।
ಸ್ತೋಮಮುಕುಟಮರೀಚಿ- ।
ಧಾಮಸುರತರು ಕಿಸಲಯಾಂಘ್ರಿಕಮಲಂ ॥
ಪ್ರೇಮದಿಂ ನಮಗೀಗೆ ।
ಕಾಮಿತಾರ್ಥವನೊಲಿದು ।
ರಾಮಚಂದ್ರಂ ಸುಕವಿಸೂಕ್ತಿರುಂದ್ರಂ ॥ ೨ ॥

ಜಿನಸಿದ್ಧಸೂರಿಸ- ।
ಜ್ಜನಸಾಧುಚರಣಮಂ ।
ಮುನಿಮಾಘಣಂದಿಸೈದ್ಧಾಂತಿಪದಮಂ ॥
ಅನುನಯದಿನೀಕೃತಿಗೆ ।
ಜನಹಿತಕೆ ದಯೆಗೆಯ್ಗೆ ॥
ವಿನುತರಸಭಾವದಿಂಪಿನ ಪೆಂಪನು ॥ ೩ ॥

೧-೧ (ಗ) ನತಸುರೋ. ೨-೨ (ಗ) ಮಣಿ. (ಗ) ಸರ್ವರಿಗೆ. ೪ (ಗ) ಯ್ವೆ.

ವರವೃಷಭಜಿನಸಮವ- |
ಸರಣದೊಳು ಭರತಂಗೆ |
ಪರಮಮುನಿ ವೃಷಭಸೇನರು ಪೇೞ್ದುದಂ ||
[೧]ಭರದೆ [ಸನ್ಮತಿ][೧]ನಾಥ- |
ಚರಣಕಮಲದೊಳಿರ್ದು |
ಕರುಣಿಸೆ ಮಗಧಪತಿಗೆ ಗೌತಮಗುರು || ೧ ||

ಚತುರಮಳಬೋಧರ್ಧಿ |
[೨]ಯ[೨]ತಿಪರಂ[೩]ಪರೆಯಿಂ[೩]ನೆತಿ |
ವಿತತಮಾಗಿರ್ದ [ವರ]ರಾಮಕಥೆಯುಂ ||
ವಿತತ ಸಿದ್ಧಾಂತಪರಿ- |
ಣತಮಾಘಣಂದಿಮುನಿ- |
ಪತಿಯ ಕಾರುಣ್ಯದಿಂ ಪೆೞ್ದನೊಲಿದು || ೨ ||

---

ವಾಣಿ ದುರಿತ[೪]ಲತಾ[೪]ಕೃ- |
ಪಾ[೫]ಣಿಯುಪವರ್ಗನಿ- |
ಶ್ರೇಣಿಯುವನ[೬]ತವಿಬುಧವರದಪಾಣಿ ||
ಪ್ರೀಣಿತಾಖಿಲಜಗ- |
ತ್ರಾಣಿ ಲೋಕೈಕಕ- |
ಲ್ಯಾಣಿ ಮನ್ಮುಖಕಮಲದೊಳು ನೆಲಸುಗೆ || ೪ ||

ಸರಸರನಸೂಯರತಿ |
ಸುರುಚಿರಕಳಾವಿದರು
ನಿರವದ್ಯಚರಿತರುರುತರಶಾಸ್ತ್ರರು ||
ನೆರೆದು ತಿರ್ದುಗೆ ಸಭೆಯೊ- |
[೭]ಳೊರೆದುದಲ್ಲ[೭]ದೆ ಕನಕ- |
ವರಲೋಕದೊಳು ಪರೀಕ್ಷೆಗೆ ಸಲುವುದೆ || ೫ ||

---

೧-೧ (ಕಖ) ಭರದೆ ಸನ್ಮುನಿ; (ಗ) ಭರದೆನ್ಮುನಿ. ೨-೨ (ಗ) ಧುತಿ. ೩-೩ (ಗ) ವರಯಿನೆತಿ. ೪-೪ (ಗ) ಲತಾಂತಕೃ. ೫ (ಗ) ಅ. ೬ (ಗ) ತಿ. ೭-೭ (ಗ) ವರೆದಲ್ಲದೆ.

ಚರಿತರಘುವಂಶಕೃತಿ ।
ಚರಿತಾರ್ಥರಂತವರು ।
ಚರಿತಾಧಿನಾಯಕಂ ರಾಮುಚಂದ್ರಂ ॥
ಚರಿತಕವಿ ಕುಮುದೇಂದು ।
ಪರವಾದಿಗಿರಿವಜ್ರ ।
ವಿರಚಿಸಿದನಿದನವಂ ಸಾಮಾನ್ಯನೇ ॥ ೩ ॥

ತ್ರಿಭುವನಶ್ರೀಮಧ್ಯ- ।
ವಿಭವಮೆನಿಸಿತು ಮಧ್ಯ- ।
ಮಭುವನದ ನಾಭಿ ಜಂಬುದ್ವೀಪವು ॥
ಅಭಿರಾಮತೆ[ಗೆ]ರಗಿರೆ ।
ವಿಭವದಱ ಮಧ್ಯದೊಳು ।
ಶುಭತರ ಶ್ರೀಜಿನನ ಸುಸವನನಗಂ ॥ ೪ ॥

ಅದು ದಿವದ ಮುಟ್ಟಿತಂ- ।
ತದು ರಸೆಯ ಮುಟ್ಟಿತಂ- ।
ತದು ಮಧ್ಯಲೋಕದಿಂ ಸುತ್ತಿದತ್ತು ॥
ಅದು ಪೊನ್ನಬೆಟ್ಟವಂ- ।
ತದು ಕಿನ್ನರಾವಸಥ- ।
ಮದು ಸುರಮಿಥುನ ಸದ್ವಿಲಾಸವಾಸಂ ॥ ೫ ॥

ಆಗಿರಿಯ ಯಮದಿಶಾ- ।
ಭಾಗದೊಳು ಸಂತತಂ ।
ಶ್ರೀಗೆ ನೆಲೆಯೆನಿಸಿದಾರ್ಯಾಖಂಡವು ॥
ರಾಗದಿಂ ರತಿಪತಿವಿ- ।
ಯೋಗಭಯದಿಂ ರತಿಯು- ।
ನಾಗಳುಂ ಬಿಡದೆ ಗೆಲುತಿರ್ಪನಲ್ಲಿ[೧] ॥ ೬ ॥

ಭರತ ತ್ರಿಖಂಡದೊಳು ।
ಧರಣಿಗಾಶ್ಚರ್ಯಮೆನೆ ।
ಪಿರಿದು ರಾರಾಜಿಸಾರ್ಯಾಖಂಡಕೆ ॥

೧ (ನ ?)

ಸುರುಚಿರಾಲಂಕಾರ- |
[೧]ಮರರೆ ಕೋಶಲದೇಶ[೧] |
[೨]ಸರಸಸಾಹಿತ್ಯ[೨] ಕೋಶಲದೇಶವು || ೭ ||

ವಿನುತ ಕೃತಯುಗಕೆ ನೆಲೆ- |
ವನೆಯೆನಿಸಿತೆಂದೆನಲು |
ಮನುಜಮಾತ್ರಕ್ಕೆ ಬಣ್ಣಿಸಲಕ್ಕುಮೆ ||
ಅನುದಿನಂ ತದ್ವಿಷಯ- |
ವನಿತಾಸ್ಯತಿಲಕಮೆಂ- |
[೩]ದೆನಿಸಿ ಸುವಿರಾಜಿ[೩]ಪುದಯೋಧ್ಯಾಪುರಂ || ೮ ||

ನಾಡು ಮನಸಿಜನೊಲವಿ- |
ನಾಡುವೆಡೆ ಸಂತತಂ |
ಬೀಡು ರತಿಪತಿಗೆ [೪]ಸತತ ನಿಧಾನವು[೪] ||
ನೋಡಿದನಿಮಿಷಪತಿಗೆ |
ಮಾಡುವುದು ವಿನಯವನು |
[೫]ನಾಡಾಡಿಯರ್ಗೆ[೫] ಬಣ್ಣಿಸಲು ಮೊಗ್ಗೆ || ೯ ||

ನದಿಗಳಿಂ ಗಿರಿಗಳಿಂ |
[೬]ನದತತಿ[೬]ಗಳಿಂದ ಸಂ- |
[೭]ಮುದವೆನಿಸಿ[೭] ತೋಱುವುದ್ಯಾನಚಯದಿಂ ||
ಪುದಿದಿಕ್ಷುವಾಟದಿಂ |
ಮದವದಳಿಕುಲಕಲಿಲ |
ಸದಭಿಮತಕುಸುಮವಾಟೀಕೋಟಿಯಿಂ || ೧೦ ||

ಅಂತು ಚಂದ್ರಿಕೆ ಪಾರ- |
[೮]ದಂತರ[೮]ದೊಳೊಂದೊಂದು |
ಸಂತತಂ ಸೊಗಯಿಸುವ ನಗರಚಯದಿಂ ||

---

೧-೧ (ಗ) ಮಮರ ಕೋಶಲದೇಶ; [ ಈ ಸಾಲು ಇಲ್ಲಿರಬೇಕೇ? ). ೨-೨ ಈ ಸಾಲಿನ ಸಂಬಂಧವೇನು? ೩-೩ (ಕಖ) ದೆನಿಸಿವಿರಾಜಿ. ೪-೪ (ಕಖ) ಸಂತತಂ ನಿಧನವು. ೫-೫ (ಗ) ನಾಡಾಡಿಯುವರ್ಗೆ. ೬-೬ (ಗ) ವನತತಿ. ೭-೭ (ಕಖ) ಮುದವೆನಿಸಿ; (ಗ) ಬಾಧವೆನಿಸಿ. ೮-೮ (ಕಖಗ) ದುತ್ತರ.

ಕಂತು ಬೆಳಸಿದ ತೆಱದೆ |
ಕಾಂತಮಾಗಿರ್ದ ವನ-|
ಸಂತತಿಗಳಿಂದೆಸೆವುದಾ ವಿಷಯವು || ೧೧ ||

ಪಾಸೀಯಶಾಲೆಯೊಳು |
ಪೀನಸ್ತನೆಯರಧ್ವ |
ದೀನರುಂ ಕಡೆಗಣ್ಗಳಿಂದ ಕುಡಿಯೆ ||
ಆನಾರಿಯರ ಮೆಱೆವ |
ನೂನಲಾವಣ್ಯಸುಧೆ |
ಪಾನೀಯಮಾಗಿಪ್ಪುದಾನಾಡೊಳು || ೧೨ ||

ಕಳಸಮಂ ಪಿಡಿದೆತ್ತಿ |
ಕಳಸಕುಚೆಯರು ವಿಮಲ- |
ಜಳವನೆಱೆವಾಗ ಮೇಲುದು ತೊಲಗಲು ||
ನೆಲೆಮೊಲೆಯುಮಂ ಭುಜದ |
ಕೆಲಮುಮಂ ನೋಡುವಾ- |
ಕುಳತೆಯಿಂ ಪಥಿಕರಲ್ಲಿಂ ತೆರಳರು || ೧೩ ||

ಎಸೆವಸುಗೆದಳಿರ ರಂ- |
ಜಿಸುವ ಕೈಪೊಡೆಗಳಿಂ |
ರಸವದಸಿತೇಕ್ಷುಕೋದಂಡದಿಂದ ||
ಲಸದಮಲಕೇತಕಿಯ- |
ನಿಶಿತ ಬಾಣಂಗಳಿಂ- |
ದಸಮುಸರನಳಲಿಪಂ ಪಥಿಕಜನಮಂ || ೧೪ ||

ಕಳಮೆಗೆಯ್ಗಳೊಳು ಮಂ- |
ಡಳಿಸಿ ರಂಜಿಪ ಗಿಳಿಯ |
ಬಳಗಮನು ಸೋಯಲೀಕ್ಷಿಪ ಸತಿಯರ ||
ವಿಲಸಿತಾಪಾಂಗಾಂಶು |
ಪಳಕಿನೊಳು ತಾವೆಸೆಯ- |
ಲಿಳೆಗೆತ್ತಿದಂತೆಸೆಯೆ ಪೀಲಿದಳೆಯಂ || ೧೫ ||

೧-೧ (ಗ) ದೆಸೌಧಾ. ೨-೨ (ಕಗ) ವನವು. ೩ (ಕಖಗ) ಯೊ. ೪ (ಗ) ಳ. ೫ (ಕಖಗ) ಗಾ.

ಗಿಳಿಸೋವಕಾಂತೆಯರ |
ತೊಳಪ ಸುನವಾಂಗದೊಳು |
ತಳತಳಿಪ ಲಾವಣ್ಯಮಂ ನೋಡುತ ||
ವಿಲಸಿದಸಿತೋತ್ಪಲದ |
ದಳವನಿಳಿಕೆಯ್ವ ಕಂ- |
ಗಳನು ವಿಸ್ಮಯದೆ ಪಥಿಕರು ನೋೞ್ಪರು || ೧೬ ||

ಚೂತಕುರವಕ-ತಿಲಕ |
ಮಾತುಳುಂಗಾಶೋಕ |
ಜಾತಿ-ಕರ್ಪೂರ-ಚಂಪಕ-ಚಂದನ ||
ಕೇತಕೀ-ಪನಸ-ಜಂ- |
ಬೂ-ತಮಾಲಾವಳಿ |
ಕಾತನಂದನಕೋಟಿಯಿಂದೆಸೆವುದು || ೧೭ ||

ಎಳೆನೀರ ಲಹರಿಯಿಂ |
ಪಳಕಿನೊೞ್ಪನಲಿಂದ |
ವಿಲಸದವದಾತೇಕ್ಷುಪೂರದಿಂದ ||
ಬೆಳೆದ ಕಳವೆಯ ಕೆಯ್ಗ- |
ಳೊಳಗೆ ಸುಳಿವಳಿಕುಳದ |
ಕಳಮಧುರಝೇಂಕಾರವತಿರುಚಿರವು || ೧೮ ||

ಆಮಹೀಲಲನೆಗೆ ಲ- |
ಲಾಮಮಾಗಿರ್ದಯೋ- |
ಧ್ಯಾಮಹಾಪುರದ ಪರಿಸರದೊಳಂದು ||
ಸೀಮೆಗಳಿದುದ್ಯಾನ- |
ರಾಮಣೀಯತೆಯ ಸು- |
ತ್ರಾಮಫಣಿಪತಿ ನೋಡಲುಂ ಪೊಗಳಲು || ೧೯ ||

೧ (ಗ) ಲು. ೨ (ಗ) ಳಿಭ. ೩ (ಗ) ರಿ. ೪-೪ (ಗ) ಕೇಳಲು.

ಕನಕಗಿರಿಯಂ ಕ್ಷೀರ- |
ವನಧಿಬಡವಾನಳನ |
ಘನತೆಗಳುಕಿಯೆ ಶರಣ್ಬೊಕ್ಕ ತೆಱದಿ ||
ಅನುದಿನಂ ಮೆರೆವಗಳ- |
ಗನುಕೂಲವಾಗಿ ಕಾಂ- |
ಚನಪರಿಧಿ ಬಳಸಲಾಪುರಮೆಸೆವುದು || ೨೦ ||

ಪರಿಖೆ ಫಣಿಲೋಕಮಂ |
ಪರಿಧಿ ಸುರಲೋಕಮಂ |
ಭರದಿ ನೋಡಲು ನೀಳ್ದುವೆಂಬ ತೆಱದಿಂ ||
ಪರಿಖೆಯೆಸೆವಾ-[ಳದಿಂ] |
ಪರಿಧಿಯೆಸೆವೇಳ್ಗೆಯಿಂ |
ಧರಣಿಗಾಶ್ಚರ್ಯವಾಗಿರ್ಪುದಲ್ಲಿ || ೨೧ ||

ತರಣಿತುರಗಂಗಳಾ |
ಪರಧಿಯಟ್ಟಣೆಯೊಳಗೆ |
ತರತರದಿ ಮಲೆವಂಬುಗಂಡಿಯಿಂದ ||
ಬರುತೆ ಗಗನಶ್ರಮವ |
ಪರಿಹರಿಸುತಿರ್ಪವಾ |
ಪುರದ ಹಳವಿಗೆಯ ತಣ್ಣೆಲರಿನಿಂದ || ೨೨ ||

ಅದು ರುಚಿರರತ್ನದಿಂ |
ಪುದಿದ ಗೋಪುರದೊಳಗೆ |
ವಿದುರಮಯವಾಗಿ ತೋರ್ಪ ಕವಾಟದಿಂ ||
ಒದವಿ ನೀಳ್ದಿಕ್ಕೆಲದ |
ಸುದತೀಜನಂಗಳಿಂ |
ಮೃದುಮಧುರತೂರ್ಯರವದಿಂದೆಸೆವುದು || ೨೩ ||

---

೧-೧ (ಗ) ಪುರಿದಿ. ೨-೨ (ಕಖಗ) ಳ್ಗೆಯಿಂ. ೩-೩ (ಗ) ಯಿಂದೇ. ೪-೪ (ಗ) ಗೃಹ.

ಶಶಿಕಾಂತದಿಂ ಸಮೆದ |
ಮಿಸುಪ ಭಿತ್ತಿಯ ಮೇಲೆ |
ರಸಚಿತ್ರಮಂ ಬರೆದು ನೋಳ್ಪಾಗಳು ||
ಎಸೆವ ನಿಜನಯನರುಚಿ |
ಗೊಸರ್ವ ಚಂದ್ರೋಪಳಕೆ |
ಕಿಸುಗನಲ್ವು ಮುಗ್ಧೆಯರು ಬಳಲ್ವರು || ೨೪ ||

ಚಂದ್ರಕಾಂತದ ಗೃಹದಿ- |
ನಿಂದ್ರನೀಲದ ರುಚಿರ- |
ರುಂದ್ರರುಚಿರಂಗಳಿಂದಾಪುರದೊಳು ||
ಚಂದ್ರಿಕಾವಿಸರಮಂ |
ಸಾಂದ್ರಮೆನಿಸಿದ ತಮವ- |
ಮಿಂದ್ರತತಿಗಂ ಬಣ್ಣಿಸುವೊಡಮರಿದು || ೨೫ ||

ಕುಚಯುಗಂ ಕಂಪಿಸಲು |
ಕಚನಲಿದು ನರ್ತಿಸಲು |
ರುಚಿರ ಚೀನಾಂಚಲಂ ಕೊರಳೊಳೆಸೆಯೆ ||
ಅಚಿರ ರುಚಿಯಿಂದ ಬಿದಿ |
ರಚಿಯಿಸಿದನಿವರನ್ಯ |
ಶಚಿರೂಪೆಯರು ಪುಟ್ಟ ಮರುಳಿಸುವರು || ೨೬ ||

ಮಾಲೆಗಂ ಸುಯ್ಗಳಿಗೆ |
ಸೂಳನಱಿದೆಱಗುವಳಿ- |
ಮಾಲೆಗಳ ಮೆಲುಪ [ಮಂ] ಕಂಡು ಮೆಱೆವ ||
ಮಾಲೆಗಾರ್ತಿಯರುಯ್ವ |
ಮಾಲೆ ಗೋಪುರದಲ್ಲಿ |
ಲೀಲೆಯಿಂ ತಪ್ಪುವಂಗಜದಾಳಿಯ || ೨೭ ||

---

೧ (ಕಖಗ) ರಲ್ಲಿ. ೨-೨ (ಗ) ತಮಮು. ೩-೩ (ಗ) ವಡರಿದು. ೪ (ಕಖಗ) ರಿ. ೫ (ಕಖಗ) ರ. ೬-೬ (ಗ) ಮೇಲಿಪ್ಪ. ೭-೭ (ಕಖಗ) ಪ್ಪರ.

ರುಚಿರ ನವರತ್ನದಿಂ |
ರಚಿಯಿಸಿದ ಕಾಂಚನದಿ |
ರಚಿತಮಾಗಿರ್ದರಮನೆಯ ಚೆಲುವನು ||
ಸಚರಾಚರೈಕಪತಿ- |
ಗಚಲಭಕ್ತಿಯೊಳಿಂದ್ರ |
ರಚಿಯಿಸಿದನೆನೆ ಬಣ್ಣಿಪಣ್ಣನಾವಂ || ೨೮ ||

ಮದವಿಲ್ಲದಾನೆ ಸಂ- |
ಮದವಿಲ್ಲದಿಪ ಹೊತ್ತು |
ಮದನಮದವಿಲ್ಲದುದ್ಯಾನವಿತತಿ ||
ಮುದಿವಿಲ್ಲದಂಗನೆಯು- |
ರದಿಟ್ಟೆಲ್ಲದಿಹ ವೀರ- |
ರುದಯುವಿಲ್ಲದ ಬೀಯುವಿಲ್ಲದೆಂದು || ೨೯ ||

ಚತುರರಲ್ಲದಯುವರು |
ಸತಿಯುರಲ್ಲದ ಪೆಂಡಿ- |
ರತಿಸುಭಟರಲ್ಲದ ಪದಾತಿಜಾತಂ ||
ಕೃತಿಗಳಿಲ್ಲದ ಕವಿಗ- |
ಳತುಳಬಳವಿರದ ಜನ- |
ತತಿಗಳಿಲ್ಲೆಲ್ಲಿ ನೋಡುವಡೆಯಲ್ಲಿ || ೩೦ ||

ಆ ಪುರಕ್ಕಧಿಪನವ- |
ನೀಪಾಲ ಮೌಳಿಮಣಿ- |
ದೀಪಿಕಾನೀರಾಜಿತಾಂಘ್ರಿಕಮಲಂ ||
ಶ್ರೀಪವಿತ್ರಿತಮಾದ |
ರೂಪಮನುವಂಶೈಕ- |
ದೀಪನಾದಂ ನಾಭಿರಾಜನೆಂಬಂ || ೩೧ ||

---

೧ (ಗ) ಥ. ೨ (ಗ) ವಿ. ೩-೩ (ಗ) ರುದಯುಬಿರವಿಲ್ಲದ. ೪ (ಗ) ಳ. ೫-೫ (ಕಖ) ವಲ್ಲ; (ಗ) ವಲ್ಲರ. ೬-೬ (ಗ) ತತಿಯನೋಡುವಡಲ್ಲವಲ್ಲಲ್ಲಿ. ೭-೭ (ಗ) ಪತಿತಿತ.

ಸುರದನುಜಮನುಜಖೇ- |
ಚರಲೋಕದಂಗನಾ- |
ಪರಿಕರದ ಪುಣ್ಯಲಾವಣ್ಯಾಂಬುವಿಂ ||
ವಿರಚಿಸಿದನರ್ತಿಯಿಂ |
ಸರಸಿರುಹಭವನೆನಿಪ |
ತರುಣಿ ಮರುದೇವಿ ನಾಭಿಯ ವಲ್ಲಭೆ || ೩೨ ||

ಸುರನರೋರಗಮುಕುಟ- |
ಸುರುಚಿರಾನರ್ಘ್ಯಮಣಿ- |
ಪರಿಚುಂಬಿತಾಂಘ್ರಿಪಂಕೇಜಯುಗಳಂ ||
ಮರುದೇವಿಗಂ ನಾಭಿ- |
ನರಪತಿಗೆ ಪುಟ್ಟಿದಂ |
ಪುರುದೇವನೆಂಬವನೀವಲ್ಲಭಂ || ೩೩ ||

ಭರತಷಟ್ಖಂಡೈಕ- |
ಪರಿವೃಢಂ ತಾ ನಿಖಿಲ |
ಧರಣಿಪಾಲಕಮೌಳಿಲಾಲಿತಪದಂ ||
ವರಯಶಸ್ವತಿಗೆಯುಂ |
ಪುರುಜಿನಾಧಿಪತಿಗಂ |
ಭರತೇಶಚಕ್ರಿತನುಜಾತನಾದಂ || ೩೪ ||

ಆನರಪತಿಗೆ ಸುತಂ |
ಭೂನುತಪರಾಕ್ರಮಂ |
ದಾನಸನ್ಮಾನತೋಷಿತಸಜ್ಜನಂ ||
ಮಾನನಿಧಿಯಖಿಲವಿ- |
ದ್ಯಾನಿಲಯನುರುಗುಣವಿ- |
ತಾನನಾದಂ ಸುಭಟನರ್ಕಕೀರ್ತಿ || ೩೫ ||

ಅಂತೆಸೆವಿ[ನಾ[೧]-ನೃಪರ] |
ಕಾಂತಮಿಕ್ಷ್ವಾಕುಕುಳ- |
ಸಂತತಿ ಧರಿತ್ರಿಗಾಶ್ಚರ್ಯವೆನಿಸಿ ||

---

೧ (ಕಖಗ) ಸಂ. ೨-೨ (ಗ) ಕಾಂತದಿಂದವಿ. ಈ ಸಾಲು ಕಖ ಪ್ರತಿಗಳಲ್ಲಿ ಬಿಟ್ಟು ಹೋಗಿದೆ.

ಸಂತಸದಿ ಸಮವಸೃತಿ- |
ಯಂತೆ ತಡೆವಱಿಯ[ದಂ] |
ದಿಂತು ಮುನಿಸುವ್ರತಂ [ಬರಂ] ಬರಲು || ೩೬ ||

ಆಕುಲದೊಳಗಖಿಲವಿ- |
ದ್ಯಾಕುಶಲನಾನವ್ರ |
ಭೂಕಾಂತಶೇಖರಪಾದಾರವಿಂದ ||
ಶ್ರೀಕಾಂತನುತಮೂರ್ತಿ |
ಲೋಕೈಕನುತಯಶಃ |
ಶ್ರೀಕಾಂತವಿಜಯರಥನೆಂಬ ನೃಪತಿ || ೩೭ ||

ಆಮಹೀಶನ ವನಿತೆ |
ಭೂಮಹಿತೆ ಶೀಲವತಿ |
ಕಾಮಿನೀರತ್ನಮನವದ್ಯಚರಿತೆ ||
ಹೇಮಂತಿಕಾಂಗಿ ಗುಣ- |
ಧಾಮಸೌಭಾಗ್ಯನಿಧಿ |
ಹೇಮಮಾಳಿಕೆಯೆಂಬ ಪಟ್ಟದರಸಿ || ೩೮ ||

ಅವರೀರ್ವರಿಗೆ ಸಕಲ |
ಭುವನಭುಂಭುಕಯಶಂ |
ಸವಿನಯವಿನಮ್ರ ನಿಖಿಲಕ್ಷಿತೀಶಂ ||
ವಿವಿಧ ವಿದ್ಯಾಬ್ಧಿಯು- |
ದ್ಭವಿಸಿದಂ ಜನನಯನ- |
ಕುವಲಯಾನಂದಂ ಸುರೇಂದ್ರವಂದ್ಯಂ || ೩೯ ||

ಆತತಾಮಲಚರಿತೆ |
ಭೂತಳವಿನುತಗುಣೆ |
ಶೀತಾಂಶುವದನೆ ಸೌಭಾಗ್ಯಸದನೆ ||

---

೧-೧ (ಗ) ಯಂತೆಡ. ೨-೨ (ಕಖಗ) ವ್ರತರ ಪರಿಯಂತ ಬರಲು. ೩-೩ (ಕಖ) ಮನ್ಮ.

ಖ್ಯಾತಿವಿತತಪ್ರಥಮೆ |
ಜಾತಿಯಾದಳು ವನಿತೆ- |
ಯಾತಂಗೆಸೆವ ಕೀರ್ತಿಶ್ರೀಯೆಂಬ [ಳ್][1] || ೪೦ ||

ಅಂದದಿಂದದಟಲೆದು |
ಕಂದರ್ಪನಂ ಜಸದೆ |
ನಿಂದು ಸೌಂದರವಾದ ವದನೆ ಗೆಲಿದು ||
ನಂದನತ್ರಿಜಗದಾ- |
ನಂದನರು ಪುಟ್ಟಿದರು |
ಸಂದವರ್ಗೆ ವಜ್ರಬಾಹು-ಪುರಂದ್ರ[ರ್][2] || ೪೧ ||

ತನಗೆ ಮಗನೊರ್ವನಾ- |
ತನ ತನೂಭವರಿರ್ವ- |
ರನುನಯದಿನಾಗಲಾ ವಿಜಯರಥನು ||
ಜನಪತಿಪ್ರತತಿಗಳು |
ವಿನಯಸಾಮ್ರಾಜ್ಯದಲು |
ಮನುಜೇಂದ್ರಲೀಲೆಯಿಂದೋಲಗದೊಳು || ೪೨ ||

ಇರೆ ನೃಪಾಲಂ ಸಭೆಯೊ- |
ಳರಸುಗಳ ನಡುವತಿ |
ತ್ವರಿತಗತಿಯಿಂ ಲಂಬಕೂರ್ಚನೊರ್ವಂ ||
ವರವೇತ್ರಹಸ್ತನಾ- |
ದರದಿಂದ ಪ್ರತಿಹಾರ- |
ನುರುತರ ವಿನಯದಿಂದೆ ಬಿನ್ನವಿಸಿದಂ || ೪೩ ||

ದೇವ, ಬಾಗಿಲೊಳು ವಸು- |
ಧಾವಿದಿತನಿರ್ದಪಂ |
ದೇವನಂ ಕಾಣಲೆಂದಿಭವಾಹನಂ ||
ಭೂವರನ ಸೂನು ತಾ- |
ನಾವಾಸನಖಿಳವಿ- |
ದ್ಯಾವಿಶಾರದನುದಯಸೌಂದರನು || ೪೪ ||

೧ (ಕಖಗ) ಳು. ೨ (ಕಖಗ) ರು.

ಎನಲೊಡಂ ಕೇಳ್ದು ನೃಪ- |
ನನುಮತದಿನಾತನಂ |
ವಿನಯಭರವಿನತನಂ ಕಾಣಿಸಲೊಡಂ ||
ಜನಪತಿಯ ಚರಣಪಾ- |
ವನಪಯೋಜವ ತನ್ನ |
ಕನಕಮಯ ಮಕುಟದಿಂದರ್ಚಿಸಿದನಂ || ೪೫ ||

ಆನಾಗಪುರರಮಣ- |
ನಾನೃಪಾಲಂಗೆ ತ- |
ತ್ಸೂನುಗೆ ತದೀಯ ನಂದನರಿಗೊಲವಿಂ ||
ಭೂನುತಂ ಸಮುಚಿತವಿ- |
ಧಾನವಿನಯವ ಮಾಡಿ |
ತಾನುಚಿತವಿಷ್ಟರದಿ ಕುಳಿತಿ[ರ್ದನು] || ೪೬ ||

ಬಿನ್ನಪಂ ದೇವ, ಪಿತೃ- |
ವೆನ್ನನಟ್ಟಿದನಿಲ್ಲಿ- |
ಗೆನ್ನ ತಂಗಿಯ ಗುಹೋದಯೆಯೆಂಬ[ಳ] ||
ತನ್ನ ಮಗಳಂ ನುತಗು- |
ಣೋನ್ನತಂಗಖಿಳ ನೃಪ |
ಸನ್ನುತಂಗೀ ವಜ್ರಬಾಹುವಿಂಗೆ || ೪೭ ||

× × × ×

ಎನಲೊಡಂ ಸಂತಸದಿ |
ಕನಯನನುದಯಸೌಂದ- |
ರನೊಡನೆ ಶುಭಲಗ್ನದೊಳನುನಯ[ದೊಳು] ||
ಘನವಿಭವದಿಂ ಕಳಿಪೆ |
ಮನುಜೇಂದ್ರ ಲೀಲೆಯಿಂ |
ಜನಕನಂ ಬೀಳ್ಕೊಂಡು ವಜ್ರಬಾಹು || ೪೮ ||

೧-೧ (ಗ) ತಂದೆಯು. ೨-೨ (ಕಖಗ) ಕುಳಿತಿರ್ದು. ೩ (ಕಖಗ) ಳು. ೪-೪ (ಗ) ದಿಂದ. ×-× ದಿಂ; ಈ ಎರಡು ಸಾಲುಗಳು ಕಖ ಪ್ರತಿಗಳಲ್ಲಿ ಬಿಟ್ಟುಹೋಗಿವೆ.

ಬರುತ ಕಂಡಂ ಮುಂದೆ |
ಸುರಗಿರಿಯನಿಳಿಕೆಯ್ವ |
ಸುರಲೋಕಮುಂ ಮುಟ್ಟುವುನ್ನತಿಯಲಿ ||
ಧರಣಿವಧುವಿನ ಕುಚದ |
ಪರಿಯಿಂದೆ ತೋರ್ಪುದಂ |
ಭರದಿಂ ವಸಂತಗಿರಿಯಂ ಕುಮಾರಂ || ೪೯ ||

ಆಗಿರಿಯ ತಪ್ಪಲೊಳು |
ಯೋಗಿಮುಖಂ ಪರಮ |
ಯೋಗನಿಧಿ ಗುಣಸಾಗರಾಖ್ಯಮುನಿಪಂ ||
ಶ್ರೀಗೆ ನೆಲೆಯೆನಿಸಿದೀ |
ಭೂಗಧೀಶಂ ಮುಂದೆ |
ರಾಗಮೋಹಂಗಳೊಳ್ ದೂರೆನಿರ್ದಂ || ೫೦ ||

ಇರದೆ ವಾಹನದಿಳಿದು |
ಕರಕಮಲಮಂ ಮುಗಿದು |
ಹರುಷೋತ್ಕರ್ಷಚಿತ್ತದುರುವಿನಯದಿಂ ||
ಭರದಿಂದೆ ಬಲಗೊಂಡು |
ವರಧರ್ಮವಂ ಕೇಳ್ದ- |
ವರಿರ್ವರಲ್ಲಿ [ ಯೆ ] ದೀಕ್ಷೆಯಂ ಕೊಂಡರು || ೫೧ ||

ಇತ್ತ ವಿಜಯರಥನಿರ- |
ದಿತ್ತು ಸಾಮ್ರಾಜ್ಯವನು- |
ದಾತ್ತಚಿತ್ತಂ ಸಲೆ ಪುರಂದರಂಗೆ ||
ಚಿತ್ತಜನನಲೆಯಲು ಜಿ- |
ನೋತ್ತಮುಸುದೀಕ್ಷೆಯಂ |
ಚಿತ್ತೈಸಿ ಶತಮನ್ಯುವೆರಸು ತಳೆದಂ || ೫೨ ||

೧-೧ ( ಕಖ ) ತಪ್ಪಲೊಳು. ೨-೨ ( ಗ ) ಮೋಹಾದಿಗಳ ದೂಶ. ೩-೩ ( ಖ ) ಇರೆ. ೪-೪ ( ಕಖಗ )ದಿನಿಳಿದು,

ಆಪುರಂದರನಖಿಲ- ।
ಭೂಪಾಲಮೌಳಿಮಣಿ- ।
ದೀಪಮಾಲಾಲಾಳಿತಾಂಘ್ರಿಕಮಲಂ ॥
ಕೋಪಪ್ರಸಾದಪ್ರ- ।
ತಾಪಪ್ರಶಮಯಶಃ ।
ಶ್ರೀಪವಿತ್ರಂ ಸುಖದಿನರಸುಗೆಯ್ದಂ ॥ ೫೩ ॥

ಆಧರಾಧಿಪಸುತನ- ।
ಗಾಧಗುಣನಿಖಿಲವಿ- ।
ದ್ಯಾಧರೆ-ಕೀರ್ತಿನರ್ತಿತತ್ರಿಭುವನಂ ॥
ಸಾಧಿತಾರಾತಿನೃಪ- ।
ಸಾಧನಂ ಧೈರ್ಯಕುಲ- ।
ಭೂಧರಂ ಕೀರ್ತಿಧರನೆಂಬನಾದಂ ॥ ೫೪ ॥

ಆಕೀರ್ತಿಧರನ ಸುತ- ।
ನೇಕಾಂಗವೀರನಿ- ।
ಕ್ಷ್ವಾಕುಕುಲಭೂಷಣಂ ರಿಪುಭೀಷಣಂ ॥
ಲೋಕೈಕನುತನಮಮ ।
ನಾಕನಾಯಕವೈಭ- ।
ವಾಕೀರ್ಣನಾದಂ ಸುಕೋಶಲನೃಪಂ ॥ ೫೫ ॥

ಆಸುಕೋಶಲ ದೇಶ- ।
ದಾಸುಕೋಶಲನೃಪತಿ- ।
ಗಾಸತಿ ವಿಚಿತ್ರಮಾಲೆಗೆ ಪುಟ್ಟಿದಂ ॥
ಆಸಾಗರಾಂತಮಾ- ।
ದೀಸವಸ್ತೋರ್ವಿಗಂ ।
ಶ್ರೀಸುದತಿಗಂ ಪತಿ ಹಿರಣ್ಯಗರ್ಭಂ ॥ ೫೬ ॥

೧-೧ (ಕಖಗ) ದ್ಯಾಧರಂ. ೨-೨ (ಗ) ನಾಯಕ. ೩ (ಗ) ಕೌ. ೪ (ಗ) ಕೌ. ೫ (ಗ) ಗ.

ತದಪತ್ಯನಹುಷಸ- |
ನ್ಮದವೈರಿಕುಲಗಿರಿ- |
ಚ್ಛಿದುರಭಿದುರಂ ತದೀಯ ತನೂಭವಂ ||[೧]
ಕದನಕರ್ಕಶಭೂಭೃ- |
ದುದಧಿ-ಕುಂಭೋದ್ಭವಂ |
ಮದನಸೌಂದರನೆನಿಪುದಾರನೃಪತಿ || ೫೭ ||

ಸಂಹರಿಸಿದಂ ವೈರಿ- |
ಸಂಹತಿಯನಾಜಿಯೊಳು |
ಸಿಂಹವಿಭಘಟೆಗಳಂ ಗೆಲುವಂದದಿಂ ||
ಸಿಂಹವಿಕ್ರಮಸಮಬ-
ಲಂ ಹೇಮಸೌಮ್ಯನತಿ |
ಸಿಂಹರಥನೃಪತಿಸೌಂದರಸುತನುಜಂ || ೫೮ ||

ಆನೆಗಬ್ಬಿ ಸಿಂಹರಥ- |
ಭೂನಾಥನಾತ್ಮಜಂ |
ಮಾನನಿಧಿ ಬ್ರಹ್ಮರಥನೆಂಬ ನೃಪತಿ ||
ಆನೃಪನ ತನಯನು- |
ವೀರನಾಥಶೇಖರನ -
ನೂನಾಭರಣಚತುರ್ಮುಖನರೇಂದ್ರಂ || ೫೯ ||

ಆಮಹೀಶನ ಸುತಂ |
ಭೂಮಿಯಂ ನಿಜಭುಜದೊ- |
ಳೀಮಾತ್ರೊ ಕಸ್ತೂರಿಯಂತೆ ತಳೆದಂ ||
ಕಾಮಿನೀಜನನಯನ- |
ಸೋಮ್ಯೈಕನಚಲಿತಂ |
ಹೇಮಗಿರಿಹೇಮರಥನೆಂಬ ಭೂಪಂ || ೬೦ ||

---

೧ (ಗ) ಚ್ಛೇ. ೨ (ಕಖ) ಖ್ಯ. ೩ (ಗ) ಲೊ. ೪ (ಗ) ರಿ.

ಆರಾಜಸುತನೆಮಳ- |
ಭೂರುಹಾಧಾರನುರು- |
ಗೌರವವಿನಿರ್ಜಿತಸುರೇಂದ್ರಶೈಲಂ ||
ಕ್ಷೀರವಾರಾಶಿಗಂ- |
ಭೀರನಹಿತೇಭಕಂ- |
ಠೀರವಂ ಸಕಳೇಂದುರಥನೃಪಾಲಂ || ೬೧ ||

ಆನೃಪಾಲನ ಸೂನು |
ದಾನಸುರಧೇನು ಸಂ- |
ಮಾನಸಂತರ್ಪಿತಸಮಸ್ತಭುವನಂ ||
ಭಾನುತೇಜೋನಿಧಿ ಕ- |
ಳಾನಿಧಿ ವಿವೇಕನಿಧಿ |
ತಾನಾಗಿ ಭಾನುರಥನೆಂಬ ಭೂಪಂ || ೬೨ ||

ಮಯನೆಂಬ ನಿಖಿಲವಿ- |
ಸ್ಮಯನಿಲಯವಿಕ್ರಮಂ
ಭಯಲೋಭರಹಿತನಮರೇಂದ್ರಮಹಿತಂ ||
ನಯನಿಪುಣನಾಜಿಯೊಳು |
ಜಯಶೀಲನಾಮಹಾ- |
ನಯದೊಳುದಯಿಸಿದನಲ್ಲಿಂ ಬಳಿಕ್ಕಂ || ೬೩ ||

ಬಂಧುರಗುಣಂ ವೈರಿ- |
ಗಂಧಸಿಂಧುರಘಟಾ- |
ಬಂಧಕುಂಭಸ್ಥಳನತಾರವಿಂದ ||
ಸಂದಾನಿತಾರ್ಥಿ ಪ್ರ- |
ಬಂಧನಾಕುಲದಲ್ಲಿ |
ಮಾಂಧಾತನೆಂಬಂ ನರೇಂದ್ರನಾದಂ || ೬೪ ||

---

೧-೧ ( ಕಖ ) ಸ್ಮಯ ವಿಕ್ರಮಂ ! ೨ ( ಕಖಗ ) ವಿ.

ಅರಿವಂಗಾಜಿಯೊಳು |
ವೈರಿಗ [ ಳೆನುತ್ತೆ ] ದಿವಿ- |
ಜೋರಗನರೇಂದ್ರಸಂತತಿ ಹೊಗಳಲು ||
ಧಾರಿಣಿಯನೆಯ್ದೆ ಕ- |
ಸ್ತೂರಿಯಂದದೆ ಭುಜದಿ |
ವೀರಸೇನಂ ನೃಪತಿ ಧರಿಯಿಸಿದನು || ೬೫ ||

ಬಂಧು ಕೈರವಕುಮುದ- |
ಬಂಧು ರಿಪುತಿಮಿರಾಬ್ಜ- |
ಬಂಧು ತರುಣೀಜನವಸಂತಬಂಧು ||
ಬಂಧುರಯಶಂ ಭುವನ- |
ಬಂಧುವಲ್ಲಿಂ ಕಮಳ- |
ಬಂಧುವೆಂಬಂ ನೃಪತಿಯುದಯನಾದಂ || ೬೬ ||

ಅರಿಯಧೀಶ್ವರರ [ ನವ ] |
ತರುಣಿಯರ ನಯನಜಲ- |
ವರುಷದಿಂ ನಿಜಕೀರ್ತಿಲತೆಯ ಬೆಳಸಿ ||
ಧರೆಯ ಪಾಲಿಸಿದನಾ- |
ದರದಿಂದ ಜಯಲಕ್ಷ್ಮಿ- |
ಯರಸಂ ವಸಂತತಿಲಕಕ್ಷಿತೀಶಂ || ೬೭ ||

ನಿರವದ್ಯತರನಿತ್ತ- |
ನುರುತರಗುಣೋದಾತ್ತ- |
ನರಿಮದವಿದಾರಣಕರಣಚಿತ್ತನು ||
ವರಭುಜಮದೋನ್ಮತ್ತ- |
ನರರೆ ಜೀವಾಯತ್ತ- |
ನರಸಾದನಧಿಕಂ ಕುಬೇರದತ್ತಂ || ೬೮ ||

---

೧-೧ ( ಕಖಗ ) ಳನೆತ್ತ. ೨-೨ ( ಕಖ ) ಜೋರಗನರೇಂದ್ರ ಖಗೇಂದ್ರ; ( ಗ ) ಜೋರಗ ಖಗೇಂದ್ರ. ೩ ( ಗಖ ) ವೆ. ೪ ( ಗ ) ಲಾ. ೫-೫ ( ಗ ) ವರ್ಷ. ೬-೬ ( ಗ ) ಜೀವೋ.

ಹಗೆಗಳಂ ಗಜಘಟೆಯ- |
ನುಗಿವ ಸಿಂಹದ ತೆಱದಿ- |
ನುಗಿದವಱ ದೇಶಕೋಶವನೆ ಕೊಂಡು ||
ಜಗವೆಲ್ಲ ಜೀಯೆಂದು |
ಹೊಗಳೆ ಸಾಮ್ರಾಜ್ಯಮಂ |
ಮಿಗೆ ಮಾಡಿದಂ ಮೃಗಾದಿಕ್ಷಿತೀಶಂ || ೬೯ ||

ದಮನೆಂಬ ನೃಪತಿ ದೋ- |
ರ್ದಮದುಷ್ಟವಿದ್ವಿಷ್ಟ- |
ಸಮದಗಜಕುಂಭವಿದಳನಕೇಸರಿ ||
ಕ್ರಮದಿನಖಿಳಧರಾಧಿ- |
ರಮಣಮಣಿಮಕುಟಚಯ- |
ರಮಣೀಯ ಚರಣಸರಸಿರುಹನಾದಂ || ೭೦ ||

ತದ್ವಂಶತಿಲಕಂ ವಿ- |
ಪದ್ವಿದೂರ [ ನತಿ ] ಸಂ- |
ಪದ್ವರಂ ಭುವನಭುಂಭುಕ ಯಶಂ... ||
ವಿದ್ವಿಷ್ಟರಂ ಗೆಲಲು |
ವಿದ್ವಾಂಸರಂ ಹೊರೆದು |
[ ತ ] ದ್ವಿಪರಥಂ ಬಳಿಕ್ಕರಸಾದನು || ೭೧ ||

ಕೀರ್ತಿ ದಿಗ್ಗಜತತಿಗೆ |
ಕೀರ್ತಿಮುಖಮೆನಿಸಿ ನಿಜ- |
ಮೂರ್ತಿಮಾನಿನಿಯರಂ ಮರುಳುಮಾಡಿ ||
ಮಾರ್ತಂಡ-ತೇಜನಖಿ- |
ಳಾರ್ತಿಹರವೈಭವಂ |
ಕೀರ್ತಿವಡೆದಂ ಪತಿ ಹಿರಣ್ಯಕಶಿಪು || ೭೨ ||

೧-೧ ( ಗ ) ಕ್ರಮನಖಿಳ. ೨-೨ ( ಕಖಗ ) ರಮಣಿಯ. ೩-೩ ( ಕಖಗ ) ತಿಲಕ ಸಕಲ. ೪ ( ಕಖಗ ) ನ.

ಕರ್ಕಶನೃಪಾಲತಿಮಿ- |
ರಾರ್ಕಸಮನೆಂದು ಸುಭ- |
ಟರ್ಕಳೆಲ್ಲಂ ತನ್ನನೊಲಿದು ಹೊಗಳೆ ||
ಮಾರ್ಕೊಂಡು ಗೆಲಲು ಭೂ- |
ಪರ್ಕಳಂ ಧಾರಿಣಿಗ[೧]- |
ಮರ್ಕರಥ ಪಾರ್ಥಿವಂ ರಮಣನಾದಂ || ೭೩ ||

ಉರಿವರಿವ ನಿಜತೇಜ- |
ದುರವಣಿಗೆ ಸಕಲ-ದಿ-|
ಕ್ಕರಿಕುಂಭಮೌಕ್ತಿಕಾಲಂಜೆಯಂತೆ ||
ತೆರಳೆ ನಿಜಕೀರ್ತಿ ಬಂ- |
ಧುರಸುಧಾವರ್ಷದಿಂ- |
ಧರೆಯ ತ[೨]ಣ್ಣಲಯಿಸಿ[೨]ದನಾದಿಳಿಂಪಂ || ೭೪ ||

ವಿಘಟಿಸಿ[೩]ಯಹಿತ[೩] ಭುಜಪ- |
ರಿಘಮದಾಟೋಪಮಂ |
ಲಘುತೃಣಕೃತಂ ಜಗತ್ಸತ್ವಸಾರಂ ||
[೪]ಅಘ[೪]ವಿದಾರಣಕಾರ- |
ಣಘನಗುಣಗಣಮೂರ್ತಿ |
ರಘುವೀರನಾದಂ ಧರಾಪಾಲಕಂ || ೭೫ ||

ಅವರೆಲ್ಲರುಂ ಸಕಲ- |
ಭುವನಮೆಲ್ಲಂ ಹೊಗಳೆ |
ಸವಿದು ಸಾಮ್ರಾಜ್ಯಪದಪೀಯೂಷಮಂ ||
ದಿವಿಜೇಂದ್ರರಂ ಪೋಲ್ವ |
ವಿವಿಧವಿದ್ಯಾಗಮ- |
ಪ್ರವರ[ರೆ][೫] ನಿಪರ್ತ[ಮ್ಮ][೬] ತಮ್ಮ ಸುತರ್ಗೆ || ೭೬ ||

೧ (ಕಖಗ) ಗೆ. ೨-೨ (ಗ) ತಲ್ಲಣಿಸಿದ. ೩-೩ (ಗ) ಭುಜಾತ. ೪-೪ (ಗ) ಲಘು. ೫(ಕಖಗ) ನೆ. ೬ (ಕಖಗ) ಮ್ಮ.

ಹೇಯ[1]ಮೆಂದಾತ್ಮಜ-ನಿ- |
ಕಾಯಕ್ಕೆ ಕೊಟ್ಟುಪಾ- |
ದೇಯಮಂ ಜಿನದೀಕ್ಷೆಯಂ ಧರಿಯಿಸಿ ||
ಪ್ರಾಯೋಪಗಮನದಿಂ- |
[2]ದೀಯೆಲ್ಲರೆಯ್ದಿದ- |
ರ್ಜೀಯೆನಲ್ ಸ್ವರ್ಗಾಪವರ್ಗಂಗಳಂ || ೭೭ ||

ವಿತರಣಸುರದ್ರುಮಂ |
ಚತು[3]ರುದ[4]ಧಿವಿಶ್ರಾಂತ- |
ಶತಮುಖನಿಕರಶಿಖಾಮಣಿಲಾಲಿತ ||
ಅತುಳಮಪ್ಪತಿ ವಿಶದ- |
ಮತಿಕೀರ್ತಿಯಿಂದೆ ಧವ- |
ಳಿತಲೋಚನವಾಯ್ತಿಕ್ಷ್ವಾಕುವಂಶಂ || ೭೮ ||

ಆಕುಲದೊಳಮಳ ವಿ- |
ದ್ಯಾಕಾಮಿನೀಕಾಂತ- |
ನಾಕೀರ್ಣಕರ್ಣಾವತಂಸಸುಗುಣಂ ||
ಲೋಕೈಕವಿಶ್ರುತವಿ- |
ವೇಕನುದ್ಭವಿಸಿದಂ |
ಭೂಕಾಂತನನರಣ್ಯನಧಿಕಪುಣ್ಯಂ || ೭೯ ||

ಆಮಹೀಶನ ವನಿತೆ |
ತಾಮರಸವದನೆ ಪೌ- |
ಲೋಮಿಯಂ ಲಾವಣ್ಯದಿಂ ಗೆಲುವಳು ||
ಶಾಮಾಂಗಿಯೆನಿಪ ಪೃ- |
ಥ್ವೀಮಹಾದೇವಿಯಾ |
ಕಾಮಿನಿಗನಂತರಥನು ದಶರಥನು || ೮೦ ||

(೧ (ಗ) ಮು. ೨ (ಗ) ದೆ. ೩-೩ (ಗ) ರದದೆ.

ತನಯರಾದರ್ಭುವನ |
ಜನಮನೋಹರಚರಿತ-|
ರನವದ್ಯಶೀಲರುರ್ವೀಪಾಲರು ||
ಅನರಣ್ಯನೊಸೆದು ನಿಜ |
ತನಯರಂ ಕರೆದು ಪಾ- |
ವನಗಭೀರೋದಾರಸೂಕ್ತಿಯಿಂದ || ೪೧ ||

ರವಿಶಶಿಗಳೊಲಿದು ಗಗ- |
ನವನಿರದೆ ಬೆಳಗುವಂ- |
ತವಿತರ್ಕ್ಯತೇಜಪ್ರಕಾಶಯುತರು ||
ಕುವರರಿಕ್ಷ್ವಾಕು ವಂ- |
ಶವ ಬೆಳಗಲೆನಗಾದ- |
ರಿವರೆನಗೆ ಸಾಕು ರಾಜ್ಯದ ತೃಷ್ಣೆಯು || ೪೨ ||

ಅಂತೆನುತ್ತಾನೃಪನ- |
ನಂತರಥನಾಸ್ಯಮಂ- |
ಸಂತಸದಿ ನೋಡಿ ಪರಮಾನಂದದಿಂ ||
ಇಂತೆಂದನೆಲೆ ತನುಜ |
ನೀಂ ತಳೆ ಧರಾಭಾರ- |
ವಾಂ ತಳೆವೆನುನ್ನತಂ ಜಿನದೀಕ್ಷೆಯಂ || ೪೩ ||

ಎನಲೊಡನನಂತರಥ-|
ನನುನಯದಿನೆಂದನತಿ |
ವಿನಯವಿನುತಂ ಮುಗಿದು ಕರಕಮಲಮಂ ||
ಇನಿತು ಹೇಯಂ ನಿಮಗಿ- |
ದೆನ [ ಗೆ[೧] ]ಂತುಪಾದೇಯ-|
ಮನುಚಿತಮೆನೀವುದುಚಿತಮೆ ಸುತಂಗೆ || ೪೪ ||

---

೧ ( ಕಖಗ ) ಗಿ. ೨ ( ಗ ) ೦.

ಅಂತೊಡಂಬಡದಿರಲ- |
ನಂತರಥನಾತನಂ |
ಸಂತೈಸಲಾರದನರಣ್ಯನೃಪತಿ ||
ಮುಂತಿರ್ದ ದಶರಥಂ- |
ಗಂತಾತನೂಜಂಗೆ |
ಸಂತಸದಿನೊಸೆದು ಪಟ್ಟವ ಕಟ್ಟಿದಂ || ೮೫ ||

ಅಂತಭಯಘೋಷಮುನಿ- |
ಪಾಂತರ[೧] ಸಮುಕ್ಷದೊಳು |
ಸಂತಸದಿನಿರ್ವರುಂ ದೀಕ್ಷೆಗೊಂಡು ||
ಶಾಂತರಸಮುಂ ತಳೆದ- |
ನಂತಸುಖಮಯಮನಾ- |
ತ್ಯಂತಿಕಮನಾರ್ಹಂತ್ಯಪದಮನೆಯ್ದೆ || ೮೬ ||

ಸುರನರೋರಗಖಚರ- |
ನರರೆಲ್ಲ ನೆರೆದು ಸುರು- |
ಚಿರವರ್ಯತೂರ್ಯತ್ರಯಂಗಳೆಸೆಯೆ ||
ಪರಮಪಾವನಭಕ್ತಿ- |
ಭರದಿಂದೆ ಪೂಜಿಸಿ ಸು- |
ಚರಿತರಂ ಬೀಳ್ಕೊಂಡು ಪೋದರಿತ್ತಂ || ೮೭ ||

ಪರಮ ಕೇವಲಬೋಧ- |
ದರುಶನಬಲಾನಂದ- |
ಧರರಾಗಿ ಭವ್ಯೈಕಸೇವ್ಯರಾಗಿ ||
ಸರಸಕವಿಮುಖತಿಲಕ |
ಪರವಾದಿಗಿರಿವಜ್ರ- |
ಧರರಾರ್ಹಂತ್ಯಲಕ್ಷ್ಮಿಯನೋಲಯಿಸೆ || ೮೮ ||

---

೧ (ಗ) ತಾ. ೨ (ಕಖ) ಜ.

# ೨ನೆಯ ಸಂಧಿ.

ರಾಗ--ಲಲಿತೆ. ಭಾಮಿನೀ ಷಟ್ಪದಿ.

ಭೂಮಿಪಾಲಕ ದಶರಥಂ [ ಗಾ[೧] ]
[೨] [ ಕಾಮಸಮ ] [೨] ತನೂ[೩]ಜರೆಂದೆನಿಸಿ |
ರಾಮಲಕ್ಷ್ಮಣರುದಯಿಸಿದರಭಿರಾಮವಿಕ್ರಮರು || ಪಲ್ಲವ ಪದ ||
ಶ್ರೀಯನುರದೊಳು ವಿತತವಿಜಯ- |
ಶ್ರೀಯನೊಪ್ಪುವ ಭುಜದೊಳುರುವಾಕ್- |
ಶ್ರೀಯನಾನನಕಮಲದೊಳು ಲೀಲೆಯೊಳು ತಾಂ ತಳೆದು ||
ನ್ಯಾಯಪಥದಿಂ ತೊಲಗದೆಲ್ಲಂ |
ಜೀಯೆನುತ್ತಿರೆ ತಾಳಿದಂ ಭೂ- |
[೪]ನಾಯಕತ್ವಮನಿತ್ತ[೪]ನೊಲವಿಂ ಸರಸಕವಿತಿಲಕಂ || ೧ ||

ಬಿದಿಗೆಯೆಳೆವೆಱೆಯಂದದಿಂದಂ |
[೫] [ ವಿದಿತ ] [೫] ಕಳಧರನಾಗಿ ಮೂಲೋ- |
ಕದೊಳು ತನ್ನಯ ಕೀರ್ತಿಚಂದ್ರಿಕೆ ತೊಳತೊಳಗಿ ಬೆಳೆಯೆ ||
ಮುದದೆ ಜನತತಿಕೈರವಾವಳಿ- |
ಗುದಯಿಸುತ್ತಾನಂದಮಂ ದು- |
ರ್ಮದವಿರೋಧಿನೃಪಾಲಪಂಕಜವನಮನಲೆಯುತ್ತಂ || ೨ ||

ಬೆಳೆದನಹಿತನೃಪಾಲರೆರ್ದೆಯ |
[೬] [ ಅ ] ಳಲು ಬೆಳೆವಂತಖಿಳಸುಜನಾ- |
ವಳಿಯ ನೆರಪಿದಗಣ್ಯಪುಣ್ಯದ ಬೆಳಸು ಬೆಳೆವಂತೆ ||
ಬೆಳೆದು ಯೌವನಲಕ್ಷ್ಮಿಯುಂ ಸಲೆ |
ತಳೆದು ತಳೆವಂತೆಯ್ದೆ ಧಾತ್ರೀ- |
ತಳವನಂಗದದಂತೆ ನಿಜದೋರ್ದಂಡದಿಂ ನೃಪನು || ೩ ||

---

೧. ( ಕ ಖ ಗ ) ಗೆ. ೨-೨ ( ಕ ಖ ಗ ) ಈ ಭಾಗವು ಬಿಟ್ಟುಹೋಗಿದೆ. ೩ ( ಕ ಖ ) ನು
೪-೪ ( ಗ ) ಯ್ಕಂ ಮುದವಿತ್ತು. ೫-೫ ( ಕ ಖ ಗ ) ಬೆಳೆದು. ೬ ( ಕ ಖ ) ವ; ( ಗ ) ದ.

ದಶರಥಂ ಗುಣರತ್ನರೋಹಣ |
ದಶರಥಂ ಸೌಜನ್ಯಮಾನ್ಯಂ |
ದಶರಥಂ ವಿತರಣವಿಕಸಿತಾನಲ್ಪಕಲ್ಪಕುಜಂ ||
ದಶರಥಂ ಘನಶೌರ್ಯವರ್ಯಂ |
ದಶರಥಂ ಭವ್ಯೈಕಸೇವ್ಯಂ |
ದಶರಥಂ ನಿಜಕುಲಲಲಾಮಂ ಸಕಲಗುಣಧಾಮಂ || ೪ ||

ಭರದೆ ತನ್ನೃಪನಂಕಮಾಲೆಯು- |
ನಿರವೆ ಮಧುರಸ್ವರಮೆಸೆಯೆ ಕಿ- |
ನ್ನರಿಯರಾನಂದದೊಳು ಪಾಡುತ್ತಿರೆ ಸುರಾಧೀಶಂ ||
ಎರಡು ಕೆಲದೊಳು ತನಗೆ ಸಿತಚಾ- |
ಮರವನಿಕ್ಕುವ ಸುರಸುದತಿಯರ |
ಕರಕಳಿತಕಂಕಣಝಣತ್ಕಾರಕ್ಕೆ ಕನಲುವನು || ೫ ||

ಆತನುರುತರ ಕೀರ್ತಿಯಂ ಕೇ- |
ಳ್ದೀತನೊಲವಿಂ [ ^೧^ತಲೆದೂಗೆ^೧^ ] ಕ್ಷ- |
ಮಾತಳಂ ಕಂಪಿಸುಗುಮೆಂದಿರದಂಜಿ ಕಂಜಭವಂ ||
ಭೀತಿಯಿಂ ಚಕ್ಷುಃಶ್ರವಣನೇ |
ಮಾತೊ ಶೇಷನನಱಿದು ಮಾಡಿದ- |
ನೀತೆಱನನಲ್ಲದೊಡೆ ಕಿವಿಯೇಕಿಲ್ಲ ಫಣಿಗಣಕೆ || ೬ ||

^೨^ಧುರದೊಳೀತನೊಳಣ್ಮಿ^೨^ ಕಾದುವ |
ಧರಣಿಪಾಲಕರೆಯ್ದೆ ತಪ್ಪದೆ |
ಸುರರೆಯಪ್ಪುದನಱಿದು ಸುರರಿಟ್ಟಳಕೆ ಸುರರಮಣಂ ||
ಸುರಪುರಂ ನೆಱೆಯದುದನಱಿದಾ- |
ದರದೆ ಹೊಱಕೇಱಿಯನೆ ಮಾಡಿಸಿ |
ಪರಿಧಿಯಂ ಮಾಡಿಸಿದನಿಲ್ಲೇಂ ವೀರನೋ ನೃಪತಿ || ೭ ||

---

೧-೧ (ಕಖಗ) ತಲೆಯುತೂಗೆ. ೨-೨ (ಕಖ) ಧುರದೊಳಣ್ಮ.

ಸುರಭಿಯಂ ಪಶುವೆಂದು ನೋಡ- |
ರ್ಪರುಷಮಂ ಕಲ್ಲೆಂದು ಮುಟ್ಟ- |
ರ್ಮರನಿದೆಂದಾದರಿಸ [ರೊ][೧]ಪ್ಪುವ ಕಲ್ಪಪಾದಪಮಂ ||
ಇರದೆ ಚಿಂತಿಸುತಿರ್ಪ ಗಸಣಿಗೆ |
ಭರದೆ ಚಿಂತಾಮಣಿಗೆ ಕನಲುವ- |
ರರಿದು ದಶರಥನೃಪನ ರಾಜ್ಯದೊಳರ್ಥಿಸಂಕುಳವು || ೮ ||

ದರವುರಂ ಕಂಡಾಕೆಗಳು ತ- |
ದ್ಧರಣಿಪಾಲನ ಗಾಡಿಯಂ ಸ್ಮರ- |
ಶರದೆ ನಿಷ್ಕ್ರಿಯರಾಗಿ ಲಜ್ಜೆಯನುಳಿದು ಮೆಯ್ಮರೆದು ||
ಶರದಮಲಚಂದ್ರಿಕೆಗೆಸೆವ ಮಾ- |
ಮರಕೆ ಮಲ್ಲಿಗೆಗಲರ್ಗಣೆಗೆ ತಂ- |
[೨]ಬೆರಲ[೨] ತೀಟಕೆ ಬೆಚ್ಚುವ[೩]ರ್ಕಮಳದಳವೀ[೩]ಜನಕೆ || ೯ ||

ಅಸಿತಕುವಲಯದಳವಿಲೋಚನೆ- |
ಯಸಮಶರಮದರದನಿ[೪]ಕುಂಭಸ[೪]- |
ದೃಶಪಯೋಧರೆ ಕಂಬುಕಂಧರೆ ಸಾಂದ್ರಚಂದ್ರಮುಖಿ ||
ಕುಸುಮಕೋಮಳೆಯರಸಿಯಾದಳು |
ವಸುಮತೀಪತಿ ದಶರಥಂಗೆ ವಿ- |
ಲಸಿತೆ [೫]ಗುಣರಾಜಿತೆ[೫]ಯೆನಿಸಿದಪರಾಜಿತಾದೇವಿ || ೧೦ ||

ವಟಫಲಾಧರೆ ಸರಸಕಾಂಚನ- |
ಘಟಘನಸ್ತನೆ ಕುಮುದಲೋಚನೆ |
ಚಟುಲಷಟ್ಪದಕುಟಿಲಕುಂತಳೆ ಲಲಿತತನುಮಧ್ಯೆ ||
ಸ್ಫುಟಕುಸುಮಶರಘನಕಲಹಲಂ |
ಪಟನೆನಿಪ ದಶರಥಮಹೀಶನ |
ನಿಟಿಲತಟಘಟಿತಾಂಘ್ರಿಕಮಲೆ ಸುಮಿತ್ರೆ ಸತಿಯವಗೆ || ೧೧ ||

---

೧ (ಕಖಗ) ಲೊ. ೨-೨ (ಗ) ಬೆಲರ. ೩-೩ (ಗ) ಕಮಳದಶಾಳ. ೪-೪ (ಗ) ಕುರಂ. ೫-೫ (ಕಖಗ) ಗುಣಾಜಿತೆ.

ನಗೆ ಮೊಗಂ ಶೀತಾಂಶುಬಿಂಬಂ |
ನಗೆ ನಯನವಸಿತೋತ್ಪಲಂಗಳ |
[೧]ನಗೆ ಕುಚದ್ವಯ [ ವ ] [೧]ಂಗಭವಮಾತಂಗ[೨]ಕುಂಭಗಳ[೨] ||
ನಗೆಯುಗುರು ಕೇತಕಿಯ ದಳಮಂ |
ನಗೆ ವಿಲಾಸಂ ರತಿಶಚಿಯರಂ |
ಮಿಗೆ ಚೆಲುವೆ ಸುಪ್ರಭೆ ನರೇಂದ್ರಂಗರಸಿಯೊಂಧಾಗೆ || ೧೨ ||

ಅವರು ಮೂವರು ವಲ್ಲಭೆಯರಭಿ- |
ಭವಿಸೆ ನರಸುರನಾಗಲೋಕದ |
ಯುವತಿಯರ ಲಾವಣ್ಯಪುಣ್ಯವಿಲಾಸದುನ್ನತಿಯಂ ||
ಭುವನಪತಿ ದಶರಥನೃಪಾಲಂ |
ವಿವಿಧಕುಸುಮಾಯುಧ [೩]ಸುಖಮನ[೩]ನು- |
ಭವಿಸುತವರೊಳು ರಾಜ್ಯಪದದೊಳು ಲೀಲೆಯಿಂದಿರಲು || ೧೩ ||

ಕತಿಪಯಾಪ್ತಪರೀತ[೪]ನಖಿಲ[೪]- |
ಕ್ಷಿತಿಪತೀಶಪ್ರತತಿನಮಿತಂ- |
ಸಿತಚಮರರುಹಪವನಪರಿವರ್ತಿತಕರ್ಣಪೂರಂ ||
ಶತಮುಖನವೊಲು ನೂತ್ನರತ್ನಂ |
ನುತಖಚಿತಸಿಂಹಾಸನದೊಳ- |
ಪ್ರತಿಮನೊಡ್ಡೋಲಗದೊಳಿರ್ಪುದುಮಾಸಮಯದಲ್ಲಿ || ೧೪ ||

ನಾರದಂ ನೀರದಪಥದಿನತಿ |
ಚಾರುತರಧವಳಾಂಗನಮಳಿನ- |
ವಾರಿರುಹವರಸೂತ್ರಲಸದುಪವೀತಪರಿಪೂತಂ ||
ಭೂರಮಣನಾಸ್ಥಾನಮಂ ಪುಗೆ |
ಸಾರತರಧವಳೋತ್ತರೀಯನು- |
ದಾರಗಂಭೀರಾಕೃತಿ ಪ್ರಬಳಾಜಿಲಂಪಟನು || ೧೫ ||

---

೧-೧ ( ಕಖ ) ಕುಚದ್ವಯಂಗಳನಂಗ; ( ಗ ) ಕುಚದ್ವಯನಂಗ. ೨-೨ ( ಕಖ ) ಕುಂಭಗಳು; ( ಗ ) ಕುಂಭವನು. ೩-೩ ( ಕಖ ) ಸುಖಗಳನು. ೪-೪ ( ಕಖ ) ನಾ.

ವಿತತನ[೧]ೇತ್ರಾಷಾಢರಾಜಿತ- |
ನತಿಧವಳಕೌಪೀನವಾಸಂ |
ಶತದಳಾಮಳತಂತುಕೃತಯಜ್ಞೋಪವೀತಧರಂ ||
[೨]ಧೃತಕಮಂಡಲನುಜ್ಜ್ವಳಾಂಗಾ- |
ನ್ವಿತನೆನಿಪ ನಾರದನ ಕಂಡಾ- |
[೩]ಕ್ಷಿತಿಪನಿದಿರೆ[೩]ದ್ದಾಗಳಿಚ್ಛಾಕಾರವಂ ಮಾಡಿ || ೧೬ ||

ಕನಕಪೀಠದೊಳಿರಿಸಿ ತತ್ಪದ- |
ವನರುಹಮನರ್ಚಿಸಿ ವಿನಯದಿಂ- |
ದನುನಯದಿನಿಂತೆಂದನಿಲ್ಲಿಗೆ ನಿಮ್ಮ ಬಂದಂದಂ ||
ಮನಕತೀವ ಕುತೂಹಳತೆಯಂ |
ಜನಿಯಿಸುತ್ತಿ[೪]ರ್ದಪುದು[೪] ನೀವಿದ- |
ನೆನಗೆ ತಿಳಿಪುವುದೆನಲು ನಾರದನಾಗಳಿಂತೆಂದಂ || ೧೭ ||

ಮಿಸುಪ ಜಂಬೂದ್ವೀಪದೊಳು ಶೋ- |
ಭಿಸುವ ಪೂರ್ವವಿದೇಹದೊಳು ಸಲೆ |
ಪೆಸರ್ವಡೆದ ವರಪುಂಡರೀಕಪುರಾಧಿಪತಿಯೆನಿಪ ||
ಎಸೆವ ಸೀಮಂಧರಜಿನರ ವಂ- |
ದಿಸಿ [೫]ಬರುತಲಿರ್ದ[೫]ಪೆಯೆನುತ್ತಿರೆ |
ದೆಸೆಯರೆಲ್ಲರ ಹರೆಯವೇಳ್ದಂ ಸನ್ನೆಯೋಲಗವ || ೧೮ ||

ಧರೆಯ ವಿವಿಧನೃಪಾಳಜಾಳಂ |
ಧರಣಿಪತಿ ದಶರಥನುಮಾತನ |
ವರಸಚಿವ[೬]ನೆನಿಸಿ[೬]ದ ಸಮುದ್ರಹೃದಯನುಮಱಿವಂತೆ ||
ಭರದೆ ಕಟ್ಟೇಕಾಂತದೊಳು ವಿ- |
ಸ್ತರದಿನಿಂತೆಂದಱಿಪಿದಂ ಬಂ- |
ಧುರದಶನರುಚಿ ಬೆಳಗೆ ಪರಿಷದ್ವಲಯಯುಮಂ ಕೂಡೆ || ೧೯ ||

೧ (ಕಖ) ವೇ. ೨ (ಕಖ) ದ್ರು. ೩-೩ (ಕಖ) ಕ್ಷಿತಿಪತಿಯಿದಿರೆದ್ದಾಗ; (ಗ) ಕ್ಷಿತಿಪನಿದಿರೆರ್ದಾಗ. ೪-೪ (ಕಖ) ತಿಪ್ಪುದು; (ಗ) ತಿರ್ದಪುದು. ೫-೫ (ಕಖಗ) ಬರುತಿರ್ದಪೆ ೬-೬ (ಕಖ) ನೆಸೆವ.

ಇಂದು ಲಂಕಾಪುರಕೆ ಪರಮಾ- |
ನಂದದಿಂದಂ ಶಾಂತಿಜಿನಪತಿ |
ವಂದನಾರ್ತ್ಥಂ ಪೋಗಿ ನೆಗಳ್ದ ವಿಭೀಷಣನ ಮುಂದೆ ||
ಬಂದು ಸಾಗರಬುದ್ಧಿ[೧]ಯೆಂಬ[೧]ವ- |
ನೊಂದು ಮಾತಂ ಪೇಳ್ದನದಕಾಂ |
ನೊಂದು ನಿಮಗದನಱಿಪ ಬಂದೆಂ ಕೇಳಿ ನೀವಿದನು || ೨೦ ||

ಇದು ಶಿಲಾಶಾಸನ ವಿಭೀಷಣ- |
ವಿದಿತಮಾಗಿರೆ ಕೇಳು ಜಾನಕಿ- |
ಯ [೨]ದೆಸೆಯಿಂದಾ[ದಾ]ಶ[೨]ರಥಿಯೊಳು ಕಾದಿ ದಶವದನಂ ||
ಕದನದಿಂದಂ ಸಾವನೆನೆ ಕೇ- |
ಳ್ದದಿತ ಕೋಪಾಟೋಪದಿಂ ಕಾ- |
ರ್ಯದ ವಿನಾಶಂ ಕಾರಣದ ಮಾರಣವೆಯೆನುತಿರ್ದಂ || ೨೧ ||

ದಶರಥನುಮಂ ಜನಕನುಮನಾಂ |
ವಿಶಸನಮನೆಯ್ದಿಸುವೆನೀಗಳೆ |
ಶಶವಿಷಾಣದ ತೆಱದೆ ಮಾಡುವೆನಿವನು ನುಡಿದುದನು ||
ದಶದಿಶಾವಳಯದೊಳು ಬಳಿಕಂ |
ದಶಮುಖನನಾರ್ಗೆಲುವರೆಂದೀ |
ದೃಶಕಟೋಕ್ತಿ[೩]ಗಳ [ ನ್ನು ] ನು[೩]ಡಿದುದನಱಿದಿಹುದು ನೀವು || ೨೨ ||

ಜನಕಪತಿಗಂ ಪೇಳ್ದೆನಾನದ- |
ನೆನುತ ನಾರದ ನೀರದಪಥಕೆ |
ಯನುನಯದೆ ತಾಂ ಪೋದನಿತ್ತಲು ದಶರಥನೃಪಾಲಂ ||
ದನುಜನೊರ್ವಂ ಬಂದು [೪]ಗಡ[೪] ನ- |
ಮ್ಮನೆ [೫]ಗಡಂ[೫] ಕೊಲುವಂ ಗಡವನಾ- |
ವನೊ ವಿಭೀಷಣನೆಂಬುವಂ ಗಡ ನೋಡ್ಪಿನಿದ ನಾನು || ೨೩ ||

---

೧-೧ ( ಗ ) ಯೆಂಬುದ. ೨-೨ ( ಕಖ ) ದೆಸೆಯಿಂದಾದಶರಥಿ. ( ಗ ) ದೆಶೆಯಿಂದಾ ಶರಥಿಯೊಳು. ೩-೩ ( ಕಖ ) ಗಳನುಡಿ; ( ಗ ) ಗಳಿಂ ನುಡಿ. ೪-೪ ( ಗ ) ಗಣ. ೫-೫ ( ಗ ) ಗಣಂಡಂ.

ಎನೆ ಸಮುದ್ರಹೃದಯಸಚಿವನತಿ |
ವಿನಯದಿಂದಿಂತೆಂದ ನಿಮಗೀ |
ವನಧಿಪರಿವೃತಮಾದ ಧರೆಯೊಳು ನಿಮಗಿದಿರದಾವಂ ||
ಇನಿತು ಕಾರ್ಯ‌ಕ್ಕಾನೆ ಸಾಲ್ವೆಂ |
ದಿನದಿನದಿ ಮತ್ತೊಂದು ವಾರ್ತೆಯ- |
ನನುನಯದಿ ಕೇಳ್ದೆಂ ನೃಪಾಲಕ ಚಿತ್ತವಿಪುದಿದನು || ೨೪ ||

ನೆಗಟ್ದ ಮಂಗಳಪುರದಧೀಶ್ವರ- |
ನಗಣಿತಾಮಳಕೀರ್ತಿನಿಳಯಂ |
ನಗರವಿಭವೋದ್ಭಾಸಿ ಶುಭಮತಿಯೆಂಬನಾನೃಪನ ||
ಮಗಳು ಕೈಕೆಯಿಯೆಂಬುವಳು ಮೂ- |
ಜಗವನೆಱಗಿಸಿಕೊಂಬಳೆಂಬುದು |
ಮಿಗೆ[ ನಿಮಗೆ ]ಜನಜನಿತೆಯಾಸ್ತ್ರೀರತ್ನವೇ ಯೋಗ್ಯಂ || ೨೫ ||

ವಿವಿಧರಾಜಕುಮಾರರೆಲ್ಲಾ |
ಯುವತಿರತ್ನಂ ತಮಗೆ ತರಲೆಂ- |
ದವಿರಳಂ ಪೋಗುತ್ತುಮಿರ್ದಪರಾಸ್ವಯಂವರಕೆ ||
ಭುವನವಲ್ಲಭ ನೀವು ಪೋಗಲು |
ಕುವಳಯಶ್ರೀ ಚಂದ್ರಮನ ಕಂ- |
ಡವೊಲು ನಿಮಗೆಯೆ ಸೂಡುಗುಂ ಲೀಲೆಯೊಳು ಮಾಲೆಯನು || ೨೬ ||

ಅಂತು ಬುದ್ಧಿಯೊಳಾತನಾನೃಪ- |
ಕಾಂತನಂ ಪರಿಜನವಱಿಯದಿ- |
ಪ್ಪಂತು ನಯದಿಂ ಪೇೞ್ದು ತತ್ಪುರದಿಂದ ಪೊಱಮಡಿಸಿ ||
ಪಿಂತೆ ಚಿತ್ರದ ದಶರಥನನ- |
ತ್ಯಂತ ಭೇದಿ [ ಪ ] ಮಾರ್ಗಮರಿದೆಂ. |
ಬಂತೆ ಪರಿಜನವೆಲ್ಲವೆರಸೋಲಗಿಸುತಿರುತಿರ್ದಂ || ೨೭ ||

---

೧-೧ ( ಕಖಗ ) ಕರಂ. ೨ ( ಕಖಗ ) ನಿಮಗೆ. ೩ ( ಕಖಗ ) ಸ.

ಜನಕನುಂ [ ೧ನಾರದನಿನಱಿದಿದ- ]೧ |
ನನುನಯದೆ ತನ್ನಾಪ್ತಮಂತ್ರಿಯೊ- |
ಡನೆ ವಿಚಾರಿಸಿ ನೆಗಟ್ದ ಮಿಥಿಳಾಪುರವ ಪೊರಮಟ್ಟು ||
ವಿನುತ ದಶರಥಭೂಪನಿರ್ದೆಡೆ- |
ಯನೆ ದಿಟಂ [ ೨ಗಡ ]೨ ಸಾರ್ವೆನೆಂಬೀ- |
ಮನದೊಳಾತಂ ಬಂದು ಕಂಡಂ ವೀರರಘುಪತಿಯುಂ || ೨೮ ||

ಸಿಡಿಲಗಡಣಮಿದೆಂಬವೊಲ್ಕ- |
ಣ್ಕಿಡಿಯುಮಂ ಕೆಂಡಮುಮನುಗುಳಲು |
ಕಡುಗಿ ಗರ್ಜಿಸಿ ಜವನ ತೆಱದಿಂದೆಯ್ದೆ ಕಡುಮುಳಿದು ||
೩ತಡೆಯೆ [ ತಾ ] ನಟ್ಟಿದ೩ ಭಟತ್ರಾಣಂ |
ತಡೆಯದಾಗಸದಿಂದಲೆಯ್ತಂ- |
ದಡಸಿ ಪೊಡೆದಂ ಬಂದಯೊಧ್ಯೆಯ ಚಿತ್ರದಶರಥನಂ || ೨೯ ||

ಹೊಡೆದ ಭಾರಕೆ ಸಿಡಿಯೆ ತಲೆ ತಲೆ- |
ಯೆಡೆಯೊಳಾಗಳೆ ಸಪ್ತಧಾತುವಿ- |
ನೊಡನೆ..................ತೋಱುವ ರಕ್ತಮುಚ್ಚಳಿಸೆ ||
ಪಿಡಿದುಕೊಂಡದನುಯ್ದು ಚಿತ್ರದ |
............ಜನಕದಶರಥತಲೆವೆರಸು |
[ ೪ಕಡಲೊಳೀ ]೪ ಡಾಡಿದನದೇನುಗ್ರನೊ ವಿಭೀಷಣನು || ೩೦ ||

ಜನಕ [ ೫ನಂ ] ದಶರಥನುಮಂ ಕೊಲ- |
ಲನುಗೆಯ್ದು ಬರಲಾ ವಿಭೀಷಣ- |
ನಿನಿಸುಮಱಿಯದೆ ಲೆಪ್ಪದೆರಡುಂ ತಲೆಯ ಕೊಂಡೊಯ್ದು ||
ವನಧಿಯೊಳು ಸಲೆ ಬಿಸುಟನೆಂದಡೆ |
ಮುನಿದು ಸಾಯದರಂ ಕೊಲುವನಾ- |
ವನೊ ವಿಧಾತ್ರಂ ಭಾಳದೊಳ್ಬರೆದುದು ಘುಣಾಕ್ಷರಮೆ || ೩೧ ||

---

೧-೧ (ಕಖ) ನಾರದನಿಂದನಱಿದಿದ; (ಗ) ನಾರದ ನೀನಱಿದಿದ. ೨-೨ (ಕಖಗ) ಪ್ರತಿಗಳಲ್ಲಿಲ್ಲ. ೩-೩ (ಕಖ) ತಡೆಯುನಾನಟ್ಟಿದ; (ಗ) ತಡೆಯೆನಾನಟ್ಟಿದ. ೪-೪ (ಕಖಗ) ಕಡಲೆಡೆಯೊಳೀ. ೫ (ಕಖಗ) ನುಂ.

ಭರದಯೋಧ್ಯಾಪುರ [ ದೆ ] ಮಿಥಿಳಾ- |
ಪುರದೊಳಿರ್ದ ಸಮಸ್ತ ಜನಚಯ- |
ಮಿರದೆ ಕಳವಳಿಸುತ್ತೆ........ಬಾಯ್ಬಿಟ್ಟಳುತ್ತಿರಲು ||
................................................ || ೩೨ ||

.............................................................. ||
ನಯನಿಪುಣನವರ್ಗಂತದಂ ನಿ- |
ರ್ಣಯಮೆನಲು ಮೊದಲಿಂದವರಿ ಪ [ಲಿ] |
ನಿಯತರವರದನಱಿದು ಸಂತಸದಿಂದಮಿರ್ಪಿನೆಗಂ || ೩೩ ||

ಅತ್ತ ದಶರಥನುಂ ಜನಕನುಮು- |
ದಾತ್ತರಖಿಲವಿನೋದಮಂ ನೋ- |
ಡುತ್ತ ಮಂಗಳನಾಮಧೇಯನಗರಮನೆಯ್ದುಂದು ||
ಚಿತ್ರಜನವೈಯಾಳಿಯೆಂಬ ವೊ- |
ಲುತ್ತರೋತ್ತರ ವಿವಿಧಮಣಿಮಯ |
ಭಿತ್ತಿಯಿಂದೊಪ್ಪುವ ಸ್ವಯಂವರ-ಮಂಟಪದ ಕೆಲಕೆ || ೩೪ ||

ಕಾಂಚನದೆ ಮಾಡಿತ್ತೊ ಮಿಂಚಿನ |
ಗೊಂಚಲಿಂದೆಱಗಿತ್ತೊ ಸಂಚಿತ |
ಪಂಚರತ್ನಮೊ ಮೇಣು ಸುರಧನುವಿಂದೆ ಬಳಸಿತ್ತೊ ||
ಚಂಚಲಧ್ವಜರಾಜಿ-ನವ [ಚಿ]- |
[ ತ್ರಾಂ ] ಚಲಂ ನಿಃಶೇಷಭೂಭುಜ- |
ಸಂಚಯಾನ್ವಿತಮಾಗಿ ತೋರ್ಪ ಸ್ವಯಂವರಮಿದೆನುತ || ೩೫ ||

ಜಗದ ಚೆಲುವೆಲ್ಲಂ ನೆರೆದು ಗಂ- |
ಡುಗೂಸುರೂಪಂ ತಳೆದುದೊ ಮಿಗೆ |
ಸೊಗಯಿಸುವ ಗಾಡಿಯನನಂಗಂ ಮೇಣು ತಾಳ್ದಿದನೊ ||

---

೧-೧ ( ಕಖಗ ) ಪುರದೊಳಂ ಮಿಥಿಳೆಯೊಳಮಿರ್ದ್ದ. ೨ ( ಕಖಗ ) ಲು. ೩-೩ ( ಕಖಗ ) ಚಿಂ। ತಾಚಲಂ. ೪-೪ ( ಕಖ ) ಡುಗುಸುರುಪಂ.

ಮೃಗಧರಂ ಧರೆಗವತರಿಸಿದನೊ |
ಬಗೆ[೧]ಗೊಳಿಸು [ ವವನಿವನಾವನೆಂ[೧] ]- |
ದಗಿದು ನೃಪತತಿ ನೋಡಲಾಮಂಟಪವ ಪುಗುತಂದಂ || ೩೬ ||

ಅಂತು ಜನಕಂ ಬೆರಸು ವಸುಧಾ- |
ಕಾಂತನಾಗಳು ರೂಪುಗೊಂಡ ವ- |
ಸಂತನಂತಿರೆ ಪೊಕ್ಕು ತನ್ಮಂಟಪದೊಳೊಂದೆಡೆಯ ||
ಸಂತತಂ ಸೊಗಯಿಸುವ ಮಂ [ ಚೋ ][೨]
ಪಾಂತದೊಳು ನಿಂದೀಕ್ಷಿಸುತ್ತಿರೆ |
ಚಿಂತೆಯಂ ಬಿಟ್ಟರು ನೃಪಾಲಕರಾಸ್ವಯಂವರದ || ೩೭ ||

ಆಸಮಯದೊಳು ಸಕಲಶೋಭಾ- |
ವಾಸಮೆನಿಸಿದ ನೂತ್ನರತ್ನದ |
ಲೇಸೆನಿಪ ದಂಡಿಗೆಯ ಮೇಲತಿ ಸುಲಲಿತಾಕೃತಿಯ ||
ಆಸಭೆಯನಿಳಿಕೆಯ್ವ ಚೆಲುವ ವಿ- |
ಲಾಸಿನಿಯರೊಡನಂಗಜಂ ಸಲೆ |
ಸೂಸೆ ಜನಕೆ ನಿಜಾಸ್ತ್ರ ಬಂದಳು ಕೈಕೆ ಮುದದಿಂದ || ೩೮ ||

ರತಿಯೊ ಮೇಣಿಂತೀಕೆ ಶಕ್ರನ |
ಸತಿಯೊ ಮೇಣ್ಪದ್ಮಿನಿಯೊ ಮೇಣ್ಬಾ- |
ರತಿಯೊ ಮೇಣ್ಮೂಜಗದ ನಯನಾನಂದಚಂದ್ರಿಕೆಯೊ ||
ರತಿಪತಿಯೆ ಕರುವಿಟ್ಟ ಹಿ[೩]ಮದೀ- |
ಧಿತಿಯ [೪]ಕೆಳೆಯಿಂ[೪] ಮಾಡಿದನೊಯೆಂ- |
ದತಿಕುತೂಹಳಿಸುತ್ತ ಬಂದಳು ಕೈಕೆಯಾಸಭೆಗೆ || ೩೯ ||

ಪಿಡಿದು ಮಂಗಳಮಾಲೆಯಂ ತ- |
ನ್ನೊಡನೊಡನೆ ಕಂಚುಕಿ ಸಲೀಲೆಯಿಂ- |
ನಡಿಗಡಿಗೆ ನೆಲನುಗ್ಘಡಿಸುತುಂ ಕುಸುಮಾಸ್ತ್ರನುಂ ಬರಲು |

---

೧–೧ ( ಕ ಖ ) ಗೊಳಿಸುವಿವನಾರೆಂ; ( ಗ ) ಗೊಳಿಸುವಿವಿವನಾರೆಂ. ೨ ( ಕಖಗ ) ಭೋ. ೩ ( ಕ ಖ ) ಹೇ. ೪–೪ ( ಕ ಖ ಗ ) ಕಳೆಗಳಿಂ.

ಪೊಡವಿಯುಂ [೧]ಪಲ್ಲವಿಸುತ[೧]ುಂ ತ- |
ನ್ನ[೨]ಡಿದಳಿರ್ಗಳ[೨]ಿಂದೊಟ್ಟ ತೊಡಿಗೆಯಿಂ- |
ನಡಿಗಡಿಗೆ ತೋಱುತ್ತೆ ಪುಗಲಾಕ್ಕೈಕೆ ಮಂಟಪವಾ ||೪೦||

ಅಸಿತಕ್ಕೈರವದಳವನಿಳಿಕೆ- |
ಯ್ವಸಮಶರನಿಶಿತಾಸ್ತ್ರಮಂ ಗೆಲು- |
ವೆಸಳ[[೩]ದಿಂ] ರಂಜಿಸುವ ನಯನದೆ ಲೋಳಲೋಚನದಿಂ ||
ದೆಸೆದೆಸೆಗೆ ಕುಸುಮಾಸ್ತ್ರನೆಲ್ಲರ- |
[೪]ನೆಸೆಯೆ ಲೀಲೆಯಿ[೪]ನೀಕ್ಷಿಸಿದಳಾ |
ವಸುಧೆಪಾಲರನೆಯ್ದೆ ಕಂಚುಕಿ ತೋಱಿ ನೆಱಿ ನೋಡಿ || ೪೧ ||

ಚೇರ-ಚೋಳ-ಕಳಿಂಗ-ಪಲ್ಲವ- |
ಪಾರಿಯಾತ್ರಾ-ಮಗಧ-ತೆಲುಗ-ಹ- |
ಮ್ಮೀರ-ಗುರ್ಜರ-ಗೌರ-ಮಾಳವ-ಪಾಂಡ್ಯ ಮೊದಲಾದ ||
ಧಾರಿಣೀವರರನ್ವಯಮುಮನು- |
ದಾರಮುಮನವರವರ ಪೆಸರುಮ- |
ನಾರಮಣಿಗಾಪ್ರೌಢಕಂಚುಕಿ ತೋಱಿ ನೆಱಿ ನೋಡಿ || ೪೨ ||

ಆರುಮಂ ಮೆಚ್ಚದೆ ಬಳಲ್ದಾ- |
ನಾರಿ ಬರುತಂ ಬಲದ ಕೆಲದೊಳು- |
ದಾರಗಂಭೀರಾಕೃತಿಯ ರಘುವೀರನಿರೆ ಕಂಡು ||
ಕೈರವಾಯತ ಲೋಲಲೋಚನೆ |
ಧೀರತನಮಂ ಬಿಟ್ಟು ನಯವಿದೆ |
ಚಾರುಮಂಗಳಮಾಲೆಯಂ ಲೀಲೆಯೊಳು ಸೂಡಿದಳು || ೪೩ ||

ಆಗ [[೫]ಳೆ] ತ್ತಿದುವಾತಪತ್ರಂ |
ಬೇಗದಿಂದಿಕ್ಕಿದುವು ಚಾಮರ |
ರಾಗದಿಂದೆತ್ತಿದರು ರನ್ನದ ಮಂಗಳಾರತಿಯಂ ||

---

೧-೧ (ಕಖ) ಪಲ್ಲಡಿಸುತಂ. ೨-೨ (ಕಖ) ದಳಿಗ್ಗಣಗಳಿಂ. ೩ (ಕಖಗ) ಪ್ರತಿಗಳಲ್ಲಿಲ್ಲ.
೪-೪ (ಕಖ) ನೆಸೆದು ಲೀಲೆ: (ಗ) ನೆಸೆ ಸಲಿಲ. ೫ (ಕಖಗ) ನೆ

ಆಗಸಮನೆಯ್ದಿತ್ತು ತಟಿ[೧]ಯ ಕು- |
ಲಾಗತಾಖಿಳಜನದ ಹರಕೆ ಸ- |
ಮಾಗಮಕ್ಕಿದು ಗಹನಮೇ ಕೈಕೆಯೊಳು ರಘುಪತಿಗೆ || ೪೪ ||

ತರುಣಿಯಱಿಯದೆಯೊರ್ವ ದೇಶಾಂ- |
ತರಿಗೆ ಮಾಲೆಯನಿಕ್ಕಿದಳು ನಾ- |
ವಿರೆಯೆನುತ್ತಂ ಸಕಲಧಾರಿಣಿಪಾಲಕರು ಮುಳಿದು ||
ಇರದೆ ನಾವಾತನನು ರಣದೊಳು |
ಭರದೆ [೨]ಗೆಲಿದೀ[೨] ಕನ್ನೆಯಂ ಚ- |
ಚ್ಚರದೆ ಕೊಂಬೆವೆನುತ್ತೆ ಕೋಪಿಸಿ ತೆರಳೆ ತಮತಮಗೆ || ೪೫ ||

ಭರದೆ ಕೈಕೆಯ ತಂದೆ ಶುಭಮತಿ |
ಯಿರದೆ ರಥಮಂ ಪಣ್ಣಿ ಕೊಂಡು |
ತ್ವರಿತದಿಂದೆಯ್ತಂದು ರಘುಪತಿಗೆಂದನಿಂತೆಂದು ||
ಪುರವ ಪುಗ್ಗಿನೀವಿರ್ವರುಂ ನಾ- |
ನಗಲಸರಳಿಂಗಳುಕದೆಲ್ಲಾ |
ಧರಣಿಪಾಲರನೆನ್ನ ನಿಷ್ಠುರಶರದಿನಳುಕಿ[೩]ಸುವೆಂ[೩] || ೪೬ ||

ಎನೆ ನೆಗಟ್ದ ರಘುನಂದನಂ ಮಾ- |
ವನ ನುಡಿಗೆ [೪]ನಸುನಗುತ[೪]ಮಿಂತಿದ- |
ಕೆನಿತು ಸಂಭ್ರಮಮೇವುದಿಲ್ಲಿಯೆ ನೀವು ನೋಡುತಿರೆ ||
ಕನಲ್ದ ಕೇಸರಿ ಗಂಧಸಿಂಧುರ- |
ಘನಘಟೆಯನೆಬ್ಬಟ್ಟುವಂದದಿ- |
ನಿನಿಬರುಮನಂತಕನ ಬಾಣಸಕಿಲ್ಲಿ ಸಲಿಸುವೆನು || ೪೭ ||

ಏಱಿ ರಥಮಂ ಕೈಕೆ ತನ್ನೊಡ- |
ನೇಱುವಂತಿರೆ ವೀರಲಕ್ಷ್ಮಿಯೆ |
ಕೀಱಿ ಸಾರಥಿ ಹಯವ ಚೋದಿಸೆ ಬೆಳುಗೊಡೆಯು ತೆಱದಿಂ ||
ತೋರ ಹಳವಿಗೆ ಮಿಳಿರ್ದು ಮೀಳಿಸಿ |
ಮೀಱುವಹಿತರ ಹೃದಯ ಹೌವನೆ |
ಹಾಱಿ ಹರಿದುದು ರಣದೊಳಾರಥಕೋಟಿರಥವಾಗೆ || ೪೮ ||

---

೧ (ಕಖ) ಡೆ. ೨-೨ (ಕಖ) ಗೆಲಿದೇ. ೩-೩ (ಕಖ) ನೇಸುವೆಂ. ೪-೪ (ಕಖ) ನಗುತಿದ.

ಅಸುಹೃದವನೀಪಾಲಕರ್ಗ- |
ರ್ಜಿಸಿಯಸುಂಗೊಳೆ ಮುಸುಱೆ ಮುತ್ತಲ- |
ದಸದಳಂ ನಾನೋರ್ವನೆಂದೇ ಸೆಡೆದು ನೋಡಿದನೆ ||
ದೆಸೆದೆಸೆಗೆ ರಿಪುಬಲವನೆಲ್ಲವ |
ಕುಸುರಿದಱಿಯಲು ಮಸಗಿ ಮಾಣದೆ |
ದಶರಥಂ ಕಾಳಾಗ್ನಿರುದ್ರನ ರೌದ್ರಮಂ ಕೊಂಡಂ || ೪೯ ||

ಪೊಡವಿಯೊಳಗಿರ್ದುರಗರಾಜನ |
ಹೆಡೆಹೆಡೆಯನಪ್ಪಳಿಸಿ ದಿಗಿಭವ- |
ನೊಡನೆ ಪೆಳಱಿಸೆ ತಪನರಥದ ತುರಂಗಸಂಚಯವ ||
ಗಡಗಡನೆ ನಡುಗಿಸಿತು ಧಾತ್ರಿಯೊ- |
ಳೆಡೆಗುಡದೆ ತೀವಿತ್ತುದೆತ್ತಂ |
ಬಿಡದೆ ದಶರಥನೃಪನ ಧನುರ್ಗುಣಘೋರಟಂಕಾರ || ೫೦ ||

ಪ್ರಳಯ ಜಳದಂಗಳ ಕಱಿವ ಮೊ- |
ಕ್ಕಳವೆನಿಪ ವರ್ಷದಂದ [ದ] ವೆ- |
ರ್ಗಳವಿಗಳಿದಂಬಿನ ಮಳೆಯನಾಭೂಭುಜಂ ಕಱಿಯೆ ||
ಕಳೆಯೆ ದಶರಥನೃಪನ ಸಾರಥಿ- |
ಮಿಳಿರೆ ಪಳವಿಗೆ ಕೈಕೆ ಜ್ಯೋದಿಸಿ- |
ದಳಾಗಳೆ ರಥವನು ಮನೋರಥದೊಡನೆ ನಲವಿಂದ || ೫೧ ||

ಒಂದೆ ರಥ ವೀರಕ್ಷಿತೀಶರ |
ವೃಂದವೆಲ್ಲವ ಮುತ್ತುತಿರ್ಪೊಂ- |
ದಂದದಿಂದಂ ನೆರೆದುದೀಗಳು ಕೋಟಿರಥವಾಗಿ || ೯೮
ಬಂದು ಕೊಲುತಿಯ್ಯುಂದನೆಂಬೀ |
ಸಂದೆಗವನವರ್ಗಾಗಿಸುತ್ತಾ- |
ನಂದದಿಂದಂ ಕೈಕೆ ಚೋದಿಸೆ ಪರಿದುದಾರಥವು || ೫೨ ||

೧-೧ (ಕಖ) ಅಸುಹೃದವನೀಪಾಲಕರ್ಜಿಸಿ; (ಗ) ಅಸುಹೃದಯನ ನೃಪಾಲಕರ್ ಘ। ರ್ಜಿಸಿ. ೨-೨ (ಕಖ) ವರ್ಷದಂದದಿರವ; (ಗ) ವರ್ಷದಂದಿದದಿರವ. ೩ (ಕಖ) ವೆ.

ತೋಡು [[೧]ವಾ] [೨]ಬಿಡುವಂದಲೀಕ್ಷಿಸಿ[೨] |
ನೋಡಿಯಱಿಯಲು ಬಾರದಂಬಿನ |
ಕೂಡೆ ಬಿಳ್ದಿಭ ತುರಗರಥ[೩]ಕಾಲಾಳ್ಗಳಿಂದಱಿಯೆ ||[೩]
ನೋಡು ನೋಡೆಂದನಿಮಿಷರ್ಕಳು |
ಕೂಡೆಯೊರ್ವರಿಗೊರ್ವ ಮಱೆಗೊಂ- |
ಡಾಡುತಿರೆ ರಿಪುಬಲವನೆಚ್ಚಂ ಮುಳಿದು ದಶರಥನು | ೫೩ ||

ಅಂತು ಮುಳಿದೆಯ್ತಂದು ಕೊಲುವ ಕೃ- |
ತಾಂತನಂತಿರೆ ರಿಪುಬಲವನ- |
ತ್ಯಂತಕೋಪದಿನಲೆಯುತಂ ಬೆಂಬತ್ತಿ ಬರೆ ರಘುಜಂ ||
ಮುಂತೆ ಹೇಮಪ್ರಭನೃಪಂ ಮುಗು- |
ಟ್ವಂತೆ ಕೇಸರಿ ಬವರಮಂ ಮುಗು- |
ಟ್ದಂ ತಡೆಯದಾತನುಮನೆಯ್ತಂದೆಚ್ಚನಿಂತೆಂದು || ೫೪ ||

ಇದು ಸ್ವಯಂಬರಸಭೆಗೆ ಬಂದುದ- |
ಕಿದು [೪][ಸಲೆ][೪] ಕೈಕೆಯ ನೋಡಿ ತಣಿಯ- |
ದುದಕೆ ಬಳಿಕಂ ಕಲುಷದಿಂ ನೀನೆರ್ದು ಬಂದುದಕೆ ||
[೫]ಇದುವೆ[೫] ನೀಂ [೬]ಮೋಹರಿಸಿ[೬] ನಿಂದುದ- |
ಕಿದು ಬಳಿಕೊಂದುತ್ತರಮಗುಟ್ದುದ- |
ಕಿದು ನಿನಗೆ ಕೊಳ್ಳೆಂದು ಮೂದಲಿಸುತೆ ರಘುಜನೆಚ್ಚಂ || ೫೫ ||

ಭರದೆ ಹೇಮಪ್ರಭನುಮಂ ಸಂ- |
ಗರದೊಳಾಗಳು ದಶರಥಂ ಗೆಲೆ |
ಸುರಿದರಮರರು ಪುಷ್ಪವೃಷ್ಟಿಯನಾರ್ದು [೭]ಜಯಮೆನುತ ||[೭]
ಇರದೆ [೮]ಪೊಣ್ಮೆ[೮] [ತು ವಿಜ] ಯಘೋಷಂ |
ಧರಣಿಪಾಲಕರಂಜಿ ಕಂಡ- |
ರ್ಕರುಣದಿಂದವರ್ಗೆ ಭಯಮಂ ಕೊಟ್ಟೆಯ್ದೆ ಕಳುಪಿದನು || ೫೬ ||

---

೧ (ಕಖಗ) ಮಂ. ೨-೨ (ಕಖ) ಬಿಡುವುಮಂ ದಲೀಕ್ಷಿಸಿ; (ಗ) ಬಿಡುಸಂ ಲಕ್ಷಿಸಿ. ೩-೩ (ಕಖ) ಕಾಲಾಳಪಿಂಡಿಂದಱಿಯಲಕ್ಕು; (ಗ) ಕಾಲಾಳ್ಗಳಿಂದಿಂದಱಿಯಲಕ್ಕು. ೪-೪ (ಕಖಗ) ನಲಿದು. ೫-೫ (ಗ) ಎಂದು. ೬-೬ (ಗ) ಮೋಹಿಸಿ. ೭-೭ (ಕಖಗ) ಜಯಜಯೆನುತ. ೮-೮ (ಕಖಗ) ಪೊಣ್ಮಿತ್ತಭಯ.

ಈತನನರಣ್ಯಾತ್ಮಜಂ ಜಗ- |
ತೀತಲಪ್ರಖ್ಯಾತದಶರಥ- |
ನೀತಮಿಥಿಳಾವಲ್ಲಭಂ ಜನಕಾಧಿಪತಿಯೆಂದು ||
ಪ್ರೀತಿಯಿಂದಱಿದೊಸೆದು ಶುಭಮತಿ |
ಜಾತಕೌತುಕನಪ್ಪಿದಂ ಸಂ- |
ಜಾತಪುಳಕಂ ಪರಿಸಿದಂ ಬಳಿಕೆಱಗೆ ತನಗೆ ವಧು || ೫೭ ||

ಇರದಳಂಕೃತಮಾದ ಮಂಗಳ- |
ಪುರದ ಶೋಭೆಯನೀಕ್ಷಿಸುತ್ತಂ |
ಮೆರೆಯುತ್ತೈರಾವತವ ಶಚಿವೆರಸೇಱಿ ಬಪ್ಪಂತೆ ||
ತರುಣಿ ಕೈಕೆಯ ಮುಂದೆ ಮದಸಿಂ- |
ಧುರವರಸ್ಕಂಧದೊಳೆ ಬಂದಂ |
ಬರೆ ಜನಕನುಂ ಶುಭಮತಿಯುಮಿಂಕ್ಕೆಲದ ಗಜ[ವೇರಿ] || ೫೮ ||

ಬಂದು ಮಂಗಳಪುರವನಾನೃಪ- |
ನಂದನರ್ಪುಗೆ ಶಂಖಕಹಳಾ- |
ದುಂದುಭಿಧ್ವನಿಯಾ[ರ್ವ] ತೂರ್ಯಂ ಮಂಗಳಸ್ತೋತ್ರಂ ||
ನಂದ ವಿಜಯಸ್ವಾದಿ ನಾನಾ- |
ವಂದಿವೃಂದಾಶೀರ್ನಿನಾದಂ |
ಸೌಂದರೀಜನವೆತ್ತುವಾರತಿಯೆಸೆಯೆಯಸದಳವೆ || ೫೯ ||

ಅರಮನೆಯುಮಂ ಪೊಕ್ಕು ಸುಖದಿಂ- |
ದಿರೆ ಜನಕನುಂ ಶುಭಮತಿಯುಮಾ- |
ದರದೆ ದಶರಥನೃಪತಿಗೊಲವಿಂ ಮಾಡಿ ಮದುವೆಯನು ||
ನೆರೆವ ದೀನಾನಾಥಕೋಟಿಗೆ |
ಸರಸಶಿಷ್ಟವಿಶಿಷ್ಟವಿತತಿಗೆ |
ಸುರಭಿತರುಪರುಷಚಿಂತಾಮಣಿಯನಿತ್ತರು ಮುದದಿಂ || ೬೦ ||

೧-೧ (ಕಖಗ) ಮೆರೆವನ್ನೈ. ೨-೨ (ಕಖಗ) ಗಜದೊಳು ರಘುಜಂ. ೩-೩ (ಕಖ) ಧ್ವನಿಯಾಯ್ಯರ್; (ಗ) ಧ್ವನಿಯ್ಯಾರ್. ೪-೪ (ಕಖ) ಯೆರೆವ. ೫-೫ (ಕಖ) ಶ್ರೇಷ್ಠ. ೬-೬ (ಕಖಗ) ನಿತ್ತರುಮುತ್ತಮರು.

ಒಲಿದು ದಶರಥನುಂ ಜನಕನುಂ |
ಕೆಲವು ದಿನವಾಪುರದೊಳಿರ್ದತಿ- |
ಬಳಿರಿರದೆ ನಿಜಪುರಕೆ ಪೋಗಲು ಶುಭಮತಿಗೆ ಪೇೞೆ ||
ಲಲಿತವಾಹನವಸ್ತುಚಯಮುಂ |
ಹಲವು ಪರಿಯವ ತರಿಸಿ ಕೊಟ್ಟಂ |
ದಲಘು ವಿಭವದೆ ಕಳುಹಿದಂ ಜಾಮಾತೃ[೧] [ಸುತೆಯರುಮಂ][೧] || ೬೧ ||

ಜನಕರಾಜಂ ಮಿಥಿಳೆಯಂ ರಘು- |
ದಿನಕರಂ ಸಾಕೇತಪುರಮಂ |
ಘನವಿಭವದಿಂ ಪೊಕ್ಕಿದಿರ್ವರೆ ತಮ್ಮ ಮಂತ್ರಿಗ[ಳೆ][೨] ||
ಅನುನಯದೆ ಸುಖಮಿರ್ದರಿತ್ತಂ |
ಜನಪದಶರಥನೊಂದು ದಿವಸಂ |
ವಿನಯ[೩]ನತ[೩] ಕತಿಪಯಾಪ್ತ[೪]ಪರಿಜನ[೪]ಪರಿವೃತನಾಗಿ || ೬೨ ||

ಕೈಕೆವೆರಸೋಲಗದೊಳಾವಸು- |
ಧೈಕಮಂಡನನಿರ್ದು ಯುದ್ಧಕ- |
ಥಾಕಥನಗೋಷ್ಠಿಯೊಳು ನೆನೆದೀನೃಪತಿಯಿಂತೆಂದು ||
ಈಕೆ [೫]ಚೋದಿಸೆ [೫]ರಥಮನಹಿತಪ- |
ತಾಕಿನಿಯನಾಂ ಗೆಲಿದು ಮೆಚ್ಚಿತ- |
[೬]ನೀಕೆಗೀಯದೊಡೆನ್ನ[೬] ಮೆಚ್ಚೀಂ [೭]ಬಿಚ್ಚಿಯಹುದಲ್ತೆ[೭] || ೬೩ ||

ಮುದದಿನೀಗಳೆ ಬೇಡು ಮೆಚ್ಚಿತ |
[೮].... .... .... .... ....[೮] ಭಯದಿನೆನ- |
[[೯]ಗದಿರಬೇಡೆಂದೆನೆ[೯]] ನರೇಂದ್ರಂ ನುಡಿಯೆ ನಯದಿಂದ ||
ಸುದತಿಯೆಂದಳು ಬೇಜಿನಗೆ ತೀ- |
ರದುದುವಾವುದುಮಿಲ್ಲ ಭಂಡಾ- |
ರದೊಳಿರಲಿ ಮೆಚ್ಚೆಂದು ಕೊಟ್ಟಳು ಕೈಕೆ ಬಯಕೆಯನು || ೬೪ ||

---

೧-೧ (ಕಖಕ) ಸುತರಿರ್ವ್ವರುಂ ೨ (ಕಖಗ) ಳ. ೩-೩ (ಗ) ವಿನಮಿನ. ೪-೪ (ಗ) ಜನ. ೫-೫ (ಗ) ಜೋಡಿಸೆ. ೬-೬ (ಕಖ) ನೀಕೆಯಬ್ರಾಯದೊಡೆನ್ನ. ೭-೭ (ಗ) ಬಚ್ಚಿಯಾಗದೆ ಪೇಳಿಂ. ೮-೮ (ಗ) ನರಿದುದೆಂದೆನ್ನ. ೯-೯ (ಕಖಗ) ಗದಿರದಿರೆಂದು.

ಅಂತು ದಶರಥನೃಪತಿ ನಾಲ್ವ- |
ರ್ಕಾಂತೆಯರ್ತನಗೀಯೆ ಮುದಮಂ |
ಸಂತಸದೆ ಸಾಮ್ರಾಜ್ಯಲೀಲೆಯನನುಭವಿಸುತಿರಲು ||
ಕಾಂತನೀಯಲು ಹಿರಿಯರಸಿತನ- |
ಮಂ ತಳೆದು ಗುಣಮಣಿವಿರಾಜಿತೆ |
ಕಂತುಪೂಜಿತೆಯೆನೆ ನೆಗಟ್ಟಿಳಪರಾಜಿತಾದೇವಿ || ೬೫ ||

ಎಸೆಯೆ ಕರದೊಳು ಮಾಧವೀಲತೆ- |
ಯಸಿಯ ಸೆಳೆರನ್ನದ ವಿತರ್ದಿಯೊ- |
ಳಸದಳಂ ರಂಜಿಸುವ ಮಣಿಮಯಕನಕಪೀಠದೊಳು ||
ಕುಸುಮಶರಸತಿ ಮದನಪಾಶವ- |
ನೊಸೆದು ಹಿಡಿದಿರ್ದಂತೆ ಸೊಗಯಿ [ಪ][1] |
ಳಸಿತ ಕುವಳಯನಯನೆ [2]ತನ್ನಯರ್ತುಕಾಲದೊಳು[2] || ೬೬ ||

ರಂಗದಮಳಿನ ಕುಸುಮದಿಂದಂ |
ಸಂಗಳಿಸಿತಾಕಲ್ಪಲತಿಕೆ ಮ- |
ನಂಗೊಳಿಸುವೊಂದಂದದಿಂದಂ ಪುಷ್ಪವತಿಯಾಗೆ ||
ಭೃಂಗಕುಂತಳೆ ಕುಸುಮಕೋಮಳೆ |
ತುಂಗಕುಚೆ ಲಲಿತಾಂಗಿ ಮೆಱೆದಳ- |
ನಂಗಜಂಗಮಲತೆಯೆ ಪುಷ್ಪಿತವಾಯ್ತಿ[3]ದೆಂಬಂತೆ || ೬೭ ||

ಸಕಲನದನದಿಗಳ ಸುತೀರ್ಥೋ- |
ದಕವ ತರಿಸಿ ಚತುರ್ಥದಿನದೊಳು- |
ಸುಕರತರಮಣಿಕಳಶಸಂಕುಳದಿಂದೆ ತರುಣಿಯರು ||
ಚಕಿತಹರಿಣೀನೇತ್ರೆಯರು ಸೂ- |
ರ್ಯಕುಲಕಾಂತೆಯರೆಯ್ದೆ ನೆರೆದಾ- |
ವಿಕಸಿತಾಂಬುಜವದನೆಗೆ ಸ್ನಾನವನೆ [4]ಗೆಯ್ಸಿದರು[4] || ೬೮ ||

---

೧ (ಕಖಗ) ಸಿದ. ೨-೨ (ಗ) ತನ್ನಯ ರಿತುಮತಿದೊಳು. ( ರಜಸ್ವಲೆಯಾದ ಸ್ತ್ರೀಯು ಕೈಯಲ್ಲಿ ನೈದಿಲೆಯನ್ನು ಹಿಡಿದು ನಿಗೂಢಳಾಗಿರಬೇಕೆಂಬ ವಿಧಿಯಿದೆ ). ೩ (ಗ) ಯ್ತು. ೪-೪ (ಗ) ಮಾಡಿಸಿದರು.

ಸುಲಿದಪಲು [೧]ಬೆಳುವಟ್ಟೆ[೧] ಮೂಗುತಿ- |
[೨]ಯಲರ್ದಮಲ್ಲಿಗೆ [೨]ಮುತ್ತಿನೇಕಾ- |
ವಳಿ–ತ್ರಿಸರ-ಪಂಚಸರ........ಚೌಕುಳಿಯ ತೊಳಪಂ ||
ತಲೆದುಡುಗೆ ನೇವುರವೆಸೆಯೆ ಕ- |
ಣ್ಗೊಳಿಸಿದಳು ಪಳುಕಿಂದೆ ಮಾಡಿದ- |
ಲಳನೆ ಶೃಂಗಾರನಿಧಿ ಕೌಶಲ್ಯೆ [೩]ನುತಮಾಂಗಲ್ಯೆ || ೧೯ ||

ಮಿಸುಪ ರಸಚಿತ್ರಂಗಳಿಂ ಕ- |
ಣ್ಗೆಸೆವ ರತ್ನದ ದೀಪದಿಂ ದೆಸೆ- |
[೪]ದೆಸೆಗೆ [೪]ಪರಿಮಳವೀವನೇಕಕುಸುಮದ ಮಾಲೆಗಳಿಂ ||
ಪಸರಿಸುವ [ [೫]ಶುಕಪಿಕಕಪೋತ ಸ-[೫] ] |
ರಸಸುಧಾಮಯ ಕೂಜಿತಂಗಳಿ- |
ನಸದಳಂ ರಂಜಿಸುವ ಶಯನಾವಸಥಮಂ ಪೊಕ್ಕು || ೨೦ ||

ರತಿಪತಿಕ್ರೀಡೆಯೊಳು ತನ್ನಯ |
ಪತಿಯೊಡನೆ ತಣಿದೆಯ್ದೆ ರಾತ್ರಿ[೬]ವಿ- |
ತತಿಯೊಳಾಸತಿ ನಾಲ್ಕು ಕನಸಂ ಕಂಡಳಿಂತೊಲಿದು ||
ಅ[೭]ತುಳಬಲಯುತಮದರದನಿ ಮೃಗ- |
ಪತಿದಿನಕರಂ ಹಿಮಕರಂ ವಿ- |
ಸ್ತೃತಶುಭಪ್ರದಮೆನಿಸಿ ಮಂಗಳಮೂರ್ತಿ ಕೌಶಲ್ಯೆ || ೨೧ ||

ಲುಳಿತ ಮಂಗಳ ತೂರ್ಯನಿ[೮]ನದಂ |
ಬಳಸೆ [೯]ಕೇಳ್ದೆಚ್ಚತ್ತು[೯] ಸಂತಸ- |
ದೊಳೆ ನೃಪಂ ಬೆರಸಾಗಳೆ ಪ್ರಾಭಾತಿಕಕ್ರಿಯೆಯಂ ||
ಲಲಿತತರ ಹರುಷದೊಳೆ ಮಾಡಿದ- |
ಳಳವಿಗಳಿದಾನಂದದಿಂದಂ |
ತಿಳಿಯೆ ಪೇಳ್ದಳು ತನ್ನ ಕನಸಂ ದಶರಥಂಗೆಸೆಯೆ || ೨೨ ||

---

೧-೧ (ಕಖ) ವಟ್ಟ. ೨-೨ (ಕಖ) ಯಲಿಟ್ಟು...ಗೆ. ೩ (ಕಖ) ವ್ಯ. ೪-೪ (ಗ) ದೆಸೆ. ೫-೫ (ಕಖ) ಕಪಿಕರಕಪೋತಸ; (ಗ) ಕಪಿಕರ ಸೂತಸ. ೬ (ಗ) ನ. ೭ (ಗ, ತ. ೮ (ಗ) ರವಂ. ೯-೯ (ಕಖ) ಕೇಳ್ಚತ್ತು.

ದಾನಗಜದಿಂ ದಾನಿ [೧]ಹರಿಯಿಃ[ನ][೧] |
ನೂನವಿಕ್ರಮನವನಿನಾಥಂ |
ಭಾನುತೇಜಂ ಚಂದ್ರನಿಂದೂರ್ಜಿತಕಳಾಧರನು ||
ಸೂನು ನ[೨]ಮಗಾದಪನೆನಲ್ಕೀ- |
ಳ್ವಾನಿಳಾಧಿಪನುಕ್ತಿಗಂತಾ- |
ಮಾನಿನಿಪ್ರಿಯಶತಸಹಸ್ರಪರಂಪರೆಯನೆಯ್ದಿ || ೭೩ ||

ಅಂತು ಸುಖದಿಂದಿರ್ಪುದುಂ ತ- |
ತ್ಕಾಂತೆಗೆಯ್ತರೆ ಗರ್ಭಚಿನ್ಹಂ |
ಕಾಂತಿ ನೂರ್ಮಡಿಸಿತ್ತು ಬೆಳರ್ತುದು ವದನವಿಧುಬಿಂಬಂ ||
ಮುಂತೆ ತನ್ನಯ [೩]ಗರ್ಭದರ್ಭಕ-[೩] |
ನಂತೆ ತಳೆಗುಂ ಕೀರ್ತಿಚಂದ್ರಿಕೆ- |
ಯಂ ತಡೆಯದಂತಱಿಪುವಂತಿರೆ ಕೂಡೆ ಮೂಜಗಕೆ || ೭೪ ||

ನೆಲೆಮೊಲೆಯ ಮೊಗವೆಯ್ದೆ ಕರ್ಪಂ |
ಸಲೆ ತಳೆದವಹಿತಕ್ಷಿತೀಶ್ವರ |
ಲಲನೆಯರ ಮೊಗವೆಯ್ದೆ ಕಪ್ಪಂ ತಳೆವ ಮಾೞ್ಕೆಯೊಳು ||
ವಳಿಗಳಡಗಿದುವಖಿಳ ದನುಜಾ- |
ವಳಿಗಳಡಗುವ ತೆಱದಿ [೪]ನೆನೆಯೆನೆ[೪] |
[೫]ಲಲಿತ ಹಂಸೀಯಾನೆ ತಾಳ್ದಿದಳಂತು ಗರ್ಭವನು || ೭೫ ||

ಭರದೆ ದಾನವನಾಳ್ವ ರಿಪುಗಳ |
ಪುರಮನಸುರರಿಪುನ [೬]ವನವ ಕೀಳಿಸು- |
ವಿರದೆ ಕುಲಪರ್ವತವನೇಱುವ ಕುಲನದಿಗಳೊಳಗೆ ||
ಇರದೆ ಜಲಕೇಳಿಗಳನಾಡುವ |
ಧರಣಿಪಾಲರ ಮಕುಟದಿಂ ನಿಜ |
ಚರಣಮಂ ತೆಗೆಯುದ ಬಯಕೆಯಾಯ್ತಾ ಮನೋಹರಿಗೆ || ೭೬ ||

---

೧-೧ (ಕಖಗ) ಹರಿಯಿಂ. ೨ (ಗ) ನ. ೩-೩ ಗರ್ಭಗರ್ಭಿತ. ೪-೪ (ಗ) ನೆನೆಯೆ ಆನೆ. ೫ (ಗ) ತ. ೬ (ಕಖ) ಧ.

ಸುರಗಿರಿಯು [೧]ಸ್ಥೈರಿಸಿದ [೧]ಬಿಣ್ಪಿನ |
ವರತನೂಜಂ ಗರ್ಭದೊಳು ನೆಲ- |
ಸಿರೆ ಕನಕಮಾತ್ರಕ್ಕೆ ಸ್ಥೈರಿಸದಿರ್ಪುದುಚಿತಮೆನೆ ||
ಧರಿಯಿಸಿದಳಾಕಾಂತೆ ಮುತ್ತಿನ |
ವಿರಚಿಸಿದ ತುಡುಗೆಗಳನತ್ಯಾ- |
ದರದಿನಧಿಕರ ನೀತಿದಂಡನಮಾತ್ರಕೆಳಸುವರೆ || ೭೭ ||

ಹರುಷಗರ್ಭವ ತಳೆವ ತೆಱದಿಂ |
ತರುಣಿ ಗರ್ಭವನಂತು ತಳೆದಾ- |
ದರದೆ ನವಮಾಸಾವಸಾನದಲಿನನ ಸಮಯುದೊಳು ||
ಧರಣಿ ರೋಹಣಶೈಲವಂ ಶಾ- |
ರ್ವರಿ ಸುಧಾದೀಧಿತಿಯು ಹಡೆವಂ- |
ತಿರೆ ಹಡೆದಳಾ ರಮಣಿ ಸುತನಂ ಸಕಲಗುಣಯುತನಂ || ೭೮ ||

ಧರಣಿ ನೀರಜಮಾಯ್ತು ಸಕಳಾಂ |
ಬರತಳಂ ನಿರ್ಮೇಘಮಾಯ್ತಾ |
ಸರಸವೈತಾನಾಗ್ನಿ ಬೆಳಗಿತು ದಕ್ಷಿಣಾವರ್ತಂ ||
ಸುರಭಿಪವನಂ ತೀಡಿತೊಯ್ಯನೆ |
ಪಿರಿದು ನಿರ್ಮಲಮಾದುದಬ್ಜಾ- |
ಕರತಟಾಕನದೀನದಂ ಪುಣ್ಯನಿಧಿಯುದಯಿಸಲು || ೭೯ |

ಒದವೆ [೨]ಕೆಂ [ ಪೆಸೆವ ][೨] ದುಕೂಲಾಂಬ- |
ರದ ಪಸುರ್ವಟ್ಟೆಯ ಗುಡಿಗಳುಂ |
ಪುದಿದ ಮುತ್ತಿನ ರಂಗವಲಿಗಳುಮೆಸೆವ ತೋರಣ [ ಮುಂ[೩] ] ||
ಮೃದುಮಧುರ ಸಂಗೀತರವಮುಂ |
ಮುದದಿನೆಡೆಯಾಡುವ ನಿಜಾನ್ವಯ |
ಸುದತಿಯರ ಮಂಜೀ[೪]ರರಸ[೪]ನಾಕಂಕಣಕ್ವಣಿತಂ || ೮೦ ||

---

೧-೧ (ಕಖ) ವೈರಿಸಿದ. ೨-೨ (ಕಖಗ) ಕೆಂಪಿಸವಿರಿವ. ೩ (ಕಖಗ) ಮುಂ. ೪-೪ (ಕಖ) ರಸಾ.

ಚಂದನದ ಕತ್ತುರಿಯ ಸಾದಿನ |
ಸಂದ ಪಳುಕಿನ ಕುಂಕುಮದ ಮಕ- |
ರಂದದಿಂದೊದವಿದ ಕದಂಬದ ರಾಗದೋಕುಳಿಯಿಂ ||
ಚೆಂದಚೆಂದದಿನೆಲ್ಲವೆಡೆಯೊಳು |
ಸೌಂದರಿಯರುಂ ಶ್ರೋತ್ರಿಯರುಮಾ- |
ನಂದದಿಂ ನೃಪಮಂತ್ರಿ ಪುರಜನಪರಿಜನಂ ನೆರೆ [ [೧]ಯೆ ] || ೮೧ ||

ಸಂತಸದೆ ಭೂಭುಜಚಯದ ಸಾ- |
ಮಂತಕೋಟಿಯ [೨]ಸಚಿವ[೨]ನಿಚಯದ- |
ನಂತಮಂತ್ರಿಪಸಾಯತರ ನಾಯಕರ ಹಡಪಿಗರ ||
ಪಜ್ಜಿಕಾಱರ ಸಹಚರರ ಮಾ- |
ವಂತ[೩]ನಾಗರಿಕರ ವಿಟರ್ಕಳ |
ಸಂತತಿಯು ತಮುತಮಗೆ ನಲವಿಂ[೪] ಪೆಕ್ಕಣವನಾಡೆ || ೮೨ ||

ತೊಳಪ ಪಳುಕಿನ ಭಿತ್ತಿಯೊಳು ಪ್ರ-
ಜ್ವಳಿಪ ಮಣಿಕುಟ್ಟಿಮದೊಳಾಡುವ |
ಲಳನೆಯರ ಪ್ರತಿಬಿಂಬವೆಸೆದುವು ರಾಜಗೃಹದಲ್ಲಿ ||
ಲಲಿತನೃಪತಿಲಕನ ಜನನದೊಳು |
ನಲಿದು ನರ್ತಿಪ ದಿಗ್ವಧೂಸಂ- |
ಕುಳದ ಭೂಕಾಂತೆಯ ವಿಜೃಂಭಿಪ ಹಲವು ರೂಪೆನಲು || ೮೩ ||

ಸುರಪತಿಗಮರಿದೆನಿಸಿ ಜಿನಮಂ- |
ದಿರದೊಳಭಿಷೇಕಾರ್ಚನೆಗಳಂ |
ಸುರಕುಜಂ ಕೈವಂದ ತೆಱದಿಂ ಪುಲಕಿತಶರೀರಂ ||
ಭರದೆ ಮಾಡಿಸಿ ಸಕಲಜನಕಾ- |
ದರದೆ ಬೇಡಿದ[೫]ನಿತ್ತು ದಶರಥ- |
ಧರಣಿಪಾಲಕ ಮಾಡಿದಂ ಸುತಜಾತಕರ್ಮವನು || ೮೪ ||

---

೧ ( ಕಖಗ ) ದಾಡೆ. ೨-೨ ( ಕಖ ) ಶಚಿಯ. ೩ ( ಕಖಗ ) ರಂಗ. ೪ ( ಗ ) ತ. ೫ ( ಕಖಗ ) ತ.

ಸುರಭಿಸುರತರುಪರುಷವರಸಿ- |
ದ್ಧರಸಚಿಂತಾಮಣಿಯ ಕಣಿಗಣ- |
[೧][ಭರಣ][೧]ಮಂ ಕೀ[೨]ಳ್ಮಾಡುವೌದಾ[೨]ರ್ಯಕ್ಕಿದುಚಿತಮೆನೆ ||
[ಸು[೩]]ರರ ಶಿಷ್ಟವಿಶಿಷ್ಟಕವಿಸಾ- |
ಕ್ಷರರ ಸುಜನರ [೪]ಯಾಚಕರ್ಗ[ಳಿ]- |
ಗಿರದೆ [೪]ದೀನಾನಾಥಕೋಟಿಗೆ ಬೇಡಿದುದನಿತ್ತಂ || ೮೫ ||

ಸೀಮೆಗಳೆದುತ್ಸಾಹದಿಂದಂ |
ಭೂಮಿಪತಿ ದಶರಥ[೫]ನುದಾರಂ[೫] |
ಪ್ರೇಮದಿಂ ಹತ್ತನೆಯ ದಿನದೊಳು ಶುಭಮುಹೂರ್ತದೊಳು ||
ರಾಮಣೀಯಕಮೂರ್ತಿ ಕೀರ್ತಿಸು- |
ಧಾಮಯಂ ನಯನಾಭಿರಾಮಂ |
ರಾಮನೆಂಬನ್ವರ್ಥನಾಮದೆ ನಾಮಕರ[೬]ಣ ಮಾಡಿ || ೮೬ ||

ಮಿಸುಪ ಪಳುಕಿನ ತೊಟ್ಟಿಲೊಳು ಕೆ- |
ತ್ತಿಸಿದ ನವರತ್ನದ ಬೆಳಗು ದೆಸೆ- |
ದೆಸೆಗೆ [೭]ಪಸರಿಸೆ [೭]ಕೆ[೮]ದಱಿದಿಂದ್ರ[೯]ಧನುವಿನ ತೆಱದಿಂದ[೮] ||
ಎಸೆವ ಹಂಸಿಯ ಕಿಱಿಯ ಹಂಸಂ |
ಮುಸುಕಿ ಹಾಸಿದ ದುಗುಲದೊಳು ರಂ- |
ಜಿಸಿದನಿಂಗಡಲೊಳಗೆ ರಾಮಂ [೧೦]ಪಾರಿಜಾತ[ವೆ ಸೆ][೧೦] || ೮೭ ||

ಬಾಲೆಯರು ಶ್ರುತಿಗೂಡಿ ತೊಟ್ಟಿಲ |
ಲೀಲೆಯಿಂದಂ ತೂಗುತಂ ಬಂ- |
ಗಾಳಗುಜ್ಜರಿದೇಸಿಮಲಹರಿದೇವಿದೇವಕ್ರೀ ||
ಗೌಳಗುಂಡಾಕ್ರೀ ವಸಂತವ- |
ರಾಳಿಫಳಮಂಜರಿಲಳಿತಭೂ- |
ಪಾಳಿದೇಶಾಖ್ಯೆಯಲಿ ಸೊಗಸಿನ ಸೋನೆಯನೆ ಪಾಡಿ[೧೧] || ೮೮ ||

---

೧-೧ (ಕಖಗ) ನಿಕಟ. ೨-೨ (ಗ) ಕೀಳ್ಮಾಡುವವುದಾರ್ಯ. ೩ (ಕಖಗ) ಸಾ. ೪-೪ (ಕಖಗ) ಬಂಧವರ್ಗದ। ಯಾಚಕರ್ಗೆರದ. ೫-೫ (ಕಖಗ) ನತಿ. ೬ (ಕಖಗ) ಣಂ. ೭-೭ (ಗ) ಪರಿಕಿಸಿ ೮-೮ (ಕಖ) ಕೆದಱಿದಿಂದ್ರನ ಧನುವಿಂದ. ೯ (ಗ) ಹ. ೧೦-೧೦ (ಕಖಗ) ಪಾರಿಜಾತದ ತೆಱದಿಂ. ೧೧ (ಕಖ) ಡೆ.

ಜೋ ಸಕಳ[೧][ಮಾಂಗಲ್ಯ][೧]ನಿಲಯನೆ |
ಜೋ ಸರಸಸಾಹಿತ್ಯಜನನುತ |
ಜೋ ಸುರಾಸುರಮಕುಟಚುಂಬಿತಚಾರುಪದಕಮಳ[೨] ||
ಜೋ ಸಮಗ್ರವಿರೋಧಿಶೋಷಣ |
ಜೋ ಸಹಸ್ರಾಷ್ಟಕಸುಲಕ್ಷಣ |
ಜೋ ಸದಾಸನ್ನಿಹಿತಲಕ್ಷ್ಮೀರಾಮ ಜೋರಾಮ || ೮೯ ||

ಎನುತ ತರುಣಿಯರೆಯ್ದೆ ತಮತಮ- |
ಗನುನಯದೆ ತೂಗುತ್ತೆ ತೊಟ್ಟಲ- |
ನನಿಬರುಂ ಶ್ರುತಿಗೂಡಿ ಸೊಗಸಿನ ಸರಿ ಸುರಿದ ತೆಱದಿಂ ||
ಇನಿದೆನಿಸಿ ಸಲೆ ಪಾಡಿ ಬಾಯಿನ- |
ವನು ಮುದದೆ ಕೊಂಡಖಿಲಲೋಕಂ[೩] |
ತ[೪]ನತನ[೪]ಗೆ ನಿಧಿಗಂಡ ತೆಱದಿಂ[೫] ಕೂಡಿ ಕೊಂಡಾಡೆ || ೯೦ ||

ಮುಗುಳುನಗೆ ಮುದವೀಯೆ ತೊದಳ್ನುಡಿ |
ಸೊಗಸನೊದವಿಸೆ ದಟ್ಟಡಿಗಳುಂ |
ಬಗೆಗೊಳಿಸೆ ಬಂ[೬]ದಪ್ಪನಪ್ಪಿಗೆ[೬] ಮನಕೆ ಕಣ್ಮಲೆಯೆ ||
ಮುಗ್ಧತನವಾನಂದಮುಂ ಕೈ |
ಮಿಗಿಸೆ ನಿಜಜನ ಬಿತ್ತಿ ಬೆಳೆವಂ- |
ತಗಣಿತಶ್ರೀನಿಳ[೭]ಯ ಬೆಳೆದಂ ರಾಮನಭಿರಾಮಂ || ೯೧ ||

ಮಗನೆ ಬಾ ಯೆನ್ನಯ್ಯ ಬಾ[ರೆ][೮]ಲೆ |
ಮುಗುದ ಬಾ ಸಾಹಿತ್ಯ ಬಾ ನಗೆ- |
ಮೊಗದ ಮುದ್ದಿನ ಮುಗ್ಧ ಬಾ ರವಿಕುಲಲಲಾ[೯]ಮ[ನೆ] ಬಾ ||
ದಿಗಿದಿಗಿನೆಯಪ್ಪಪ್ಪ ಬಾಯೆನು- |
ತೊಗೆದ ಪುಳಕದೆ ದಶರಥನ ಸತಿ |
ಮೃಗನಯನೆ ಕರೆದಪ್ಪಿದಳು ಹರುಷಿಸುತ ಸುಖವೆಯ್ದೆ || ೯೨ ||

---

೧-೧ (ಕಖಗ) ಮಂಗಳ. ೨ (ಕಖ) ಳಾ. ೩ (ಗ) ಕೋ. ೪-೪ (ಗ ನ್ನತಗೆ. ೫ ‸ಗ) ದಿಂದೆ.
೬-೬ (ಕಖ) ಬಂದಪ್ಪುವಪ್ಪಿಗೆ. ೭ (ಕಖ) ಳೆ. ೮ (ಕಖಗ) ಯೆ. ೯ (ಕಖ) ಮಾ.

ಸರಸಸಾಹಿತ್ಯಮೆ ಬೆಳೆವವೊ- |
ಲ್ಸುರತರು ........... ಬೆಳೆವವೊಲ್ |
ಶರದಮಳಬಾಳೇಂದುಬಿಂಬಂ ಕ್ರಮದೆ ಬೆಳೆವವೊಲು ||
ಧರೆಯ ಭಾಗ್ಯದ ಬೆಳಸೆ ಬೆಳೆವವೊ- |
ಲರಿನೃಪರ ಧವಳತೆ[ಯು] ಬೆಳೆವವೊ- |
ಲರರೆ ಬೆಳೆದಂ ರಾಮಚಂದ್ರಂ ಕಳೆಯೆ ಬೆಳೆವಂತೆ || ೯೩ ||

ಇರೆ ಕೆಲವು ದಿನದಿಂದ ಮೇಲಾ- |
ಧರಣಿಪಾಲನ ಮೋಹವಲ್ಲಿಗ- |
ಳರದೆ ಫಲಗರ್ಭವ ತಳೆವವೊಲ್ತಳೆಯೆ ಗರ್ಭವನು ||
ವರಸುಮಿತ್ರೆಗೆ ಕೈಕೆಸುಪ್ರಭೆ- |
ತರುಣಿಯರ್ಗೆ ಕ್ರಮದಿ ನಂದನ- |
ರರರೆ ಲಕ್ಷ್ಮಣ-ಭರತ-ಶತ್ರುಘ್ನರ್ತನಯರಾಗೆ || ೯೪ ||

ಭುವನಭೂಷಣ ರಾಮಚಂದ್ರನು- |
ಮವರು ಮೂವರುಮಿಂತು ನಾಲ್ವರು |
ವಿವಿಧವಿದ್ಯಾಕುಶಲರಾಗಲು ದಶರಥನೃಪಾಲಂ ||
ದಿವಸದಿವಸಂ ಸಂತಸದಿನು- |
ತ್ಸವದ ಮೇಲುತ್ಸವವನಲ್ಲಿಂ |
ಭವಸುಖಂ ಪೆಱತಿಲ್ಲ ಮೇಲೆಂದೆನೆ ಜಗಂ ತಳೆದಂ || ೯೫ ||

ನಾಲ್ಕು ಭುಜದಿಂ ಪದ್ಮನಾಭನ |
ನಾಲ್ಕು ವೇದದಿನಬ್ಜಜಾತನ |
ನಾಲ್ಕು ವಕ್ತ್ರದಿನೀಶವೆಸೆವೀಶಾನವಕ್ತ್ರವೆನೆ |
ನಾಲ್ಕು ನಖಮುಖದಿಂದ ಸಿಂಹದ |
ನಾಲ್ಕು ದಂತದಿನಿಂದ್ರದಂತಿಯ |
ವೋಲ್ಕುಮಾರರ್ನಾಲ್ವರಿಂ ದಶರಥನು ಸುಖಮಿರಲು || ೯೬ ||

---

೧-೧ (ಕಖಗ) ಕೈಕೆಗೆ ಸುಪ್ರಭೆಗೆ. ೨-೨ (ಗ) ಕುಲಿಶ. ೩-೩ (ಗ) ವೊಲುಕುಮಾರ.

ಧರಣಿಪಾಲಲಲಾಮ ರಾಮಂ- |
ಸ್ಥಿರತರಾಯತ ಲಕ್ಷ್ಮಲಕ್ಷ್ಮಣ- |
ನುರುಚರಿತಭರತಂ ವಿದಿತರಿಪುವಿಘ್ನಶತ್ರುಘ್ನಂ ||
ಭರದೆ ಬೆಳೆದರು ಶಸ್ತ್ರಶಾಸ್ತ್ರೇ- |
ತ್ಕರಕಳಾಪರಿಣತರುನಿಲ್ಲಿಂ |
ಧರೆಯೊಳಾರುಂ ತಮಗೆ ಮಿಗಿಲಿಲ್ಲೆನೆ [1]ತಳೆದರವರು || ೯೭ ||

ರಾಮಲಕ್ಷ್ಮೀಧರರು ರಿಪುಕುಲ- |
[2]ಭೀಮರಖಿಳ[2]ಕಳಾಲಲಾಮ- |
ಭೌಮಹಿತರ ಸ್ನೇಹ ಜನ್ಮಾಂತರ[3]ಜನಿತ ತಮಗೆ[3] ||
ಪ್ರೇಮಪೀಯೂಷಾರ್ದ್ರಹೃದಯ- |
[4]ರ್ಕಾ[ಮ]ಕಮನೀಯಾಕೃತಿಗಳು- |
ದ್ದಾಮಭುಜಪರಿಘಪ್ರಪಂಚದ್ವಂದ್ವಚಾರಿಗಳು || ೯೮ ||

ಭರತನುಂ ಶತ್ರುಘ್ನನುಂ ಸುರು- |
ಚಿರಚರಿತರಗ್ರಜಚರಣಸರ- |
ಸಿರುಹಭೃಂಗರ್ತುಂಗಮಹಿಮರನಂಗಸನ್ನಿಭರು ||
ಪಿರಿದು ಮಾತೇಂ ಪೂರ್ವಜನ್ಮಾಂ- |
ತರಜನಿತಮೀಸ್ನೇಹವೆಂದು- |
ರ್ವರೆಪೊಗಳಲಂತವರುಮಾದದ್ವಂದ್ವಚಾರಿಗಳು || ೯೯ ||

ಸತಿಯರಿಗೆ ನಾಲ್ವರಿಗೆ ನಾಲ್ವರ್ |
ಸುತರಿವರ್ಕ್ರಮದಿಂದೆ ಜನಯಿಸೆ |
ಚತುರುದಧಿವೇಳಾವಳಯಿತಕ್ಷಿತಿಯನಾಳಲ್ಕೆ ||
ವಿತತವಿಕ್ರಮರಾದರೆಂದು |
ಪ್ರತಿದಿನಂ ಹರ್ಷೋತ್ಕರ್ಷಸಂ- |
ತತಿಪರಂಪರೆಗಳೊಳು ತಣಿದಂ ದಶರಥಕ್ಷಿತಿಪಂ || ೧೦೦ ||

---

೧ (ಗ) ಬೆ. ೨-೨ (ಗ) ಭೀಭರಖಿಳ. ೩-೩ (ಕಖಗ) ಜನಿತ ತಮತಮಗೆ. ೪-೪ (ಕಖಗ) ಕ್ಕಾರ್ಯ.

[೧]ತಾಯಿತಂದೆ[೧]ಯರ್ಗಖಿಲಲೋಕಂ |
ಜೀಯೆನುತ್ತಿರೆ ಸಕಲವಿದ್ಯಾ- |
ಜ್ಯಾಯರೊದವಿದ ಸುಖದ ಸೋನೆಯನನುದಿನಂ ಕಱೆದು ||
ಪ್ರಾಯಕಲ್ಲದುದವರ ಸದಭಿ- |
ಪ್ರಾಯಮರರೆ ಮಝುಯ್ಯ ಭಲರೇ |
ಜೀಯ ಜೀಯ ಭಾ[೨]ಪುಭಾಪೆ[೨]ನೆ ಸುಜನರೆ[೩]ಲ್ಲ ಬೆಳೆದು || ೧೦೧ ||

ಅಂತು ರಾಮನು ಲಕ್ಷ್ಮಣನುಮ- |
ತ್ಯಂತವಿಕ್ರಮಶಾಲಿಗಳ್ಮಿಗೆ |
ಸಂತಸಮನೊದವಿಸಲು ತತ್ಕಾಲದ ಬಳಾಚ್ಯುತರು ||
ಕಾಂತೆಯರ್ಚಾಮರವನಿಕ್ಕಲ- |
ನಂತಭೂಭುಜರೋಲಗಿಸೆ ನಿ- |
ಶ್ಚಿಂತ ಸಿಂಹಾಸನದೊಳಿರೆ ದಶರಥನೃಪಾಲಕನು || ೧೦೨ ||

ಹಿಡಿದ ಕಟ್ಟಿಗೆ ಜೋಲ್ದ ಗಡ್ಡಂ |
[೪][ ತೊಡಿಗೆ ][೪] ಜೀರ್ಣ [೫][ ವಿವರ್ಣ ][೫] ಮಲ್ಲದೆ |
ತೊಡೆವರಂ ನೀಳ್ದಿರ್ದ ಕುಪ್ಪಸವೆಸೆಯುಲೆಯ್ತಂದು ||
ಪೊಡವಿಪತಿಗತಿವಿನಯಭರದಿಂ |
ಪೊಡವಿಯೊಳು ನೊಸಲಿಟ್ಟು ಪೊಡವ- |
ಟ್ಟಡಿಗಡಿಗೆ ಕೈಮುಗಿವುತಂ ಬಿನ್ನವಿಸೆ ಪಡಿ[ ಯ ]ರನು || ೧೦೩ ||

ದೇವ ಬಾಗಿಲೊಳಿರ್ದಪಂ [೬]ಧಾ- |
ತ್ರೀವಿನುತ ಜನಕಕ್ಷಿತೀಶ್ವರ |
ಪಾವನ ಶ್ರೀಪಾದಪದ್ಮೋಪಾಂತದಿಂ ಬಂದು |
ಕೋವಿದಂ ವರಲೇಖಹಸ್ತನ- |
ತೀವವಿನಯಿತನಾತನಲ್ಲಿಂ |
ದೇವ ಚಿತ್ತೈ [ [೭]ಪು ] ದೆಂದನುಮತವನೊಲವಿಂ ಪಡೆದು || ೧೦೪ ||

---

೧-೧ ( ಗ ) ತಾಯ್ತಂದೆ. ೨-೨ ( ಕಖ ) ಬಾಟ್ಪು ಬಾಟ್ಪೆನೆ. ೩ ( ಕಖಗ ) ಲ್ಲಂ. ೪-೪ ( ಕಖಗ ) ಹರಿದ. ೫-೫ ( ಕಖಗ ) ಮಯ. ೬ ( ಕಖ ) ಥಾ. ೭ ( ಕಖಗ ) ಸು.

ಜನಕರಾಜನ ಲೇಖಹಸ್ತ [ ೦ ] |
ಜನಪತಿಯ ದೆಸೆಯಿಂದ ಪಡಿಯರ- |
ನನುನಯದಿನೊಡಗೊಂಡು ಬರೆ ಬಂದಾತನತಿಮುದದೆ ||
ವಿನಯವಿನಮಿತನಾಗಿ ತಾಂ ತಂ- |
ದನುಪಮಾಮಳರತ್ನನಿಚಯಮ- |
ನನಿತುಮಂ ಮುಂ [ ದೊಸೆದು ] ಮುಂದಿಡೆ ಬಳಿಕ ಲೇಖವನು || ೧೦೫ ||

ಸವಿನಯದೆ ಲೇಖಾರ್ಥಮಂ ಕೊಂ- |
ಡವಿಚಲಿತಚಿತ್ತಂ ವಿಚಾರಿಸಿ- |
ಯವಧರಿಸಿ ದೇವೆಂದು ಪೊಡಮಟ್ಟತಿ ವಿಶದಮಾಗೆ ||
ವಿವಿಧವರ್ಣೋಚ್ಚಾರಣಂಗ- |
ಳ್ಕಿವಿಗೆ ಸೊಗಯಿಸೆ ಸೇನಬೋವಂ |
ಭುವನಪತಿ ದಶರಥನ ಮುಂದಿರದೋದೆ ಲೇಖವನು || ೧೦೬ ||

ಸ್ವಸ್ತಿ ಸಕಳನೃಪಾಳಮಸ್ತಕ- |
ನ್ಯಸ್ತಮೌಳಿಮರೀಚಿಮಾಳಾ- |
ವಿಸ್ತೃತಶ್ರೀಪಾದಪದ್ಮಂ........ದಶರಥಂಗೆ ||
ವಾಸ್ತವಸ್ನೇಹದೊಳೆ ವಿನತಸ- |
ಮಸ್ತಭೂಭುಜಜನಕಪತಿ ಲೋ- |
ಕಸ್ತುತಂಗಟ್ಟಿದ ಸುಲೇಖಾರ್ಥಂ ಮನೋಜ್ಞಾರ್ಥಂ || ೧೦೭ ||

ಎನ್ನ ಮಗಳಂ ಜಾನಕಿಯನಾಂ |
ಮುನ್ನಮೆ ರಾಮಂಗೆ ಕೊಟ್ಟು ಮ- |
ಹೋನ್ನತಿಯಿನೀನಮ್ಮ ಕೊಳುಕೊಡೆಗುದಯಿಸುತ್ತಿರಲು ||
ಎನ್ನನೊರ್ವಂ ಖೇಚರಂ ಪ್ರ- |
ಚ್ಛನ್ನಕಪಟದಿನೊಯ್ಯೆ ಪೋದುದ- |
ನಿನ್ನುಳಿದುದಂ ಬಂದ ಮಾನುಷನಿಂದ ಕೇಳುವುದು || ೧೦೮ ||

---

೧-೧ ( ಕಖಗ ) ಮುನ್ನೊಲಗಿಸಿ.

ಎನಲೊಡಂ ಪೇೞೆನ್ನ ಮೈದುನ- |
ನನು ಕಪಟದಿಂ ಕೊಂಡು ಪೋದವ- |
ನೆನಿತುಮೆಂತಿರದೆನ್ನ ಕೈಯಲಿ ಪೋಪನಂತವನು ||
ಮುನಿದು ಕೇಸರಿ ಮಲೆದ[1] ಗಜಮಂ |
ಕನಲ್ದು ಸೀಳುವ ತೆಱದಿ ಸೀಳುವೆ- |
ನೆನಗೆ ತಡೆವುದು ಕಜ್ಜಮಲ್ಲೆನೆ ದಶರಥಂ ಮುಳಿದು || ೧೦೯ ||

ಮಿಡುಕಿ ಕಿಡಿಕಿಡಿಯಾಗಿ ಕೋಪಂ |
ಘುಡುಘುಡಿಸಿ ಕಿಸುಸೆರೆಗಳುಬ್ಬಿಸಿ |
ತೊಡರೆ ನೊಸಲೊಳ್ ಭ್ರುಕುಟಿ ಬೆಳರೆ ಕಪೋಲಭಿತ್ತಿಗಳು ||
ಒಡನೊಡನೆ ತುಟಿ ಕೆತ್ತೆ ದೇವ- |
ರ್ಕುಡುವುದೆನಗೀ ಬೆಸನವೆನುತಂ |
ನುಡಿಯೆ ರಾಮಂ ಮುಳಿದು ರುದ್ರನ........ ತೆಱದಿಂ || ೧೧೦ ||

ದೆಸೆಯ ಕಡೆಯೊಳು ನಿಲ್ಕೆ ಮೇಣಾ- |
ಗಸದೊಳಿರ್ಕೆ ಪಯೋಧಿಯೊಳ್ಪುಗೆ |
ರಸೆಯೊಳಗೆ ಮೇಣಿರ್ಕೆ ಖೇಚರನಕ್ಕೆ ಸುರನಕ್ಕೆ ||
ಬೆಸಸುವುದು ದೇವೆನ್ನನೀಗಳೆ |
ಕುಸುರಿದಱಿವೆಂ ಕರುಳನುರ್ಚುವೆ- |
ನೊಸೆದು ದೆಸೆವಲಿಗೆದಱುವೆಂ ನಾನೆಂದ ಲಕ್ಷ್ಮಣನು || ೧೧೧ ||

ಧರೆಯನಾಗಸಕಾಗಸವನೀ- |
ಧರೆಗೆ ಮಾೞ್ಪೆ ಸುರಾದ್ರಿಯಂ ಕಿ- |
ೞ್ತಿರದಗಸ್ತ್ಯನ[2-3] ತೆಱದಿನಬ್ಧಿಯನೊಕ್ಕುಡಿತೆ ಕುಡಿವೆಂ ||
ಸುರನರಾಸುರಖಚರಲೋಕವ- |
ನೊರಸಿ ಮುಕ್ಕುವ[4] ಬಗೆಯ ತಂದ- |
ರ್ಭರತಶತ್ರುಘ್ನರ್ಜನಕನಂ ಖಚರನೊಯ್ದುದಕೆ || ೧೧೨ ||

---

೧ (ಕಖಗ) ಮಲಿದು. ೨-೩ (ಕಖ) ೞ್ಪಿರಿದಗಸ್ತ್ಯನ. ೪ (ಗ) ನೆ.

ವಿನಯದಿಂದೆ ಸಮುದ್ರಹೃದಯಂ |
ಜನಪತಿಗೆ ಕೈಮುಗಿದು ವಿನಯದಿ- |
ನಿನಿತನವಧರಿಸುವುದು ದೇವೆನುತೆಂದನಿಂತೆಂದು ||
ಜನಕರಾಜನನೊಯ್ದು ಖಚರನ- |
ನನಿತುಮಂ ನೀನೀತನಿಂ ತಿಳಿ- |
ದನು[೧]ವರಕೆ ಬಳಿಕಂ ವಿಚಾರಿಸಿ ನೆಗೞ್ವುದಧಿನಾಥಾ || ೧೧೩ ||

ಎನುತವಸುವಡೆದಾಮನುಷ್ಯಂ |
ವಿನಯವಿನಮಿತನಾಗಿ ಕೈಮುಗಿ- |
ದನುನಯದಿನಿಂತೆಂದನಾಗಳು ನೃಪತಿಗತಿಮುದದಿಂ ||
ಜನಕರಾಜಂ ಬಂದು ತನ್ನಯ |
ತನುಜೆ ಜಾನಕಿಯಂ ಸ್ವಯಂವರ- |
ಜನಿತವೃತ್ತಾಂತಮನಱಿಪಲೆಂದೆನ್ನನಟ್ಟಿದನು || ೧೧೪ ||

ಅಂತೆನಲ್ದಶರಥಧರಿತ್ರೀ- |
ಕಾಂತನಾಗಳ್ಭೂರಿಹಾಸಂ |
ಸಂತಸದಿನಾಲೇಖಹಸ್ತಂಗಿತ್ತು ಪದಕವನು ||
ಇಂತಿದಂ ಮೊದಲಿಂದ ಕಡೆವರ- |
ನೀಂ ತಿಳಿಯೆ ಪೇೞ್ಗೆನೆ ಜನಕವೃ- |
ತ್ತಾಂತಮಂ ಪೇೞೆ[೨][ತಗುಳ್ದಂ[೨]] ವಾದಿಗಜ[೩]ಕೇಸರಿ[೩]ಗೆ || ೧೧೫ ||

೧ (ಗ) ದ. ೨-೨ (ಕಖ) ಲ್ತಗುಳ್ದಂ. ೩-೩ (ಕಖ) ಕೇಸರಿ.

# ೩ನೆಯ ಸಂಧಿ.



ರಾಗ—ಮಾಳವಗೌಳ. ಭಾಮಿನೀ ಷಟ್ಪದಿ.

ಸೀತೆ ಜನಕನೃಪಾಲಕನ ತನು- |
ಜಾತೆಯಾದುದನೆಱಪೆ ದೂತಂ |
ಪ್ರೀತಿಯಿಂದಂ ರಾಮಚಂದ್ರನ ನೋಡಿ ದಶರಥನು || ಪಲ್ಲವ ಪದ ||

ಶ್ರೀನಿಧಿಯ ಜನಕಕ್ಷಿತೀಶನ |
ನೂನವೃತ್ತಾಂತಮುಮನಂತಾ- |
ಜಾನಕಿಯ ಲಾವಣ್ಯಪುಣ್ಯೋದಯಮುಮಂ ಮುದದೆ ||

ಭೂನತಂಗತಿ ಕೌತುಕದಿನಾ- |
ಸ್ಥಾನಮೆಲ್ಲಂ ಪೊಗೞೆ ಪೇೞ್ದಂ |
ಮಾನನಿಧಿಗಿಂತೆಂದು ನಯದಿಂ ಸುಕವಿತಿಲಕಂಗೆ || ೧ ||

ದೇವ, ಮಿಥಿಳೇಶ್ವರನ ವಲ್ಲಭೆ |
ದೇವಿಗೆಮ್ಮ ವಿದೇಹಿಗರ್ಥಿಯಿ- |
ನಾವರಿಸೆ ವರಗರ್ಭಚಿಹ್ನಂ ಶುಭಮುಹೂರ್ತದೊಳು ||

ಪಾವನರಮಳ್ಗಳನಖಿಳಧಾ- |
ತ್ರೀವಿನುತರಂ ಗಂಡುಪೆಣ್ಗಳ- |
ನಾವನಿತೆ ಬೆಸಲಾಗಲವರ್ಗಳ ಜಾತಕರ್ಮದಲಿ || ೨ ||

ಅಸುರನೊರ್ವಂ ಕೋಪದಿಂ ತ- |
ತ್ಪ್ರಸವಗೇಹವ ಪೊಕ್ಕು ಮಾಣದೆ |
ಮಸಗಿ ಗರ್ಜಿಸಿ ಗಂಡುಮಂ ಕೊಂಡಾಗಸಕೆ ನೆಗೆಯೆ ||

ಅಸದಳವೆನಿಪ ಮಿಥಿಳೆಯೊಳಗೆ- |
ಯ್ದಸದಳಂ ಹಾಹಾನಿನಾದಂ |
ಮುಸುಕಿದುದು ಶೋಕಾಂಧಕಾರಂ ಕೂಡೆ ಪುರಜನವು || ೩ ||

---

೧-೧ (ಗ) ಅೞುವುದು. ೨-೨ (ಕಖ) ಅರ್ಥಿಯ. ೩-೩ (ಗ) ಅಳ್ದಳ್ಗಳ. ೪-೪ (ಕಖ) ಪ್ರಸರ. ೫-೫ (ಕಖಗ) ಅಗಸಕ್ಕೊಗೆಯೆ. ೬-೬ (ಕ) ಜನಂ. (ಗ) ಜನಮುಂ.

ಎನೆ ಮುಳಿದು ದಶರಥನೃಪಾಲಂ |
ತನಗೆ ಶೋಕಂ ದುರ್ನಿವಾರಂ |
ಜನಕಪತಿಯದನುಟಿದ ಪರಿಯುಂ ಕೇಳ್ದು [೧]ಬೇಗದಲಿ[೧] ||
ಜನಯಿಸುತ್ತಿರ್ದಪುದು [೨]ದೇವಗೆ[೨] |
ಘನವೆನಿಪ ಶೋಕಾತಿರೇಕಂ |
ಜನನಿಜನಕರ ಖೇದಮಂ ಹವಣಿಸುವುದರಿಂದೆನಲು || ೪ ||

ದೇವ, ಸಕಳನಿಮಿತ್ತಶಾಸ್ತ್ರಕ- |
ಳಾವಿದಂ ಮತ್ತೊರ್ವನಾಗಳೆ |
ಪಾವನಾಕೃತಿ ಬಂದು ಜನಕಂಗೆಂದನಿಂತೆಂದು ||
ಆವ ಖೇದಂ [೩]ಬೇಡ ಮಹಾನು[೩]- |
ಭಾವನಾತನೆ ನಿನ್ನ ತನುಜನಿ- |
ಳಾವಿನುತಖೇಚರೇಶ್ವರನಾಗಿ [೪]ನಿನ್ನನೆ[೪] ಕಾಣ್ಬಂ || ೫ ||

ಎಂದನೇಕ ವಿನಾಣಮಂ [೫]ಪಲ- |
ವಂದದಿಂದಂ[೫] ಪೇಳ್ವುದುಂ ನೃಪ- |
ನೊಂದು ಮೂರ್ಛೆಯಿನೆಯ್ದೆ ಬಟಲ್ದ ವಿದೇಹಿದೇವಿಯುಮಂ ||
ಬಂದು ಸಂತೈಸಲು ಬಟಿಕ್ಕಾ- |
ನಂದದಿಂದಾಯಿರ್ವರುಂ ನಿಜ |
ನಂದನೆಯ ಸಲೆ [೬]ಜಾತಕರ್ಮವ[೬] ಮಾಡಿದರು, ದೇವಾ || ೬ ||

ಆತನೂಜೆಗೆ ಹತ್ತನೆಯ ದಿನ |
ಸೀತೆಯೆಂಬಾ ಪೆಸರನಿಟ್ಟು |
ಪ್ರೀತಿಯಿಂದಂ ಬಳೆಯಿಸುತ್ತಿರೆ ಬಳೆದು ವೈದೇಹೀ ||
ಶೀತದೀಧಿತಿಕಳೆಗಳಿಂದಂ |
ಶ್ರೀತನೂಜನೆ ಮಾಡಿದಾ ಸಂ- |
ಜಾತಕೌತುಕನಾಗಿ [೭]ಕನ್ನೆಯೆನಿಸಿದಳು ಕ್ರಮದಿಂ[೭] || ೭ ||

---

೧-೧ (ಗ) ಬೇಗದಿ. ೨-೨ (ಕಖಗ) ದೇವಗತಿ. ೩-೩ (ಕಖಗ) ಬೇಡ ನಿನಗೆ ಮ|ಹಾನು. ೪-೪ (ಕಖ) ನಿನ್ನ. ೫-೫ (ಕಖ) ಫಲವಂದದಿಂ. ೬-೬ (ಕಖಗ) ವಿಜಾತಕರ್ಮವ. ೭-೭ (ಕಖಗ) ಕನ್ನೆಯೆನಿಸಿದ ಕ್ರಮಕ್ರಮದಿಂ.

ಮಿಸುಪಶೋಕೆಯ ತಳಿರ ಕಾಂತಿಯಿ- |
ನಸಮಶರನೊದವಿಸಿದನಂತಾ |
ಕುಸುಮಕೋಮಳೆಯಡಿದಳಿರ್ಗಳ ಮಾಡಲಲ್ಲದೊಡೆ ||
ಎಸೆವ ಹವಳದ ಮಾಣಿಕದ ದೆಸೆ- |
ದೆಸೆಗೆ ಪಸರಿಸುವರುಣಕಿರಣವ |
ನೆಸುನಗುವ ಸುಕುಮಾರಕಾಂತಿಗಳೊಳವೆ ಜಗದೊಳಗೆ || ೮ ||

ಸರಸವರತರ ಪದ್ಮರಾಗಾ- |
ಧರೆಯ ಮಿಡಿಮೇಗಾಲ್ವೆರಳ್ಗಳ |
ಸುರುಚಿರಾಕಾರಮೆನೆ ಬಣ್ಣಿಸಲರಿದು ಫಣಿಪತಿಗೆ ||
ಎರಡು ಕಾಲಡಿಬೀಳ್ವೆರಡು ಬಲು |
ಸೆರಳುವೀರಯ್ದಾದುವೆನಗೀ |
ಧರೆಯ ಗೆಲಲೆಂದಂಗಜಂ ಹೊಂಗುವನಭಂಗತೆಗೆ || ೯ ||

ಸಾಹಸಂ ಬಣ್ಣಿಸುವೊಡಾವ್ಯೆ |
ದೇಹಿಗೊಪ್ಪುವ ಕಿಱುದೊಡೆಗಳಂ |
ಮೋಹಮಲ್ಲನ ಪಿಲ್ಲಣಿಗೆಯಂತೆಯ್ದೆ ರಂಜಿಪುದು ||
ಸ್ನೇಹದಿಂದಂ ರತಿಯ ಘನಕೌ- |
ತೂಹಳದೆ ಲಾವಣ್ಯರಸಸಂ- |
ದೋಹದಿಂ ಬೆಳೆಯಿಸಿದ ಕದಳಿಯ ಪೋಲ್ವ ತೊಡೆಗಳನು || ೧೦ ||

ಸರಸಲಾವಣ್ಯಾಮೃತಾಯತ |
ಶರದಮಳಪುಳಿನಸ್ಥಳಿಯವೋ- |
ಲುರುತರಂ ತಾನಾಗಿ ತೋರ್ಪ ನಿತಂಬಬಿಂಬವನು ||
ಸ್ಮರನ ವೈಯಾಳಿಪ್ರದೇಶಮೊ |
ಧರೆಯ ಚೆಲುವಿನ ಜನ್ಮಭೂಮಿಯೊ |
ಪಿರಿದನಱಿಯೆಂ ಬಣ್ಣಿಸಲ್ಕಾಂ ತನಗೆ ಸರಿ, ದೇವಾ || ೧೧ ||

---

೧-೧ (ಕಖ) ನಸುನಗುವ ಕುಮಾರ. ೨-೨ (ಕಖಗ) ಸರಳ್ಗಳೀರಯಾದುವು.

ಉರಗರಂ ಸಲೆ ಗೆಲಿದುದಕ್ಕಿದು |
ನರರನೆಲ್ಲರನಲೆದುದಕ್ಕಿದು |
ಸುರರನಂಡಲೆದುದಕ್ಕಿದೆಂದೀ ಮೂಱುಲೋಕವನು |
ತರದೆ ಕುಸುಮಸರಲ್ಗೆ ಗುರಿ ಮಾ- |
ಡಿರದೆ ಕಾಮನೆ ಬರೆದನೆಂಬಂ- |
ತಿರೆ ತರುಣಿಯ ತ್ರಿವಳಿರೇಖೆಗಳೆಸೆವುವವನಿಜೆಯ || ೧೨ ||

ಸ್ಮರನ ಕಬ್ಬಿನ ಬಿಲ್ಲಿದೆಂಬಂ- |
ತಿರೆ ಹಿಡಿಯ ನಡು ನಡುಗುವಂತಾ |
ತರುಣಿರತ್ನದ ನಡುವೆ ಕಣ್ಗೊಳಿಪುದು ಜನದ ಮನಕೆ ||
ಸುರಭಿಸರ ಮದಕರಿಯ ಸುರುಚಿರ |
ತರವೆನಿಪ ಮದರೇಖೆಯೆಂಬಂ- |
ತಿರೆ ವಿರಾಜಿಪ ರೋಮರಾಜಿಗಳಳವೆ ಬಣ್ಣಿಪೊಡೆ || ೧೩ ||

ಎನಗೆ ಪರಿ ಗಡ ಚೆಲುವಿನಿಂದಾ |
ತಹಗೆ ಪರಿ ಗಡ ಚೆಲುವಿನಿಂದಾ |
ನೆನುತೆ ಜೃಂಭಿಸುತೊಂದನೊಂದಾಕ್ರಮಿಸಿ ತನಿಗೊಬ್ಬಿ ||
ಮನಸಿಜನ ಮದರದನಿಕುಂಭವ- |
ನನುಕರಿಸಿ ಬೆಟ್ಟಿದವು ಬೆಟ್ಟದ- |
ವೆನಿಸಿ ಸುದತಿಯತುಳಪಯೋಧರವೆನಿಸಿಯವನಿಜೆಗೆ || ೧೪ ||

ಸಾರತರ ಮಾಂಸಲಮೃದುಲಸುಕು- |
ಮಾರಸುಸ್ನಿಗ್ಧಂಗಳೆನಿಸಿದ |
ಬಾಹುಚಂಪಕಮಾಲೆಗಳೆ ತಾನಾದವೋಲೆನಲು ||
ಧಾರುಣೀಸುತೆಯೆಸೆವ ಭುಜಲತೆ |
ಧಾರುಣಿಗೆ ಕೌತುಕಮನೀವುದು- |
ದಾರ ಗಂಭೀರಾಕೃತಿಯ ಗುಣಧಾರ ರಘುವೀರ || ೧೫ ||

---

೧-೧ ( ಕಖ ) ಕುಸುಮಶರಂಗೆ. ೨-೨ ( ಕಖಗ ) ಸುಖಶೀತಳ.

ಅಸಮಬಾಣನ ನನೆಗಣೆಗಳಂ- |
ತೆಸೆವ ಸರಳಾಂಗುಳಿಗಳುಂ ರಂ- |
ಜಿಸುವ ಕೇದಗೆಯೆಸಳ್ಗಳಿನೆ [೧]ಕುಡಿವಿಡಿದುಗುರುಗಳು[೧] ||
ಕುಸುಮಚಾಪನ ವಿಜಯಶಂಖಮೆ- |
ನಿಸಿ ವಿರಾಜಿಪ ಕಂಬುಕಂಠಂ |
ವಸುಮತೀಸುತೆಗಲ್ಲದದಾರ್ಗುಂಟಿ ಧರಿತ್ರಿಯೊಳು | || ೧೬ ||

ಸರಸಕುಸುಮಾಯುಧಸುಧಾರಸ- |
ಭರಿತರುಚಿರಾರುಣಮಣಿಯ ಸುರು- |
ಚಿರಕರಂಡಕದಂತೆ ಕಾಂತಿಯು [೨]ತಳಿದು ರಮಣೀಯುಂ[೨] ||
ತರದಿ ಬೆಳದಿಂಗಳ ಮೊಳೆಗಳಂ- |
ತಿರೆ ವಿರಾಜಿಪ ದಂತಪಂಕ್ತಿಗ- |
ಳರರೆ ಜಾನಕಿಗೊ[೩]ಪ್ಪುಗುಂ ರಾ[೩]ಣಿಮುಖದರ್ಪಣಕೆ || ೧೭ ||

ಕಂದಿ ಕುಂದುವ ದಂದುಗಕೆ ಸಲೆ |
ನೊಂದು ತತ್ಕಾಂತೆಯ ಮುಖೇಂದುವಿ- |
ನಂದಮಂ ಪಡೆಯಲ್ಕೆ ಹರನುರಿಗಣ್ಣ ಬೆಂಕೆಯುಮಂ ||
ಸಂದ ಮಂದಾಕಿನಿಯುಮಂ ಸಾ- |
ರ್ದಿಂದು ದುರ್ಧರಘೋರತಪದೊಳು |
ಮೊಂದಿಯುಂ ಸಮನಾದನಲ್ಲೆನೆ ಸತಿಯರಾಸತಿಗೆ || ೧೮ ||

ಚಕಿತ ಹರಿಣೀಲೋಲಲೋಚನೆ |
ವಿಕಚಚಂಪಕ ನಾ[೪]ಸೆಯುತ್ಪಳ-[೪] |
ಸುಕರಕರ್ಣೆ ಸರೋಜವದನೆ ಸುಖಸುರಸದಸದನೆ ||
ಮಕರಕೇತನರಾಜ್ಯಲಕ್ಷ್ಮೀ |
[೫]ಮುಕುಲಮಧು[೫]ಕರಲುಳಿತಕುಂತಳೆ |
ಸಕಲಶುಭಲಕ್ಷಣವಿರಾಜಿತೆ ದೇವಿವೈದೇಹೀ || ೧೯ ||

---

೧-೧ ( ಕಖಗ ) ಕುಳಿಗೊಂಡೆಸೆವುಗುರ್ಗಳು. ೨-೨ ( ಗ ) ತಳೆದದರ ಮಣಿಯುಂ. ೩-೩ ( ಕಖಗ ) ಒಪ್ಪುಗುಂ ಸಲೆ ರಾಣಿಮುಖ ದರ್ಪಣಿಗೆ. ೪-೪ ( ಕಖ ) ನಾಸಿಕವುತ್ಪಳ; ( ಗ ) ನಾಸೆವುತ್ಪಳ. ೫-೫ ( ಕಖಗ ) ಭ್ರಮರಮಧುಕರ.

ಹಲವು ಮಾತೇಂ ರಾಮಚಂದ್ರನ |
ಲಲನೆಯಾಗಲಿ ಯೋಗ್ಯ ಜನಕಂ |
ನಲಿದು ಪರಿಣಯನವನೆ ಮಾಡಲು ಸಂತಸದಿನಿರಲು ||
ಲಲಿತ ದೌವಾರಿಕನಿವೇದಿತ |
ವಿಲಸದಾತ್ಮೀಯಾಗಮನನಿರ- |
ದಲಘು ಗಮನದೆ ಬಂದು ಬಿನ್ನವಿಸಿರ್ದ ಚರನೊರ್ವಂ || ೨೦ ||

ದೇವ ನೆಲ ಬೆಸಲಾದ ತೆಱದಿಂ- |
ದಾವ ನೃಪರಂ ಬಗೆಯದುರ್ವಿಯ- |
ನಾವರಿಸಿ ವಿಜಯಾರ್ಧ[೧]ಹಿಮವದ್ಗಿರಿ[೧]ಗಳಂತರದ ||
ಭೂವಿದಿತವರ್ಧನಪುರಾಹ್ವಯ- |
ದಾವಿಷಯದೊಳು ಶಬರಶಿಬಿರವ- |
ತೀವವಿಸ್ತೃತವಿಪುಳದಲ್ಲಿ ಮಯೂರ[೨]ಮಾಲಿನೃಪಂ[೨] || ೨೧ ||

ಹೊಂಗಿ ನಿಜಭುಜ ಗರ್ವದಿಂದೆ ತ-|
ರಂಗತಮನೆಂಬಂ [೩]ತದೀಶಂ[೩] |
ತುಂಗವಿಕ್ರಮನೆಯ್ದೆ ಶಬರರ ಕೂಡಿಕೊಂಡಿಹನು ||
ಹೆಂಗಳಂ ಬಾಳಕರ ಮುಂದೆ ಪು- |
ರಂಗಳೆಲ್ಲವ ಕೆಡಿಸಿ ಕೊಲುತಂ |
ನುಂಗುವಂತಕನಂತೆ ಪೀಡಿಸುತಾಕ್ರಮಿಸುತಿರ್ದಂ || ೨೨ ||

ಭೂತಳವನಾಕ್ರಮಿಸುತೆಯ್ದೆ ಕ- |
ಪೋತಕಾಂಭೋಜಾದಿ ದೇಶವ- |
ನಾತುರದಿ ಸಲೆ ಕೆಡಿಸಿ ನಮ್ಮಯ [೪]ನಾಡಗಡಿಯಲ್ಲಿ[೪] ||
[೫]ಭೀತಿಯಿಂದಲಿ[೫] ಸಕಲಜನಮಂ |
ಭೀತಿಗೊಳಿಸುತ್ತಿರ್ದಪಂ ಜಗ- |
ತೀತಳದೊಳಿದಿರಿಲ್ಲ ತನಗೆಂ[೬]ದೆಂಬನವನಿರಲು[೬] || ೨೩ ||

---

೧-೧ ( ಕಖಗ ) ಹಿಮಗಿರಿ. ೨-೨ ( ಕಖಗ ) ಮಾಲಿಯೆನಿಪಂ. ೩-೩ ( ಕಖ ) ತದೇಶಂ. ೪-೪ ( ಕಖ ) ನಾಡಗಡಿಯಂ. ೫-೫ ( ಕಖಗ ) ಎಂಬನವನೆನಲು.

ಬಹುಮದಾಟೋಪದೊಳೆ ಸಿಂಹದ |
ಗುಹೆಗೆ ಕರಿಕಳಭಂಗಳೆಯ್ತು- |
ಪ್ಪಹಿಗಳೆಲ್ಲಂ ನೆರೆದು ಗರುಡನ ಮುತ್ತಲೆಯ್ತುಪ್ಪ ||
ಸಹಜದಿಂದಂ ಶಬರನಾಯಕ- |
ರಹುದು ತಾಂ ತೊದಳೇನೊ ಬಂದರು |
ವಿಹಗಕೋಟಿಗೆ ಬಿದ್ದನಿಕ್ಕುವೆ ನಾನವಂದಿರನು || ೨೪ ||

ರಸೆಯನಾವರಿಸಿತ್ತು ಹತ್ತುಂ |
ದೆಸೆಯನೆಲ್ಲಂ ತೀವಿತಮರಾ- |
ವಸಥಮಂ ಪೊತ್ತೆತ್ತಿತೆತ್ತಂ ಪರ್ವಿತುರ್ವರೆಯಂ ||
ಅಸುಹೃದವನೀಪಾಲಕಶ್ರೀ- |
ವಿಸರದುರುತರಗರ್ವಮಂ ಪಾ- |
ಲಿಸುತೆ ನೆಗೆದುದು ಜನಕಭೇರಿಯಭೂರಿಭೋಂಕಾರಂ || ೨೫ ||

ಅಂತು ಚರನಿಂ ಕೇಳ್ದು ಮುಳಿದ ಕೃ- |
ತಾಂತನಂತಿರೆ ಬರಿಸಿ ಚಾತು- |
ರ್ದಂತಮಂ ನಿಜವಿಜಯಗಜಮಂ ಜನಕಪತಿಯೇಱಿ ||
ಸಂತಸದೆ ಪೊಱಮಟ್ಟು ಮಿಥಿಳೋ- |
ಪಾಂತದೊಳು ಹೊಱಬೀಡುಬಿಟ್ಟ- |
ತ್ಯಂತ ಕಡುಪಿಂ ನಡೆಯೆ ಪಯಣದ ಮೇಲೆ ಪಯಣವನು || ೨೬ ||

ಕಡಲ್ಗಳುಪ್ಪಯಣಕ್ಕೆ ಸಲ್ಲವು |
ಗುಡಿಯಗೂಂಟಕ್ಕಡವಿ ನೆಱೆಯವು |
ಬಿಡುವೆಡೆಗೆ ನೆಱೆಯದು ಪೊಡವಿ ಗಿರಿ ನೆಱೆಯವೊಲೆಗಲ್ಗೆ ||
ಪಡೆಯ ಕೆಂಧೂಳಿಂಗೆ ಗಗನದಿ | *
ಬಿಡದೆ ಕದಡಿತು ತಡಿಯ ಕೆಸರೊಳು |
ನಡೆವ ರವಿತುರಗಂಗಳಾಱವು ಖುರವ ಕೀಳಲ್ಕೆ * || ೨೭ ||

೧-೧ (ಕಖಗ) ರಹುದು ತೊದಳೇನೊ. ೨-೨ (ಕಖಗ) ಒಲೆಗಲ್ಲ.

* ಇಲ್ಲಿ ಗ್ರಂಥಪಾತವಾದಂತೆ ತೋರುತ್ತದೆ.

ತರತರದೆ ಪಿಂಛಾತಪತ್ರಂ |
ಪಿರಿದು ತಮಮಂ ಮಾಡೆ ಶಸ್ತ್ರೋ- |
ತ್ಕರಕಳಿತ [೧]ತೀವ್ರಾಂಶು[೧] ತಗ್ಗಿಸೆ ರವಿನಿವಹದಂತೆ ||
ತುರಗಖುರವೊದವಿಸಲು ಧೂಳಿಯ |
ಕರಿಘಟೆಯ ಮದಧಾರೆ ಕೆಡಿಸಲು |
ಹರಣಭರಣಕ್ಷಮತೆಯಂ ತೋಱಿತ್ತು ಚತುರಂಗಂ ||೨೮||

ಕವಿಯ ಕೇಱಿನ [೨]ವಾರುವ[೨]ದ ಬ- |
ಲುವಿಲ್ಲ ನಾಕದ ಸೂತ್ರಿಕೆಯ ಕೊಂಡೆಯ |
ವಿವಿಧ ಕಡಿವಾಣಗಳ ಚೌರಿಯ ಜೋಡು ಹಕ್ಕರಿಯ ||
ಹವಣುಗಳಿದ ತುರಂಗಕೋಟಿಗ- |
ಳವಯವದಿ[೩]ನೊಯ್ಯಾರದಿಂ ತಳ[೩]- |
[೪]ರ್ದುವು [೪]ತರದೆ ರಣರಸಿಕರೆನಿಸಿದ ರಾಯರಾವುತರ ||೨೯||

ಹೊರಜೆ ಹೊಕ್ಕುಳಿ ಗಂಟೆ ಡಕ್ಕೆಯ |
[೫]ಪರಿಪರಿಯ ಗುಱಿದಾನೆ[೫]ಕಾರರ್ |
ಬಿರುದಜೋದರ್ಮುನ್ನಣೆಯ ಮಾವಂತರಿಂದೆಸೆದು ||
ಸುರಿವ ಮದಧಾರೆಗಳ ಬಲ್ಸರಿ |
ಧರೆಯ ಪಂಕಿಳವಾಗಿ ಮಾಡಲ್ |
ಕರಿಘಟೆಗಳಿರದೆಯ್ದೆ ತಳರ್ದುವು ಕುಲ[೬]ಗಿರಿಗಳಂ[೬]ತೆ ||೩೦||

ಮಿಳಿರೆ [೭]ಹಳವಿಗೆಯೆಸೆ[೭]ವ ಸಾರಥಿ |
ತಳರೆ ಹಯತತಿಯವನಿಪಾಲರು |
ಹಲವು ಪರಿಯಾಯುಧವ ತೀವಿ ಮಹಾಜಿಲಂಪಟರು ||
ಬಳವದಹಿತ ಪತಾಕಿನಿಯನ- |
ಗ್ಗಳಿಕೆಯಿಂದಂ ಮುತ್ತುವುಜ್ಜುಗ- |
ವಳವುಗಳಿಯೆ ರಥವು ನಡೆದವತಿರಥಮಹಾರಥರ ||೩೧||

೧-೧ (ಕಖ) ತಿಪ್ರಾಂಶು. ೨-೨ (ಕಖಗ) ಬಾರೆಹದ. ೩-೩ (ಕಖಗ) ಒಯ್ಯಾರವೆನಿಸಿದತಳ. ೪-೪ (ಕಖಗ) ರ್ದವು ತರತರದೆ. ೫-೫ (ಕಖ) ಪರೆಯ ಗೂಳ ಆನೆಕಾಱ್ರ. ೬-೬ (ಗ) ಗಿರಿಗಳೆಂಬಂತೆ. ೭-೭ (ಗ) ಹಳವಳಿಗೆಸೆವ.

ಪರಿಪರಿಯ ಕೈದುಗಳ ಯಮನನು- |
ಚರರ ಕಡುಪಿನ ಸುಭಟಕೋಟಿಗ- |
ಳಿರದೆ ತಮತಮಗೆಯ್ದೆ ಭಾಷೆಯ ಕುಡುತ ಬರೆ ಬಂದು ||
ಹರಿಕುಲಾಂಬರಭಾನು ನಿಜಸಿಂ- |
ಧುರವರಸ್ಕಂಧದೊಳು ನಿಂದಾ- |
ದರದೆ ಗರುಡವ್ಯೂಹಮಾಗಿರೆ ಮೋಹರಿಸಿ ಬಲವಂ || ೩೨ ||

ಅಂತು ಜನಕನೃಪಾಲಕಂ ದೂ- |
ರಾಂತರದೊಳಾಂತಿರ್ದ ಶಬರರ- |
ನಂತ ಚಾತುರ್ದಂತಮಂ ಪರಿಪರಿಯ ಹಳವಿಗೆಯಂ ||
ಮುಂತೆ ಕಂಡಂ ಕಡುಪಿನಿಂ ಕ- |
ಲ್ಪಾಂತಕಾಲದ ವಿಳ[೧]ಯಜಳಧರ- |
ದಂತೆ ಮೆಯ್ಯೆರ್ಚಿದ ತರಂಗತಮನ ಫಣಿವ್ಯೂಹ[೨] × || ೩೩ ||

ಯಮನ ಕುಳಿಕನ ಕಾಳರಾತ್ರಿಯ |
ತಮದ ಯಮುನಾವರತಟಾಕದ |
ಯಮ[೩]ಮಹಿಷೋದರಪ್ರಕಾರದ[೩] ರಾಹುಕೇತುಗಳ ||
ಅಮಮ ನಡೆವ ತಮಾಳಕಾನನ |
ಸಮುದಯದ ವೋಲ್ವೀರಮುದ್ರೆಯ |
ತಮತಮಗೆ [೪]ಕೂಡಿರ್ದ[೪]ನಿತುವನಚರವಡೆಯ ಕಂಡು || ೩೪ ||

ನರಿಯ ಕಾಗೆಯ ಹುಲಿಯ ಗಿಡಗನ |
ಮರಿಯ ಹದ್ದಿನ ಠಿಕ್ಕೆಯಂಗಳ |
ಪರಿಪರಿಯ ಚೌರಿಗಳ ಬಿರುದಿನ ಬೀರರಡ್ಡಣದ ||
ಧರೆಯ ತೀವಿದ ಕಾರಿರುಳವೋ- |
ಲಿರದೆ ನಾಗವ್ಯೂಹಮಾಗಿರೆ |
ಧರಣಿಪತಿ ಜನಕಂ ಕಡುಪಿನಿಂ ಕಂಡನಾಬಲವಂ || ೩೫ ||

---

೧ (ಗ) ಗ. ೨-೨ (ಕಖಗ) ಫಣಿವ್ಯೂಹವನು. ೩-೩ (ಕಖಗ) ಯಮಮಹಿಷದರ್ಪಪ್ರಹಾರದ. ೪-೪ (ಕಖಗ) ಕೊಂಡೊರ್ದ.

ಆದರದಂತೆಡವಂಕ ಬಲವಂ- |
ಕದ ಚೌರಿಯಂ ಬೀಸಿ ಮೇಲ್ವಾ- |
ಯ್ವುದಕೆ ತನ್ನಯ ಸೇನೆಯುತ್ಸುಕನಾಗುತಿರ್ಪುದುವಂ ||
ಪದೆದು ನೋಡುತ್ತಿರ್ಪಿನಂ ಬಂ- |
ದೊದವಿದುತ್ಸವದಿಂದಲೋರ್ವಂ |
ಮುದದೆ ಗುಡಿವಿಡಿ^೧^ದಾಳುಗೆಯ್ತ್ತದಿನೆಂದ^೧^ನಿಂತೆಂದು || ೩೬ ||

ದೇವ ನಿನ್ನಳಿಯಂದಿರಂ ಧಾ- |
ತ್ರೀವಿನುತರಂ ರಾಮಲಕ್ಷ್ಮಣ |
ದೇವರಂ ದಶರಥನೃಪಾಲಂ ಕಳುಹೆ ಬಂದವರು ||
ಈ ವಿಜೃಂಭಿಪ ಸೇನೆಯೆಲ್ಲವ- |
^೨^ನೋವಿಸೆದುರಿಸುಱದೆ ತಱಿದಱಿವು^೨^- |
ದಾವಗಣ್ಯಂ ನಿನಗೆ ಹಿಡಿವಡೆ ಶಬರವಲ್ಲಭನ || ೩೭ ||

ಎನಲೊಡಂ ಸಂತಸದಿನಾಗಳು |
ಜನಪತಿಯ^೩^ವಂಗುಚಿತವಿತ್ತವ-^೩^ |
ನನುನಯದಿನಿತ್ತಲ್ಲಿ ಬಂದರು ರಾಮಲಕ್ಷ್ಮಣರು ||
ಎನುತುಮಿರ್ಪಿನಮಿತ್ತಲಂ ತಾ |
ವನಚರಮುೞಿದಾತರಂಗತ- |
ಮನ ಪಿಡಿದು ತಂದೊಪ್ಪಿಸಿದರಾಮಿಥಿಳೆಯಧಿಪತಿಗೆ || ೩೮ ||

ಬರೆ ತರಂಗತಮಂಗೆ ಜನಕಂ |
ಕರುಣದಿಂದಭಯವನೆ ಕೊಟ್ಟಾ- |
ದರದೆ ದಾ^೪^ಶರಥಿ ತಾಂ ಬಂದಿ^೪^ಲ್ಲಿರ್ದರೆನೆ ಮುದದಿಂ ||
ಧುರಕೆ ದಶರಥನೃಪತಿ ಸುತರಂ |
ಭರದೆ ಕಳುಹುಗುಮೆಂಬ ಶಂಕೆಯಿ- |
ನಿರದೆ ಕೆಟ್ಟುದು ಶಬರಬಲಮೆಂದೆಂದನು ಪುಳಿಂದಂ || ೩೯ ||

---

೧-೧ (ಕಖ) ಅಲುದೆಯ್ತ್ತಂದೆಂದ; (ಗ) ಅಲುಗೆಯ್ತ್ತದೆಂದ. ೨-೨ (ಕಖಗ) ನೋಯಿಸದಱಿದು ಱದೆ ತಱಿದರಿ. ೩-೩ (ಕಖಗ) ಅವಂಗಂಗಚಿತ್ತವ. ೪-೪ (ಕಖಗ) ದಾಶರಥಿಬಂದು.

ಎನಲೊಡಂ ಮಗಧೇಶನಾಗಳೆ ।
ಮನದೆಗೊಂಡೀ ರಾಮಲಕ್ಷ್ಮಣ- ।
ರನುಪಮಾನ ಪರಾಕ್ರಮದ ತೇಜದ ಪ್ರೌಢಪುಣ್ಯಗಳು ॥
ಅನುನಯದಿನಾಸ್ಥಾನದೊಳು ಸಲೆ ।
ವಿನಯ ವಿನಮಿತರಾಗಿ ಬಳಸಿದ ।
ಜನಕಮಂತ್ರಿಪಸಾಮ್ಯಸೇನಾವರರ ಮುಂದೆಂದಂ ॥ ೪೦ ॥

ಅವರು ಸಾಧಾರಣರೆ ಭರತ- ।
ಕ್ಕವತರಿಸಿದೆಂಟನೆಯ ಬಲಕೇ- ।
ಶವರು ದಶರಥತನುಜರಿಂತೀ ರಾಮಲಕ್ಷ್ಮಣರು ॥
ಅವರ ಹೆಸರಿಗೆ ಶಬರಸೇನಾ- ।
ನಿವಹ ಕೆಡುವುದಿದಾವ ಕೌತುಕ- ।
ವವರೆ ಭರತತ್ರಿಖಂಡಮಂಡಳಕಧಿಪತಿಗಳಲ್ತೆ ॥ ೪೧ ॥

ಧೈರ್ಯದಿಂದೌದಾರ್ಯದಿಂ ಗಾಂ- ।
ಭೀರ್ಯದಿಂ ಘನಶೌರ್ಯದಿಂ ನಿಜ ।
ವೀರ್ಯದಿಂದಾ ದಾಶರಥಿಗಳ್ಗಾರು ಸರಿಯಲ್ಲ ॥
ಕಾರ್ಯಮೆನಗಿದು ಕೊಟ್ಟೆನಾಂ ತಾ- ।
ತ್ಪರ್ಯದಿಂದಂ ಜಾನಕಿಯನಾ- ।
ಶ್ಚರ್ಯವಿಕ್ರಮ ರಾಮಚಂದ್ರಂಗಱಿದಿಹುದು ನೀವು ॥ ೪೨ ॥

ಎಂದು ನುಡಿದನು ಶಬರಪತಿಯಾ- ।
ನಂದದಿಂ ಬೀಳ್ಕೊಟ್ಟು ದೇಶವ- ।
ನೆಂದಿಗಂ ಬಾಧಿಸದ ತೆಱದಿಂದಾಜ್ಞೆಯಂ ಮಾಡಿ ॥
ಕುಂದಬಂಧುರಕೀರ್ತಿಯಿರದ- ।
ಲ್ಲಿಂದೆ ತಳರ್ದತಿ ಬೇಗದಿಂದಂ ।
ಬಂದು ಮಿಥಿಳಾಪುರದೊಳಗೆ ದೇವೇಂದ್ರಲೀಲೆಯೊಳು ॥ ೪೩ ॥

ಜನಕರಾಜಂ ರಾಮಚಂದ್ರಂ- ।
ಗನುನಯದೆ ಜಾನಕಿಯನಿತ್ತುದು ।
ಜನಜನಿತಮಾಗಿರಲು ನಾರದನಾನುಡಿಯ ಕೇಳ್ದು ॥

---

೧-೧ (ಕಖಗ) ಸರಿಯಿಲ್ಲೆಂದೆನುತ್ತಿರಲು.

ಮನದ ಕೌತುಕದಿಂದ ನಭದಿಂ |
ವನಜಮುಖಿಯಂ ನೋಡಲೆಂದಾ- |
ಮುನಿ ವಿದೇಹಿಯ ಸುತೆಯ ಕನ್ಯಾಮಾಡಕೆಯ್ತರಲು || ೪೪ ||

ಅಂತು ಬರೆ ವೈದೇಹಿ ಮುದದಿಂ |
ಕಂತುರಾಜನ ಮಂತ್ರದೇವತೆ- |
ಯಂತೆ ರನ್ನದ ಮಂಟಪದೊಳಿರೆ ಸಖಿಯರುಂ ತಾನುಂ ||
ಭ್ರಾಂತನಾರದನವರಮುಂದ- |
ತ್ಯಂತವಿಕಟವಿಕಾರಗಿರಿ ಕಂ- |
ಡಂತೆ ಭರದಿಂದೋಡಿ ಪೋಗಿಯೆ ಕದವನಿಕ್ಕಿದರು || ೪೫ ||

ಎನೆ ನಗುತ ದಶರಥನೃಪಾಲಂ |
ಮುನಿಗೆ ತನಗೇಕೀವಿನೋದಂ |
ವನಿತೆಯರ್ಕಳು ಬೋಳುಕಚ್ಚುಟ ಗುಂಡಿಗೆಯ ಕಂಡು ||
ಕನಲದಿರ್ಪರೆ ಮರುಳಮಾತಂ |
ನೆನೆಯಲೇಂ ಪೆಟ್ವೇಟ್ಟುವದಂ ನೀಂ |
ಮುನಿದು ಹೋದನೊ ಕಾಹಿನವರ್ಣ್ಗುಳ್ದರೊ ಜಡಿದು || ೪೬ ||

ತೂಗುತಂ ಕಡಿತಲೆಯನಾಗಳು |
ಬೇಗದಿಂ ಬರೆ ಕಾಪಿನವರಿರ- |
ದಾಗಸಕ್ಕೊಗೆದಂತೆ ಕೈಲಾಸಾಚಳೇಂದ್ರಕ್ಕೆ ||
ರಾಗಿ ನಾರದ ಪೋಗಿ ಕಡು ಬೆಂ- |
ಡಾಗಿ ತಾಂ ಮಾಡಿದಕೆ ತಾಂ ಬೇ- |
ಳಾಗಿ ತದ್ಗಿರಿವರದ ತಪ್ಪಲವನದೊಳಗವತರಿಸಿ || ೪೭ ||

ಪಳಕಿನೊಂದು ಶಿಲಾತಳದೊಳುರೆ |
ಬಳಲಿಕೆಯನಾಱಿಸಿ ಬಱಿಕ್ಕಂ |
ತಳೆದು ಮತ್ತಂ ಕೋಪಮಂ ದುರ್ಬುದ್ಧಿಯಿಂದಿರದೆ ||
ಲಲನೆಯಾಕೃತಿಯಿಂದೆ ಪಟಮಂ |
ಲಲಿತಮಾಗಿರೆ ಬರೆದು ರಾಗಾ- |
ವಿಳನೊಲಿದು ವಿದ್ಯಾಧರಶ್ರೇಣಿಗೆ ಭರದೆ ಪೋಗಿ || ೪೮ ||

೧-೧ (ಕಖಗ) ವನದೊಳವತರಿಸಿದಂ. ೨-೨ (ಕಖ) ವಿಳನಂದು.

ಅಳವಿಗಳಿದುದ್ಯಾನಚಯದಿಂ |
ತಳತಳಿಪ ಹೊಂಗೋಂಟೆಯಿಂ ಕ- |
ಣ್ಗೊಳಿಪ ವಿದ್ಯಾಧರನ ರಥನೂಪುರ[1]ಚಕ್ರವಾಳ[1] ||
ಪೊಳಲನಾಳ್ವ ವಿಯಚ್ಚರೇಶ್ವರ- |
ತಿಳಕನೆನೆ ನೆಗೞ್ದಂದುಗತಿಯು- |
ತ್ತಳಗುಮಾಗಿರ್ದೋಲಗಕ್ಕದ ಕೊಂಡು ಪುಗುತಂದಂ || ೪೯ ||

ಖಚರಪತಿಯಿರದಾತನಂ ಕಂ- |
ಡುಚಿತಭಕ್ತಿಯುಮಾಡಿ ಬಳಿಕಂ |
ಸುಚಿರತರತರಚಿತ್ರಪಟಮಂ ನಾರದಂ ಕೊಟ್ಟು ||
ಅಚಳಚಿತ್ತದೆ ನೋಡು ನೀನಿದ |
ಸುಚರಿತಂಗೆ ಭವತ್ತನೂಜಂ |
ರುಚಿರಕೋಮಳಪ್ರಭಾಮಂಡಳಗೆ [2]ತಕ್ಕಳಿನಲು[2] || ೫೦ ||

ಸಱಿಯನಿಟ್ಟಳವೞಿಕೆ ರೇಖೆಯ- |
ನಿಱಿಗೆ ಬಣ್ಣದ ಜಾತಿ ಭಾವದ |
[3]ನೆಱವಣಿಗೆಯಿಂ[3] ಬಲಿದ ನಿಪುಣತೆ ಕಣ್ಗೆಸೊಗಯಿಸಲು ||
ನೆಱೆದು ನೋಡುವ ಸಭೆಗೆ ರಸ ಕ- |
ಣ್ದೆಱೆಯೆ ಪಸರಿಸಿದಿಂದ್ರಧನುವಿನ |
ತೆಱದೆ ಮಣಿಭಿತ್ತಿಗಳೊಳದು ಪ್ರಜ್ವಳಿಸೆ ನೋಡಿದನು || ೫೧ ||

ಶತಮುಖನನುಳಿದಿರ್ದ ರಂಭೆಯೊ |
ವತನುವಂ ಬಿಟ್ಟಿರ್ದ ರತಿಯೋ |
ಶತದಳಾಕ್ಷನನಗಲ್ದು ರಂಜಿಸುತಿರ್ದ ಪದ್ಮಿನಿಯೊ ||
ಅತಿಕುತೂಹಳದಾಯಿಯೆನಿಪೀ- |
ನುತಯುವತಿರತ್ನಂ ದಿಟಂ ಮ- |
ತ್ಸುತಪ್ರಭಾಮಂಡಳನ ಕಂಠಾಭರಣಮೆನೆ ಯೋಗ್ಯಂ || ೫೨ ||

---

೧-೧ (ಕಖಗ) ಚಕ್ರವಾಳಪುರಂ. ೨-೨ (ಕಖಗ) ತಕ್ಕಳಿಯೊಂದು. ೩-೩ (ಕಖ) ನೆಱವಣಿಗೆಯರ; (ಗ) ನೆಱವಣಿಗೆಯ.

ಆರ ಮಗಳೆಂತೀಕೆಯೆಂದು ವಿ-
ಚಾರಿಸಲು ಖಚರಂಗೆ ನುಡಿದಂ |
ನಾರದಂ ಮಿಥಿಳಾಪುರಾಧಿಪ ಜನಕಭೂಭುಜನ ||
ನಾರಿಯೆನಿಪ ೧ವಿದೇಹಿಗಿಂತೀ೧- |
ಕೈರವಾಯತನೇತ್ರೆ ಪುಟ್ಟಿದ- |
ಳಾರಿಗಂಗನೆಯಾದೊಡಾತನೆ ಭರತದಧಿಪತಿಯು || ೫೩ ||

ಆತ ಭೂಚರ ಖೇಚರೇಂದ್ರ- |
ವ್ರಾತಕೆಯ್ದಧಿನಾಥಮಿದು ವಿ- |
ಖ್ಯಾತಮಿಂತಿದನಱಿಯದಿರಿ ನೀವೆಂದು ನಾರದನು ||
ಪ್ರೀತಿಯಿಂದಂ ಪರಿಸಿ ಪೋಗಲು |
ನೀತಿವಿದರ್ಗಿರದಿಂದುಗತಿಯಂ |
ತಾತನೆಂದುದನಱಿಪೆ ಸೀತೆಯ ತಹುದುವೆನಲವರು || ೫೪ ||

ಕುಡದೆ ತಂದಡೆ ಖಚರಕುಲಮಂ |
ಬಿಡದು ದುರ್ಯಶವಾವಪರಿಯಿಂ |
ಕುಡರು ನೀಚರ್ಭೂಚರರ್ಖೇಚರ೨ಗೆ ಸುತೆಯರನು ||
ತಡೆಯದಿಂತಿದಕೇನುಪಾಯವು |
ನುಡಿಯಿಮೆನಲಿಂತೆಂದು ಸಚಿವ- |
ರ್ನುಡಿದರಿಲ್ಲಿಗೆ ಜನಕನಂ ತರಿಸುವುದುಪಾಯದಲಿ || ೫೫ ||

ಎನೆ ಮನದೆ ಗೊಂಡಿಂದುಗತಿಯಿರೆ |
ವಿನಯದಿಂ ಮತ್ತೊರ್ವ ಖೇಚರ- |
ನನುನಯದಿನಿಂತೆಂದನಾಗಳು ಚಪಳಮತಿಯೆಂಬಂ ||
ಎನಗೆ ಬೆಸಸುವುದೀನಿಯೋಗವ |
ಜನಕನಿಲ್ಲಿಗೆ ಬಂದನೆಂದಿಹು- |
ದೆನುತ ತಳರ್ದಂ ಖಚರಪತಿಯಂ ಮುದದೆ ಬೀಳ್ಕೊಂಡು || ೫೬ ||

೧-೧ (ಕಖ) ವಿದೇಹಿಯಿಂದೀ. ೨ (ಕಖಗ) ರ್ಗೆ.

ವನಿತೆ ತನಗಂ ತಾನೆ ಧಾತ್ರೀ- |
ವನಿತೆಯಪ್ಪುದನಱಿದು ಕೌತುಕ- |
ವನೆ[೧] ತಳೆದು ಮುದದಿಂ ಪ್ರಭಾಮಂಡಳನಿರಲು ಭರದಿಂ ||
ಜನಕನಂ ತರಲಿತ್ತ ಸಭೆಯಿಂ |
ಘನಪಥಕ್ಕಾಚಪಳಗತಿ ವಿಂ- |
ಚಿನವೊಲೊಗೆದಿರದೆಯ್ದಿ ಬಂದಂ ಮಿಥಿಳೆಯುಪವನಕೆ || ೫೭ ||

ಬಂದು ಗಗನಾಧ್ವಶ್ರಮವನಾ- |
ನಂದದೊಳಗಿರ್ದಾತ ಕಳೆದಾ- |
ನಂದದಿಂದಂ ಕುದುರೆಗರ್ಥಿತನೆಂದಱಿದು ಜನಕಂ ||
ಕುಂದಮಂದಾರೇಂದುಚಂದ್ರಿಕೆ- |
ಯಿಂದ ನಿರ್ಮಿಸಿದಂದದಿಂ ಚೆ- |
ಲ್ವೊಂದಿರಲು ಕತ್ತಳನ ರೂಪಂ ತಳೆದನಾಖಚರಂ || ೫೮ ||

ಸಂದರವಿರಥದೆಸೆವ ಹಯಮೊ ಪು- |
ರಂದರನ ಮೇಣ್ತುರಗರತ್ನಮೊ |
ಎಂದು ಲೋಕಂ ನೋಳ್ಪ ಚೆಲುವಂ ತಳೆದು ಮುಳಿದಂತೆ ||
ಬಂದು ಪುರಮಂ ಪೊಕ್ಕು ಜನಮಂ |
ಚೆಂದಚೆಂದದಿ ಕಾಡುತಂ ಕಡು- |
ಪಿಂದ ಸೂಕಳತೆಯನೆ ಕೈಕೊಂಡೆಯ್ದಿ[೨]ತವರವರಂ || ೫೯ ||

ಹೊಳೆವ ದುಂಡಿಸುವೊತ್ತುವೆತ್ತುವ |
ಮಲೆವ ಹೋಗದೆ ನಿಲುವ ಮೆಯ್ಯಂ |
ಬಲಿವ ಹೊಯ್ಲಂ ಮೇದು ಸುಯ್ಲಂ ನುಂಗವುರವಣಿಪ ||
ಮುಳಿವ ಘೋಳಿಗೆಯಿರ್ದ ತಾವಿಂ |
ತೆಳರದಿರ್ಪ ಕಡವುಗಳ ಬಿಡ- |
ದಳಲಿಸುವ ಸೂಕಳತೆಯಂ ಕೈಕೊಂಡುದಾತುರಗಂ || ೬೦ ||

೧ (ಕಖಗ) ವೆನೆ. ೨-೨ (ಗ) ನೀಲದೆಯಿದ್ದ ಬಂದು. ೩ (ಗ) ಯ್ದ.

ಎಲೆಲೆ ಸಾರ್ಸಾರೆಯ್ದುದೆಯ್ದು[ ದು ][1]।
ತೊಲಗು ತೊಲಗಿತ್ತಿತ್ತ ಬಾಬಾ।
ನಿಲು [ನಿಲೆಬ್ಬೆಬ್ಬುಗು][2] ಕೂಗೆಂದೆಂಬ ಪುರಜನದ ||
[ ಕಳಕಳವ ][3] ಕೇಳಿರದೆ ಜನಕಂ |
ಬಳಸಿ ಬರೆ ವಾಹಕನೃಪಾವಳಿ।
[ ತುರಗಮಂ ][4] ತಾ ನೋಡಲೆಂದರಮನೆಯ ಪೊಱಮಟ್ಟಂ || ೬೧ ||

ಧರಣಿಪತಿಯೆೀಟ್ಟಂದು ನೋಡು- |
ತ್ತಿರೆ ತುರಗವಾಕ್ಷಣದೊ[ಳಗೆ] ತ- |
ನ್ನರವಣೆಯನುಱಿದುದು ಸಮೀಪದ ವಾಹಕರ್ಪಿಡಿದು ||
ಭರದೆ [5]ಕಡಿಯಣವಿಕ್ಕಿ[5] ಹಲ್ಲಣಿ-।
ಸಿರದೆ [6][ಗುಂಥಾಗುಂಥಿನಿವಳಿಯ][6]- |
ನಿರದೆ ಚಿತ್ತವಿಸೆಂದು ತೋಱಿದರೇಱಿ ಕುದುರೆಯನು || ೬೨ ||

ಇದಱ ಚೆಲುವಿಂತಿದಱ [7]ಪರಿಯಿಂ- |
[7]ತಿದಱ ಸುಱಿಯಿಂತಿದಱ ಲಕ್ಷಣ- |
ವಿದಕೆಯುಂಟಿದು ಸೂಕಳವೆ ಗೆತ್ತಿರ್ದೆವಿನ್ನೆವರಂ ||
ಇದು ನವಗೆ ವಾರುವವಿದಂ ಪು- |
ಣ್ಯದೊಳೆ ಕಂಡೆವು ಕೊಂಡು ಪೋಗೊ-।
ಯ್ದಿದನಿರದೆ ವಾರುವದ ಮಂದಿರದಲ್ಲಿ ಕಟ್ಟಿದನು || ೬೩ ||

ಎಂದು ನಿಯಮಿಸಿ ಪೋಗೆ ಮಱುದಿನ- |
ದಂದು ಮತ್ತೊಂದಾನೆಯಂ ಭರ- |
ದಿಂದೆ ನೋಡಲ್ಪೋಗಿ ಬರುತಾಮಾಯದಶ್ವವನು ||
ತಂದು ತೋಱೆ ನೃಪಾಲನದನಾ- ||
ನಂದದಿಂದಿರದೇಱಲೊಡನ- |
ಲ್ಲಿಂದ ನಿವಳಿಯ ನೆವದೆ ಗಗನಕ್ಕೊಯ್ದುದದು ದೇವ || ೬೪ ||

---

೧ ( ಕಖಗ ) ದೆ. ೨-೨ ( ಕಖಗ ) ನಿಲೆಬ್ಬೆಬ್ಬು ಕೂಗು. ೩-೩ ( ಕಖಗ ) ಕಳವಳಿಸಿ. ೪-೪ ( ಕಖಗ ) ಕುದುರೆಯಂ. ೫-೫ (ಗ) ಕಡಿಯಾಣ. ೬-೬ ( ಕಖ ) ಗುಂಥಾಗುಂಥಿಗಿವಳಿಯ; (ಗ) ಗುಂದಾಗುಂದಿನಿವಳಿಯ. ೭-೭ ( ಕಖ ) ಆರೆಗ । ಳಿ; ( ಗ ) ಆರೆಗಿ ।ಳಿ.

ಬಲುಹು ವಾಘೆಯ ವಾಘೆಯೆಚ್ಚಱು |
ತಳೆದ ಕೂರಸಿ ಬೆರಳ ಚಮ್ಮಟಿ |
ಚೆಲುವ ಬೈಸಿಕೆಯಂಕವಣಿಯವದಾನಮೆಸೆದಿರಲು ||
ಜಲದ ಪಥದೊಳು ನಡೆವ ಶಕ್ರನ |
ಗೆಲುವ ರೇಖಾಯ್ದತೆಯೊದವಿಸಿರೆ |
ಸಲೆ ಕುದುರೆಯೊಡನೆಱಗಿ ತಂದಿರೆ ಪೋದನಂಬರಕೆ || ೬೫ ||

ಸುರನೊ ಮೇಣ್ ಖೇಚರನೊ ಜನ್ಮಾಂ- |
ತರವಿರೋಧಿಯದೊರ್ವನಿಂತೀ- |
ತುರಗವೇಷದೆ ಬಂದು ನೃಪನಂ ಕೊಂಡೊಯ್ದನೆಂದು ||
ಪುರಜನಂಗಳು ಬಾಯ ಬಿಟ್ಟಳು- |
ತಿರಲದೊರ್ವ ನಿಮಿತ್ತಕೋವಿದ- |
ನಿರದೆ ಬರ್ಪಂ ಜನಕನೆನುತಂ [೧]ಕಳೆದನವರೞಲಂ[೧] || ೬೬ ||

ತುರಗವಿತ್ತಲು ಜನಕಪತಿಯಂ |
ತ್ವರಿತದಿಂ ಕೊಂಡೊಯ್ದು ವಿದ್ಯಾ- |
ಧರವಿಷಯದೊಳಗೆ ರಥನೂಪುರಚಕ್ರವಾಳಕ್ಕೆ ||
[೨][ಪುರವರದ][೨] ಬಹಿರುಪವನದೊಳವ- |
ತರಿಸಿ ನಿಂದಿರಲಾವಸಂತನ |
ಪರಿಯೊಳವ ವನವೀಧಿಯೊಳು ಬಂದಿೞಿದನಾಹಯವ || ೬೭ ||

ಎಳೆಯ ಮಾಮರದಡಿಯೊಳೊಯ್ಯನೆ |
ಕಳೆದು [೩][ತಳೆದಂ][೩] ಶಾಂತಿಯಂ ತ- |
ನ್ನೊಳೆ ವಿಚಾರಿಸಿ ದಾರುಣದ ಸಂಸಾರದುಃಸ್ಥಿತಿಯ ||
ನಳಿನದಳಗತಜಳದ ವೊಲು........
[೪] .... .... .... .... ... ....[೪]

---

೧-೧ (ಗ) ತಳೆದನವಳಲಂ. ೨-೨ (ಕಖಗ) ಪುರಜನದ. ೩-೩ (ಕಖಗ) ತಳೆದು. ೪-೪ (ಕಖಗ) ೭೫ ಪದ್ಯಗಳ ವರೆಗೆ ಗ್ರಂಥಪಾತ.

ಮನದ ಕೋಪವನಱಿಯಲೀಯದೆ |
ಜನಕಪತಿಯಿಂತೆಂದನಾಗಳು |
ತನುಜೆಯಂ ರಾಮಂಗೆ ಕೊಟ್ಟಿಂ ದಶರಥಸುತಂಗೆ ||
ಜನಜನಿತಮಿದು ಮೀಱಿ ಕೊಟ್ಟಡೆ |
ಜನಿಯಿಸದೆಯಪಕೀರ್ತಿ ನೀನುಂ |
ಮುನಿಯದಿರು ನುಡಿದೆರಡುನುಡಿವನವಂ ನೃಪಾಲಕನೆ || ೭೬ ||

ಭರದೆ ಸನ್ಮತಿವೆಸರವಂ ಖೇ- |
ಚರನದೊರ್ವಂ ನುಡಿದನಾಗಳ್ |
[1]ತರುಣಿಯಾರಾದೊಡಂ[1] ಬೇಡರೆ ರಾಜಪುತ್ರಕರು ||
ಎರೆದೊಡಂತೀವುದೆ ವಿಚಾರಿಸಿ |
ದೊರೆಯಱಿದು ಕುಲವಱಿದು ವಿದ್ಯಾ- |
ಪರಿಣತೆಯನಱಿದೀವುದೆಂದಡೆ ಜನಕನಿಂತೆಂದ || ೭೭ ||

ಅವರ ಕುಲವಿಕ್ಷ್ವಾಕುವಂಶಂ |
ಭುವನಭುಂಭುಕಮಱಿಯಿರೆ ನೀ- |
ವಿವರಸಾಧಾರಣಪೂರುಷರು ರಾಮಲಕ್ಷ್ಮಣರು ||
ಅವನಿಪತಿದಶರಥನ ಸುತರಿಳೆ- |
ಗವತರಿಸಿದ ಬಲಾಚ್ಯುತರು ನೀ- |
ವಿವರನೇಳಿಸಬೇಡೆನಲು ಮುಳಿದಿಂದುಗತಿಯೆಂದಂ || ೭೮ ||

[2]ಅರಿದು[2] ಮಾತೇಂ ಖೇಚರಭೂರ್- |
[3]ಚರರ್ಗೆನಿಪ್ಪ[3] ನುಡಿಯ ಪಟ್ಟಾಂ- |
ತರವನಱಿಯದೆ ಪಕ್ಷಮೇನೆನೆ ಜನಕನಿಂತೆಂದಂ ||
ಪುರುಜಿನಾದಿಗಳಾದಿತೀರ್ಥೇ- |
ಶ್ವರರೊಳಂ ಭರತಾದಿಚಕ್ರೇ- |
ಶ್ವರರೊಳಂ ಬಲವಾಸುದೇವರೊಳಾರು ಖೇಚರರು || ೭೯ ||

---

೧-೧ (ಕಖಗ) ತರುಣಿಯುರನಾರಾದೊಡಂ. ೨-೨ (ಕಖ) ಪಿರಿದು; (ಗ) ಪರಿದು. ೩-೩ (ಕಖ) ಚರಕೆನಿಪ್ಪೆ; (ಗ) ಚರಕೆನಿಪ್ಪ.

ಇಂದುಗತಿಯಿಂತೆಂದನಾಗಳು |
ದುಂದುಭಿಧ್ವನಿಯಿಂದೆ ಪಲಪಲ- |
ವಂದದಿಂ ನುಡಿದಧಿಕವನು ಮೆಱೆಯಲ್ಕೆ [೧]ನೀ ವೇಡ[೧] ||
ಮುಂದೆ ಮತ್ತೊಂದಂ ನುಡಿಯದಾ- |
ನಂದದಿಂದೆದೆಗೊಂಡು ಕೇಳಿ- |
ನ್ನೊಂದೆ ನಮಗೆ ಪರೀಕ್ಷೆ ಭೂಚರ[೨]ಖೇಚರರ ಬಲಕೆ[೨] || ೮೦ ||

ಪುರುಜಿನೇಶ್ವರ ಸನ್ನಿಧಾನದೊ- |
ಳುರಗರಾಜಂ ನಮಿವಿನಮಿಗ- |
ಳ್ಗುರಗವಿದ್ಯಾಧಿಷ್ಠಿತಂಗಳನೆರಡು ಬಿಲ್ಲುಗಳ ||
ಭರದೆ ದೇವಂ ಕೊಟ್ಟನಾತನ |
ಗುರುಪರಂಪರೆಯಿಂದೆ ಬಂದುವು |
[೩]ನರರವಂ ಪಿಡಿದೆತ್ತಿ ಗೆಲೆ ಕೊಡು ಜಾನಕಿಯುನವರ್ಗೆ[೩] || ೮೧ ||

ಎನಲೊಡಂ ನುತ ರಾಮಚಂದ್ರನ |
ಘನಪರಾಕ್ರಮಮೆಲ್ಲಮಂ ಸಲೆ |
ಜನಕರಾಜಂ ಬಲ್ಲುದಱಿನೆದೆಗೊಂಡನೆಂದೆನಲು ||
ಕನಕಮಣಿಭೂಷಣವಸನವಾ- |
ಹನ ವಿವಿಧ ವಸ್ತುಗಳನೆಲ್ಲವ- |
ನನುನಯದೆ ಕೊಟ್ಟಾಖಚರಪತಿ [೪]ಕಳುಹಲುತ್ಸವದೆ[೪] || ೮೨ ||

ಭರದೆ [೫]ವಜ್ರಾವರ್ತಮಂ[೫] ನಿ- |
ಷ್ಠುರ ಹಲಾಯುಧರಾಜಿತಮನು- |
[೬]ದ್ಧುರುಗದಾ[೬]ನ್ವಿತ ಸಾಗರಾವರ್ತಮುಮನಿಂತೆರಡು ||
ಉರಗವಿದ್ಯಾರಕ್ಷಿತಂಗಳ- |
ನೆರಡು ಬಿಲ್ಲುಗಳಂ ತರಿಸಿ ಖೇ- |
ಚರ ಬಲಂಬೆರಸಿತ್ತು [೭]ಕಾಪಂ ಚಂ[೭]ದ್ರವರ್ಧನನಂ || ೮೩ ||

---

೧-೧ (ಗ) ನೀದೇವ. ೨-೨ (ಗ) ಖೇಚರಬಲಕ್ಕೆ. ೩-೩ (ಕಖ) ನರರದಂ ಪಿಡಿದೇಱ್ರಿ ಗೆದ್ದೊಡೆ ಜಾನಕಿಯುನವರ್ಗೇ; (ಗ) ನರರದಂ ಪಿಡಿದಿಱ್ರಿಸಿದೊರ್ಡೆ ಜಾನಕಿಯುನವರ್ಗೆ. ೪-೪ (ಕಖಗ) ಕಳುಹಲುತ್ಸುಕನಾದಂ. ೫-೫ (ಕಖಗ) ವಜ್ರಾವರ್ತಮುಮ. ೬-೬ (ಕಖ) ದ್ದುರಗದಾ; (ಗ) ದ್ಧರಗದಾ. ೭-೭ (ಕಖ) ರೋಷಂ.

ಇರದೆ ಮಿಥಿಳಾಪುರಕೆಯನಿತಂ |
ಬೆರಸು ಜನಕಕ್ಷಿತಿಪತಿಯನಾ- |
ದರದೆ ಕಳುಹಲು ಚಂದ್ರವರ್ಧನನೊಡನೆ ಮುದವೊದವೆ ||
ವರವಿಮಾನವನೇಱಿ ವಿದ್ಯಾ- |
ಧರಜನಾಧೀಶ್ವರನ ತೆಱದಿಂ |
ಮರಳಿ ಬಂದಂ ರಾಜಧಾನಿಗೆ ದೇವ ಮಿಥಿಳೇಶಂ || ೮೪ ||

ಪುರವ ಪೊಕ್ಕಾನಂದದಿಂ ಖೇ- |
ಚರಬಲವನುಪವನದೊಳಂದಾ- |
ದರದೆ ಬಿಡಿಸಲು ವಿದ್ಯೆಯಿಂದಂ ಚಂದ್ರವರ್ಧನನು ||
ಇರದೆ ನೆಲೆವೀಡಂ ಮಹಾವಿ- |
ಸ್ತರದೆ ಪೊನ್ನಿಂ ರನ್ನದಿಂದಂ |
ವಿರಚಿಸಿದವೊಲು ಮಾಡಿದಂ ಪ್ರಬಳರ್ಗೆ [1]ಪಿರಿದುಂಟೆ[1] || ೮೫ ||

ಮಿಸುಪ ಪಳುಕಿನ ಮಂಟಪದ ರಂ- |
ಜಿಸುವ ರತ್ನದ ವೇದಿಕೆಯು ಮೇ- |
ಲೊಸೆದು ಬಿಲುಗಳನೆರಡುಮಂ [2]ತಂದಿರಿಸಿ[2] ತಮ್ಮನಿತು ||
ಎಸೆವ ದಿವ್ಯಾರ್ಚನೆಗಳಿಂದ- |
ರ್ಚಿಸಿ ಖಚರಪತಿ ಪೇೞ್ದವೊಲು ರ- |
ಕ್ಷಿಸಿ ಬಳಸಿಕೊಂಡಿರ್ದುದುಂ ಮತ್ತಿತ್ತ ಮಿಥಿಳೇಶಂ || ೮೬ ||

ಅಂತಿರದೆ ಮಂತ್ರೀಜನಕೆ ಸಾ- |
ಮಂತಕೋಟಿಗೆ ಪರಿಜನಕೆ ಶು- |
ದ್ಧಾಂತಕಾಂತಾಜನಕೆ ಖೇಚರಲೋಕದಂದಮುಮಂ ||
ಸಂತಸದೆ ತಾಂ ಪೋದ ಘನವೃ- |
ತ್ತಾಂತಮಂ ಬಂದಂದಮಂ ಭೂ- |
ಕಾಂತನ[3]ಱಿಪಿಯೆ[3] ಬೆಸಸಿ ಬೞಿಕಂ ಗೃಹಮಹತ್ತರನಂ || ೮೭ ||

೧-೧ ( ಕಖಗ ) ತೀರದುದುಂಟೆ. ೨-೨ ( ಗ ) ತರಿಸಿ. ೩-೩ ( ಗ ) ಅಱಿಯೆ.

ಆಪುರದ ಬಹಿರುಪವನದೊಳಾ- |
ಚಾಪಯುಗಮಿಕ್ಕೆಲದೊಳಂ ಸುರ- |
ಚಾಪಮೆನೆ ಬಳಸಿರ್ದ ಮಣಿಮಯಪರಿಧಿಯಿಂದೊಳಗೆ ||
ಗೋಪುರಂಗಳ್ನಾಲ್ಕೆಸೆಯೆ ಧಾ- |
ತ್ರೀಪತಿಯ ಬೆಸದಿಂದ ರತ್ನಕ- |
ಳಾಪದಿಂದಾತಂ ಸ್ವಯಂವರಗೃಹವ ಮಾಡಿಸಿದಂ || ೮೮ ||

ಹಲವು ಪರಿಯ ಪತಾಕೆಯಿಂದಂ |
ಹಲವು ಚೌಪಳಿಗೆಗಳಿನವಱಿೊಳು |
ಹಲವು ಸಿಂಹಾಸನದಿನೊಪ್ಪುವ ರತ್ನಸಂಕುಳದಿಂ ||
ಹಲವು ಪರಿಯ ವಿತಾನದಿಂದಂ |
ಹಲವು ಮಣಿಪಂಚಾಳಿಕೆಗಳಿಂ |
ಹಲವು ಸುರಚಾಪಂಗಳೆಱಗಿತ್ತೆನಲು ಮಾಡಿಸಿದಂ || ೮೯ ||

ಅದು ಗೃಹಾಂಗಾಮರಕುಜಮೆ ಮಾ- |
ಡಿದುದೊ ವಿದ್ಯಾಧರರಚಿತಮೊ |
ತ್ರಿದಶಪತಿಯ ವಿವಾಹಗೇಹಮೊ ಮದನನಿರ್ಮಿತಮೊ ||
ಮುದದೆ ಲೋಕದ ಶೋಭೆ ತಾನೆ ನೆ- |
ರೆದುದೊ ನೇತ್ರಾಕರುಷಮೆಂತ್ರದ |
ಸದಾಗಾರಮೊ ಪೇೞಿನಲು ಮಾಡಿಸಿದನದನಾತಂ || ೯೦ ||

ಪುರುಕುಲದ ಕುರುಕುಲದ ವಿದ್ಯಾ- |
ಧರಕುಲದ ಶಶಿಕುಲದ ಯದುಕುಲ- |
ದುರುತರೋಗ್ರಕುಲದ ಧರಾಧೀಶ್ವರರು ಮೊದಲಾಗಿ ||
ವರಗೌಳ-ಪಾಂಚಾಳ-ಮಾಳವ- |
ತುರುಕಗುಜ್ಜರ-ತುಳುವ-ಖಗ-ಬ- |
ರ್ಬರ-ಕಳಿಂಗ-ಹಮ್ಮೀರರೆಲ್ಲ ಬಂದರಂತದಕೆ || ೯೧ ||

---

೧-೧ (ಕಖಗ) ಚಾಪಗಳಿಂದೆಱಗಿತ್ತೆನಲು. ೨-೨ (ಕಖ) ನೇತ್ರಾಕರ್ಷದ; (ಗ) ನೇತ್ರಾಕರುಷಣದ. ೩-೩ (ಕಖಗ) ವರಮಗಧಪಾಂಚಾಳ ಮಾಳವ। ಗೌಳಗುಜ್ಜರ ತುರುಕಕಳಿಂಗಖಗಬರ್ಬರ ತುಳುವಹಮ್ಮೀರರೆಲ್ಲಂ ಬಂದರಂತದಕೆ ||

ಇದನಱಿಪಲಿಂತಿಲ್ಲಿಗೆನ್ನಂ |
ಮುದದೆ ಮಿಥಿಳಾವಲ್ಲಭಂ ಕಳು- |
ಹಿದನೆನಲು ದಶರಥನೃಪಾಲನುದಾತ್ತರಾಘವನ ||
ವದನಕಮಳಮನಾಗಳೀಕ್ಷಿಸ- |
ಲದನಱಿದು ಲಕ್ಷ್ಮೀಧರಂ ಶಾ- |
ರದಶಶಾಂಕಾಂಶುಗಳನೇಳಿಸೆ ದಶನ[೧]ದೀಧಿತಿಯಿಂ[೧] || ೯೨ ||

ಬಿಲ್ಲನೇಱಿಸುಗುಂ ನಿಜಭ್ರೂ- |
ವಲ್ಲಱಿಯನೇಱಿಸುವ ತೆಱದಿಂ |
ಬಿಲ್ಲನೇಱಿಸಿ ಕಂತುರಾಜಂ ಭರದೆ ಜಾನಕಿಗೆ ||
ಇಲ್ಲಿ ದೇವರ ಮುಂದೆ ನುಡಿವುದ- |
ದಲ್ಲ ವಿನಯಂ ಕಾಣ್ಬುದೆಲ್ಲವ- |
ನಲ್ಲಿ ದೇವ, ಇದಾವಗಹನಂ ರಾಮಚಂದ್ರಂಗೆ || ೯೩ ||

ಮಣಿವಿಭೂಷಣಮಂ ನೃಪಾಲಾ- |
ಗ್ರಣಿಗೆ ಜನಕಚರಂಗೆ ಚಿತ್ತಂ |
ತಣಿವಿನಂ ಪೆದೆದಿತ್ತು ಬೀಡಾರಕ್ಕೆ ಬೀಳ್ಕೊಟ್ಟು ||
ಪ್ರಣಯಮಂ ರಾಮನ ವಿನಯಲ- |
ಕ್ಷ್ಮಣನ ವೀರಾಳಾಪಮೊದವಿಸೆ |
ಗುಣನಿಧಾನಂ ತಳರ್ದ*ನಲ್ಲಿಂ ವಾದಿಗಿರಿವಜ್ರಂ || ೯೪ ||

---

೧-೧ ( ಕಖಗ ) ದಿಧೀತಿಯಿಂ ನುಡಿದಂ. ಇಲ್ಲಿ ನುಡಿದಾ ಎಂಬ ಪದವು ಪ್ರತಿಮಾಡುವವರ ದೋಷದಿಂದ ಬಂದಂತೆ ತೋರುತ್ತದೆ. ಸ್ವಾಭಾವಿಕವಾಗಿ ಇಲ್ಲಿ "ನುಡಿದಂ" ಎಂಬ ಪದವು ಅಧ್ಯಾಹೃತವಾಗಿರಬೇಕು. ಅದು ಇರಲೇಬೇಕೆಂದು ಹೇಳುವುದಾದರೆ "**ಯಿಂ**" ಅಕ್ಷರವನ್ನು ಬಿಟ್ಟುಬಿಟ್ಟು ಅದರ ಮುಂದೆ "**ನುಡಿದಂ**" ಎಂಬ ಪದವನ್ನಿಟ್ಟುಕೊಂಡರೆ ಸಪ್ತಗಣಗಳಾಗುತ್ತವೆ.

# ೪ನೆಯ ಸಂಧಿ.

ರಾಗ---ನಾಟಿ. [೧]ಪರಿವರ್ಧಿನಿಷಟ್ಪದಿ.[೧]

ಮಿಥಿಳಾಪುರಕಾನಂದಮೊದವೆ ದಶ- |
ರಥನೊಡನನುಜತ್ರಯಸಹಿತಾಮನು- |
ಮಥಲೀಲೆಯೊಳೆಯ್ತಂದನು ರಾಮಕುಮಾರಾ | ಕೃತಶೃಂಗಾರಾ[೨] || ಪಲ್ಲವ ಪದ ||

ಶ್ರೀಕೌಸಲ್ಯೆ-[೩]ಸುಮಿತ್ರೆ-ಸುಸುಪ್ರಭೆ-[೩] |
ಕೈಕೆವೆರಸು ರಾಘವಲಕ್ಷ್ಮೀಧರ- |
ಲೋಕವಿನುತ[ರು] ಭರತಶತ್ರುಘ್ನರು ಸಹಿತಾನಂದಪಲಿ ||
ಭೂಕಾಂತಂ ಗಜ-ರಥ-ಹಯ-ಸುಭಟಾ- |
ನೀಕಮೆಸೆಯೆ ಕವಿಮುಖತಿಲಕಂ ಸುಪ- |
ತಾಕೆ ವಿರಾಜಿಸೆ ಬಂದನು ದಶರಥನಿರದೆ | ಮಿಥಿಳೆಗೆ ಭರದೆ || ೧ ||

ಪೊಟಿಲುಪವನದೊಳು ಬಿಡಹೇಟಿಯೆ ನಿಜ |
ಬಳಮಂ ಕತಿಪಯ-ಹಿತಜನಮಂ ಬೆಂ- |
ಬಳಿಯೊಳು ರಾಘವ-ಲಕ್ಷ್ಮಣ[ರು] ಭರತ-ಶತ್ರುಘ್ನರು ಬರಲು ||
ತೊಳಪ ಸ್ವಯಂವರ-ಗೋಪುರದೊಳಗಣ |
ಮಣಿಮಾಡದ ಮಂಟಪದಿಂ ಕೆಳಗಣ |
ಪಳುಕಿನ ಚೌಪಳಿಕೆಗೆ ದಶರಥನೃಪ ಬಂದ- | ನತಿ ಮುದದಿಂದ || ೨ ||

ಧಾರಿಣಿ ರೋಹಣಧಾತ್ರೀಧರದಿಂ |
ಮೇರುನಗಂ ಹರಿಚಂದನವನದಿಂ |
ವಾರಿಧಿ ವರುಣನಿನಂಬರಮಿನನಿಂದಿರುಳು ನಿಶಾಕರನಿಂ ||
ಹಾರಂ ಮಧ್ಯದ ನಾಯಕದಿಂ ವಿ- |
[ಸ್ತಾ[೪]]ರಿಸಿ ರಾಜಿಸುವಂತೆ ಸ್ವಯಂವರ* |
ಚಾರುಗೃಹಂ ರಾಜಿಸುತಿರ್ದುದು ಧಶರಥನಿಂ | ಜಿತಮನುಮಥನಿಂ || ೩ ||

---

೧-೧ ಚತುರ್ಮಾತ್ರಾಗಣಗಳು ಮೂರಾರನೆಯ ಪದಗಳಲ್ಲಿ ಆರೂ ಒಂದು ಗುರುವೂ ಅಂದರೆ ೨೬ ಮಾತ್ರೆಗಳಿರಬೇಕು. ಆದರೆ ಇಲ್ಲಿ ಆರನೆಯ ಪಾದದಲ್ಲ ೭ ಗಣಗಳು ಅಥವಾ ೨೮ ಮಾತ್ರೆಗಳಿವೆ. ಆದುದರಿಂದ ಇದು ನಿಯಮುವನ್ನುಲ್ಲಂಘಿಸಿದ ಹೊಸ ಮಾತ್ರಾವೃತ್ತವಾಗಿದೆ. ಇದಕ್ಕೆ **ಪರಿವರ್ಧಿನಿ**ಯೆನ್ನಬೇಕೋ ಎಂಬುದೊಂದು ಆಕ್ಷೇಪಣೆ. ೨-೨ ( ಗ ) ಕೃತಿ. ೩-೩ ( ಗ ) ಸುಮಿತ್ರೆ ಸುಪ್ರಭೆ. ೪ ( ಕಖಗ ) ಸ್ತ.

ಮಳಯಜಮೃಗಮದಘನಸಾರದ ಪರಿ- |
ಮಳಜಲಮಂ ಪಳುಕಿನ ಕೊಡದೊಳು ಕುಲ- |
ಲಳನೆಯರೊಲವಿಂ ತೀವಿಯನಂಗನ ಜಂಗಮಲತಿಕೆಯರು ||
ಬಳಸೆ ದಿಶಾಮುಖಮೆಲ್ಲಮುಮಂ ಮಂ- |
ಗಳತೂರ್ಯಧ್ವನಿ ಮಾಡಿದರುರು ಮಂ- |
ಗಳಸವನವನಿತ್ತಲು ಮುದದಿಂ ಜಾನಕಿಗೆ | ಜಿತಮೇನಕಿಗೆ || ೪ ||

ತಳತಳಿಸುವ ಮುತ್ತಿನ ಪುತ್ಥಳಿಯೆನೆ |
ಜಳಬಿಂದುವ ತಳೆದಿರೆ ತನುಲತೆಯಾ- |
ಗಳೆ ನಿಱಿಯ ದುಕೂಲದ ಹೊಸ ಸೀರೆಯ ಸೆಱಗಿನ ತೊಂಗಲಲಿ ||
ಲಳಿತಾಂಗಿಯರಾಗಳು ನಯದಿಂ ಕೆಂ- |
ದಳದರುಣಾಂಶು ಪಸರಿಸಲು ತೊಡೆದರು |
ಬಿಳಿದನುಡಿಸಿದರು ಕುಲಸತಿಯರು ಜನನುತೆಗೆ | ಜನಕನ ಸುತೆಗೆ || ೫ ||

ಪಳುಕಿನ ಪಟ್ಟವಣೆಯ ಮೇಲಿರದಾ- |
ಗಳೆ ಹಂಸಗಾಮಿನಿ[ಯು] ಕುಳ್ಳಿರೆ ಕುಲ- |
ಲಳನೆಯರಾಗಳು ಪಡೆದವಸರಮಂ ತಮತಮಗೆಯ್ತಂದು ||
ಲಳಿತಾಲಕ್ತಕರಸದಿಂದಡಿದಳಿ- |
ರ್ಗಳನಡಿಯೂಡಿದಳೊರ್ವಳು [ ತಾಂ ] ಬಂ- |
ದಳಿಕುಳಕುಂತಳೆಯೊಲಿದು ವಿದೇಹಿಯ ಸುತೆಯ | ಮನುಮುಥಲತೆಯ || ೬ ||

ತಳತಳಿಸುವ ಕೆಂದಳದರುಣದ್ಯುತಿ |
ಬಳಸಿದ ನಖಮಂಡಲದಿಂದೊಪ್ಪುವ |
[1 ನಳಿನಚರಣದೊಳು ]1 ತುಡಿಸಲು ಮುತ್ತಿನ ನೇವುರವನು ತಂದು ||
ವಿಲುಳಿತ ಸಂಧ್ಯಾರಾಗದ ತಾರಾ- |
ವಳಿ ವಳಯಿತಶಶಿರೇಖೆಯದೆನೆ ಕ- |
ಣ್ಗೊಳಿಸಿದ[ ಳಾ[2] ]ಗಳು ಹರಿಣೀಲೋಚನೆಸೀತೆ | ಸತಿವಿಖ್ಯಾತೆ || ೭ ||

---

೧-೧ ( ಕಖಗ ) ಚಳಿನನಳಿನದೊಳು. ೨ ( ಕಖಗ ) ರಾ.

ಉರುತರವೆನಿಪ ನಿತಂಬಸ್ಥಳದೊಳು |
ಸುರುಚಿರಮಣಿಮಯ-ರಸನಾ-ಸೂತ್ರಮಂ- |
ನಿರದೆ ತೊಡರ್ಚಿದಳೊರ್ವಳು [ಗಜ]-ಕುಂಭವ ಸುತ್ತುವ ತೆಱದಿಂ ||
ಗುರುಕುಚತಟದೊಳು ಪತ್ರಾಂಕುರಮಂ |
ಬರೆದಳನಂಗನ ಯಂತ್ರವ ಬರೆದಂ- |
ತಿರೆ ಮತ್ತೊರ್ವಳು ಸೀತೆಗೆ ಹರಿಕುಲಯುವತಿ | ಲಾವಣ್ಯವತಿ || ೮ ||

ಚಾರುಮುಖೇಂದುವನೋಲಗಿಸುವ ವರ- |
ತಾರಾಗಣಮೆನೆ ಸೇರುವೆವೆರಸಿದ |
[ಳೀ] ರಾಣಿಯು ಹೊಸ ಮುತ್ತಿನ ತ್ರಿಸರವ ಕೊರಳೊಳು ತಂದಿಕ್ಕಿ ||
ಸಾರತರಾಯತ-ಭುಜ-ಲತೆಯೊಳು ಕೇ- |
ಯೂರವನಂಗನೆ ಚಂದನಲತೆಯೊಳು |
ರಾರಾಜಿಪ ನಾಗಿಣಿಯೆನೆ ತೊಡಿಸೆ ಯುವತಿಗೆ | ರಾಮನ ಸತಿಗೆ || ೯ ||

ಸಿರಿಸದ ಮಾಲೆಯನಳಿಸಂಕುಲವಾ- |
ದರದಿಂ ಬಳಸಿದವೆನೆ ಮುಂಗೈಯೊಳು |
ಗರುಡೋದ್ಗಾರದ ಪಚ್ಚೆಯ ಕಂಕಣವೆರಡೆರಡಂ ತುಡಿಸಿ ||
ಸುರಭಿಶರನ ಸರಲಂದದ ಬೆರಳೊಳು |
ಸುರುಚಿರಮಣಿಮಯ-ಮುದ್ರಿಕೆಗಳ ಚ- |
ಚ್ಚರದಿಂದಿಕ್ಕಿದಳೊರ್ವಳು ಧಾತ್ರೀಸುತೆಗೆ | ಭಾಗ್ಯೋನ್ನತೆಗೆ || ೧೦ ||

ಸ್ಮರಮೋಹನಯಂತ್ರವ ಬರೆವಂತೆ ಮ- |
ಕರಿಕಾಪತ್ರವ ಬರೆದು ಕಪೋಲದೊ- |
ಳುರುತರಪಂಕಿಳಕುಂಕುಮದೊಳು ಮತ್ತೊರ್ವಳು ಮುದದಿಂದ ||
ವರಕರ್ಣಾಂತಾಯತಲೋಚನದೊಳು |
ಸರಸಾಂಜನಮಂ [ಸಲೆ] ನನೆಗಣೆ ಬಿ- |
ತ್ತರಿಸುವ ಹೊಗರಿನಲೆಚ್ಚಳು ಬಿಂಬಾಧರೆಗೆ | ಸೌಖ್ಯಾಕರೆಗೆ || ೧೧ ||

---

೧-೧ (ಕಖಗ) ಳಂಗಜ. ೨-೨ ಮದುವೆಯಾಗಿರದಿದ್ದರೂ ಸೀತೆಯು ರಾಮನ ಹೆಂಡತಿಯಾಗುವಳೆಂದು ಜಗತ್ಪ್ರಸಿದ್ಧವಾಗಿತ್ತು.

ಶರದಷ್ಟಮಿಯ ಸುಧಾಕರ-ಬಿಂಬದು- |
[ ದರದೊಳಗೊಪ್ಪುವ ] ನುಣ್ಗೆ ಱಿಯಂತಿರೆ ।
ಸುರುಚಿರ-ಮೃಗಮದ-ಬಿಂದು-ತಿಲಕವ ಲಲಾಟದೊಳೊಲಿದಿಟ್ಟು ॥
ವರಕರ್ಣಾಂತಾಯತಲೋಚನದೊಳು |
ಸರಿಯಿಡುವಂತಿರಲವತಂಸವುನಾ- ।
ದರದಿಂ ಕುವಳಯ-ಕುಸುಮವನಿಡೆ ಭೂಸುತೆಗೆ | ಮೋಹನಲತೆಗೆ ॥ ೧೨ ॥

ಸೊಗಯಿಪ ಮುತ್ತಿನ ತಲೆದುಡುಗೆಯ ಮ- |
ಲ್ಲಿಗೆಯ ತುಱುಂಬಿನ ಚೆಲ್ವತಿಶಯದಿಂ |
ನಗೆ ಘನಸಮಯದ ಮುಗಿಲೆಡೆಯೆಡೆಯಣ ಶಶಿತಾರಕೆಗಳನು ॥
[ ಮೃಗನಯನೆಯ ] ಮುಡಿಯಂ ಮತ್ತೊರ್ವಳು ।
ಬಗೆಗೊಳುವಂತಿರೆ ತಿರ್ದಿದಳೊಲವಿಂ- |
ದಗಣಿತಮೋಹಿಯನಂಗನ ಜಂಗಮಲತೆಯು | ಧರಣೀಸುತೆಯ ॥ ೧೩ ॥

ಇದು ಮನುಮಥನುನ್ಮದಸರಲೋ ಮೇ- |
ಣಿದು ರತಿಪತಿ ಧರಿಸಿದ ಮದನಾಸ್ತ್ರವೊ |
ಇದು ಕಾಮನ ನಚ್ಚಿನ ಮೋಹನಬಾಣವೊ ಲೋಕವ ಗೆಲೆವ ॥
ಇದು ಕಂತುವ ಸಂತಾಪನ ಕಾಂಡವೊ ।
ಇದು ಮದನವಶೀಕರಣಾಯುಧವೋ ।
ಇದು ದರ್ಪಕಧನುವೆನೆ ಕೈಗೆಯ್ದಳು ಸೀತೆ । ಜಗತೀಜಾತೆ ॥ ೧೪ ॥

ಭವನಾಗಲಿ ಹರಿಯಾಗಲಿ ಕಮಳೋ- |
ದ್ಭವನಾಗಲಿ ಯಾರಾದೊಡಮಾಗಲಿ ।
ಭುವನದೊಳಗೆನಗಿನ್ನಿದಿರಿಲ್ಲೆಂದತಿಗರ್ವದಿನಂಗಭವಂ ॥
ಕುವಳಯಮುಂ ತಾವರೆಯುಂ ದಕ್ಷಿಣ- ।
ಪವನನಿಂದುವಳಿಗಿಳಿಕೋಗಿಲೆಗಳ |
ನಿವಹದ ಕಳನಿಸ್ವನಮಂ [ ಛೀ ತೆಗೆ ] ಯೆಂದ- । ನತಿಮುದದಿಂದ ॥ ೧೫ ॥

೧-೧ ( ಕಖಗ ) ದರದೊಳೊಪ್ಪುವ. ೨-೨ ( ಕಖ ) ಮೃಗನುದನಯ; ( ಗ ) ಮೃಗ-ಮದ-ನಯನೆಯ. ೩-೩ ( ಗ ) ಮನುಮಥನನುಮದ. ೪-೪ ( ಗ ) ಗಜಗತಿಜಾತೆ. ೫-೫ ( ಕಖಗ ) ಸೀತೆ.

ಪರಿಣಯನಮುಹೂರ್ತದ ಲಗ್ನವಿಂದಾ- |
ದರದಿಂ ಬರಹೇೞ್ದನೆ ಜನಕಂ ಚ- |
ಚ್ಚರದಿಂ ಮಣಿಮಯರಥಮಂ ಚಾಮರದಡಪದ ಡವಕೆಗಳ ||
ಪರಿಚಾರಿಕೆಯರು ವೆರಸಿರದೇೞ್ಯೆ |
ಸರಸದ ಕೆಳದಿಯರ್ಬೈನೂರ್ವರು ಬರು- |
ತಿರೆ ಮಂಗಳದಾರತಿ[ಯ] ಸ್ವಯಂವರ-ಗೃಹಕೆ | ಶೋಭಾವಹಕೆ || ೧೬ ||

ಮದನಪತಾಕೆ ವಿರಾಜಿಸೆ ಕಂಚುಕಿ |
ಮುದದಿಂ ತನ್ನೊಡನೇೞ್ ಮನೋದ್ಭವ- |
ನುದಯಶ್ರೀಯೆನೆ ಬರಲು ಸ್ವಯಂವರಶಾಲೆಗೆ ಜನಕಸುತೆ ||
ಉದಯಿಸೆ ಚಂದ್ರಿಕೆ ಮಾಣದೆ ತೆರೆಮುಸ- |
ಗಿದ ಪಾಲ್ಗಡಲೆನೆ ರಾಜನ್ಯಕದ ಮ- |
ನದೊಳ[ಗು]ದಯಿಸಿತು [ಪ]ರಿಪ್ಲವತೆ ಭೂಸುತೆಯಿಂ | ಲೀಲಾನ್ವಿತೆಯಿಂ || ೧೭ ||

ಜಾನಕಿಯನುಪಮಲಾವಣ್ಯಸುರಾ- |
ಪಾನದೆ ಸೊಕ್ಕಿದ ರಾಜಸಮೂಹದ |
ನಾನಾವಿಧ ಚೇಷ್ಟೆಗಳಂ ನೋಡುತೆ ಕಂಚುಕಿ ನಸುನಗುತೆ ||
ಮಾನಿನಿಯೊಡಬರುತಿರಲೊರ್ವಂ ಸಂ- |
ತಾನಕೆ ಕುಸುಮುವನಿಕ್ಕುವ ತೆಱದಿಂ |
[ಪೀನಭುಜಕೆ ತುಱುಬಂ] ಸಾ[ವ]ಗಿಸಿದನಂದೆ | ಸೀತೆಯ ಮುಂದೆ || ೧೮ ||

ಐರಾವತಗಜಹಸ್ತದ ತೆಱದಿಂ |
ದೋರಂತೊಪ್ಪುವ ನಿಜಭುಜವಂಶಕೆ |
ಕೂರಸಿಯಂ ಕೈಮಾಡುವ ತೆಱದಿಂ ತೋಱಲು ಮತ್ತೊರ್ವಂ ||
ಹಾರವ ಸೈತಿಡುವಂತೆಯದೊರ್ವಂ |
ಭೂರಮಣಂ ತೋಱಿದನಾಗಳು ತ- |
ತ್ಕೈರವನೇತ್ರೆಗೆ ಮುದದಿಂ ವಕ್ಷಸ್ಥಳಮಂ | ದರ್ಪಾವಿಳಮಂ || ೧೯ ||

*೧ "ಸ್ವ" ಈ ಅಕ್ಷರವು ಶಿಥಿಲದ್ವಿತ್ವ. ೨ (ಕಖಗ) ಪಾ. ೩ (ಖ) ಯಂ. ೪ (ಖ) ಯಂ. ೫-೫ (ಕಖಗ) ಪೀನಭುಜಂ ರತ್ನದ ತುಱುಬಂ.

ಅವತಂಸಕ್ಕೆಳಸುವ ಘನಮಧುಕರ- ।
ನಿವಹವ ಸೋವಂತಿರೆ ಮತ್ತೊರ್ವಂ ।
ನವರತ್ನಾಂಗದ ಕಾಂತಿಯಿನೊದವಿಸೆ ಸುರಧನುವಂ ಸಭೆಗೆ ॥
ವಿವಿಧ-ಸಮರ-ವಿಜಯವನಱಿಪಲು ನೃಪ- ।
ಕುವರನದೊರ್ವಂ ಕಟಕವ ಸಾವಗಿ- ।
ಸುವ ನೆವದಿಂ ನಿಜ ವೀರವ್ರಜಮಂ ತೋಱಿ । ಕಾವಂ ಬೀಱಿ ॥ ೨೦ ॥

ಸೊಗಯಿಪ ಹೊಂಗೇದಗೆಯೆಸಳಂ ನಸು- ।
ನಗುವೆಲೆಯಂ ಪಿಡಿದೊರ್ವ ಕುಮಾರಂ ।
ಬಗೆಮಿಗೆ ಕರಿಯ ಕಳೆವ ತೆಱದಿಂ ^೧^ತನ್ನುಗುರೆ^೧^ ಚೆಲುವ ಮೆಱೆಯೆ ॥
ಮಗಮಗಿಸುವ ತನುಸೌರಭಕೆಳಸುವ- ।
ಳಿಗಳಂ ಸೋವಲು ಮತ್ತೊರ್ವಂ ಮೆ- ।
ಲ್ಲನೆ ಕನಲುತೆ ನೋಡಿದ ಚಾಮರಧಾರಿಣಿಯ । ಜಿತರೋಹಿಣಿಯ ॥ ೨೧ ॥

ಭರದಿಂ ನೆತ್ತದ ಹಾಸಂಗಿಯನಾ- ।
ದರದಿಂ ^೨^[ಹಾಕಿಯೆ]^೨^ ಹಿಡಿವತಿನೆವದಿಂ- ।
ದಿರದೊರ್ವಂ ಕೆಂದಳ-ಕಾಂತಿಗಳಿಂ ಮೆಱೆಯಲು ಮಾನಿನಿಗೆ ॥
ಸ್ಮರಮದಿರಾರಸಮತ್ತನದೊರ್ವಂ ।
ಪರಿಚಾರಿಕೆಯನೊದೆವ ನೆವದಿಂ ನಿಜ ।
ಚರಣದ ಕಾಂತಿಯನಂತಾಸಭೆಯೊಳು ಮೆಱೆದಂ । ಲಜ್ಜೆಯ ತೊಱೆದಂ ॥ ೨೨ ॥

ಮುದಮೊದವಿರೆ ಬಂದಾಕೆ *ಸ್ವಯಂವರ- ।
ಸದನದ ಮಧ್ಯದ ಚೌಪಳಿಗೆಯ ನೀ- ।
ಲದ ಕಂಬದ ಕೆಲದೊಳು ಸತಿಯರು ಸಹಿತಿರೆ ಜಾನಕಿಯಂದು॥
ಪದಪಿಂ ವಿದ್ರುಮಲತೆ ಬಳಸಿದ ಶಾ- ।
ರದ-ಲಕ್ಷ್ಮಿಯುಮಂ ತಾರಾವಳಿ ಬಳ- ।
ಸಿದ ಶಶಿಕಳೆಯಂ ಕಳೆಯೆನಿಸಿದಳಾಕಾಂತೆ । ರತಿಯೆಂಬಂತೆ ॥ ೨೩ ॥

---

೧-೧ (ಕಖ) ತನ್ನಂಗರ. ೨-೨ (ಕಖಗ) ಹಾಯಿಕಿ.

ಕೆಲಬರು ಸುೞಿಗುರುಳೊಳು ಸಿಲುಕಿದುವಂ |
ಕೆಲಬರು ಪೆೞ್ನೊಸಲೊಳು ನೆಲಸಿದುವಂ ।
ಕೆಲಬರು ನಯನೇಂದೀವರವನದೊಳು ಮೂಡಿ ಮುೞುಂಕಿದುವಂ ||
ಕೆಲಬರಧರಮಣಿಯೊಳ್ತಣಿಯದುವಂ |
ಕೆಲಬರು ಗಂಡಸ್ಥಳಕೆಳಸಿದುವಂ |
ಸಲೆ ನಯನಂಗಳನಾಱದೆ ತೆಗೆಯದೆ ನಿಲಲು | ಮದನಂ ಗೆಲಲು || ೨೪ ||

ಕೊರಳೊಳು ಕಕ್ಷಾಂತರದೊಳು ಘನಪೀ- |
ವರಕುಚದೊಳು ವಕ್ಷಸ್ಥಳದೊಳು ಬಂ- |
ಧುರನಾಭಿಯೊಳು ನಿತಂಬ[ದ] ಬಿಂಬದೊಳುರುತರಶಾಖೆಯೊಳು ||
ಸುರುಚಿರಜಾನುಗಳೊಳು ಗುಲ್ಫಂಗಳೊ- |
ಳರುಣಾಂಗುಷ್ಟಂಗಳೊಳಡಿದಳಿರ್ಗಳೊ- |
ಳಿರದಾಭರಣವೆನಲು ನೃಪಲೋಚನ ಮೆಱೆಯೆ | ಮನಸಿಜನಱಿಯೆ || ೨೫ ||

ಕೆಲಕೆಲಬರ್ಕೀಲಿಸಿದಂತಿರ್ದ- |
ರ್ಕೆಲಕೆಲಬರ್ಸ್ತಂಭಿಸಿದಂತಿರ್ದ- |
ರ್ಕೆಲಕೆಲಬರ್ಮೂರ್ಛಿಸಿದಂತಿರ್ದರ್ವಸುಧಾಪಾಲಕರು ||
ಕೆಲಕೆಲಬರ್ಪಾವಡರ್ದಂತಿರ್ದ- |
ರ್ಕೆಲಕೆಲಬರ್ನೆಯ್ದಿಲೆದಂತಿರ್ದ- |
ರ್ಗೆಲೆ ಚಿತ್ರದ ಸಭೆಯಂ ಸಭೆ ಜಾನಕಿ ಪುಗಲು | ರತಿಯಂ ಮಿಗಲು || ೨೬ ||

ಒರ್ವಂ ಮೂರ್ಛೆಯಿನೊರ್ವಂ ಪುಳಕದಿ- |
ನೊರ್ವಂ ಬೆಮರಿಂದೊರ್ವಂ ಸ್ತಂಭದಿ- |
ನೊರ್ವಂ ಕಂಪದಿನೊರ್ವಂ ಗದುಗದನೊದವಿದ ನುಡಿಯಿಂದ ||
ಒರ್ವಂ ವೈವರ್ಣಾಂಕತೆಯಿಂ ಮ- |
ತ್ತೊರ್ವಂ ಗಳದಶ್ರುಗಳಿಂದೊಪ್ಪಿದ- |
ನುರ್ವೀಸುತೆ ಬರಲವರವರಂ ನಡುತಿರಲು । ಕಾಮನ ಸರಲು || ೨೭ ||

ವೀರತೆಯುಂ ಶೂರತೆಯುಂ ರುಚಿರೋ- |
ದಾರತೆಯುಂ ಗುಣಗಂಭೀರತೆಯುಂ |
ದೀರತೆಯುಂ ಪುದುವಿಲೆನೆ ತನೊಳು ಕೌಸಲ್ಯೆಯ ತನಯಂ ||

ರಾರಾಜಿಸಿ ಕಡಲೊಳು ಕೈವಂದ ನ- |
ಮೇರುವಿದೆಂಬಂತಾಸಭೆಯೊಳು [ ತಾ ][1] |
ಕೈರವಲೋಚನೆ ಕಂಡಳು ದಶರಥಸುತನ- | ನುರ್ವೀಮತನ[2] || ೨೮ ||

ಆಗಳವರವರ[3] ವಿತರಣವಿದ್ಯಾ- |
ಭೋಗವಿವೇಕಪರಾಕ್ರಮಮಂ ಹಂ- |
ಸೀಗಾಮಿನಿಗನ್ವಯಸಹಿತಂ[4] ಕಂಚುಕಿ ಪೇೞುತ್ತಲಿರೆ ||
ಏಗೆಯ್ದುಂ ನೆನೆಯಳು ನೋಡಳು[5] ನುಡಿ-
ಗೇಗೊಳ್ಳಳು[6] ಜಾನಕಿ ತನ್ನೆರ್ದೆ*ಯಂ |
ತಾಗುತ್ತಿರೆ ಸೀಡುಂ[7] ನೆನೆದಳು ರಾಮುನನು | ಗುಣಧಾಮುನನು || ೨೯ ||

ವದನೇಂದುಗೆ ನಿರ್ಮಾಲ್ಯಂ ವಿಧುಕೌ- |
ಮುದಿ ನಯನಾಂಶುಗೆ ನಿರ್ಮಾಲ್ಯಂ ಹವ- |
ಳದ ಲತೆಯಧರಮಣಿ[ ಗೆ ][8] ನಿರ್ಮಾಲ್ಯಂ ಪೊೞ[9] ಪೆಜತಿಲ್ಲಿಂತೀ ||
ಸುದತಿಯ ಕುಚಕಳಶಕೆ ನಿರ್ಮಾಲ್ಯಂ |
ಮದನಮದೇಭದ ಕುಂಭವೆನುತ್ತಂ |
ಮುದದಿಂ ಜಾನಕಿಯಂ ನೋಡಿದನಾ ರಾಮಂ | ಕೌತುಕಧಾಮಂ || ೩೦ ||

ಈರಮಣೀರತ್ನಮಮೂಲ್ಯಂ ಧನು- |
ಸಾರೋಪಣಮಾತ್ರಂ ಬೆಲೆಯಿದಕೆ ವಿ- |
ಚಾರಿಪುದೇನಶ್ರ[10]ಮದಿಂದೇಱಸುವೆಂ ಚಾಪವನಿರದೆ ||
ಧೀರತೆಗೆಡದಿರು ಚಿತ್ತಮೆ ನಿನ್ನ ಮ- |
ನೋರಥಸಿದ್ಧಿ [ ಸಲೆ ] ಸಮನಿಸುವುದೆಂ- |
ದಾರಘುರಾಮಂ ಮನದೊಳ್ನುಡಿ[ದಂ][11] ಮುದದಿಂ | ಭುಜಬಲಮುದದಿಂ || ೩೧ ||

ಇತ್ತಲು ವಿದ್ಯಾಧರವಲ್ಲಭನ ಮ- |
ಹತ್ತರನೊಲವಿಂದಖಿಳಾವನಿಯಂ |
ಬಿತ್ತರದಿಂ ಚಾಪದ್ವಯಮಂ ವಿಧಿಪೂರ್ವಕಮರ್ಚಿಸಲು ||

---

೧ ( ಕಖಗ ) ಪ್ರತಿಗಳಲ್ಲಿಲ್ಲ. ೨-೨ ( ಕಖ ) ಮಥನ. ೩-೩ ( ಗ ) ಆಗವರ. ೪-೪ ( ಗ ) ಸಗಾಮಿನಿ. ೫-೫ ( ಗ ) ನೊಡೆಯಳು. ೬-೬ ( ಕಖ ) ಗೀಗಳು. ೭-೭ ( ಕಖ ) ವೀಡುಂ. ೮ ( ಕಖಗ ) ಯ. ೯ ( ಕಖ ) ಪೊಳ. ೧೦ ( ಗ ) ಸ್ತ್ರ. ೧೧ ( ಕಖಗ ) ಗುಂ.

ಎತ್ತೆತ್ತಂ ನೋಟ್ಟೊಡಮಾದಿಙ್ಮುಖ- |
[೧]ದತ್ತತ್ತಂ ಪಸರಿಸೆ ಫಣಿದೀಪ್ತಿವಿ- |
ಯತ್ತಳವಮಂ ವ್ಯಾಪಿಸಿ ಫೂತ್ಕಾರಂ ನೆಗೆಯೆ | ಕಂಡವರಗಿಯೆ || ೩೨ ||

ಕಡೆಗಾಲದ ಮುಗಿಲೊಳು ಘುಡಿಘುಡಿಸುವ |
ಸಿಡಿಲ ಗಡಣಮೆನೆ ಚಾಪಯುಗಂಗ- |
ಳ್ಕಿಡಿಯಂ ಕೆಂಡವನುಗುಳುತ್ತಿರೆ ಕಂಡಂಬರಚರಸೇನೆ ||
ಪೊಡವಿಯೊಳಿವನಾರೇಱಿಸುವರು ತ- |
ಮ್ಮೊಡೆಯಂಗಾದಳು ಜಾನಕಿಯೆನುತಂ |
ನುಡಿಯುತ್ತಿರಲು ಪ್ರಭಾಮಂಡಳನನುಚರರು | ವಿದ್ಯಾಧರರು || ೩೩ ||

ಧನುರಾರೋಪಣದಿಂ ಮನುಮಥಧನು- |
ವೆನಿಸಿದ ಜಾನಕಿಯ[೨ ನೊಲಿಸಲಿಸುವುದು ]೨ |
ಜನನಾಥರೊಳಾರಾದೊಡಮೆಂದಾಕಂಚುಕಿ ನುಡಿಯಲೊಡಂ ||
ತನತನಗೆರ್ದುದು ನೃಪನಿಚಯಂ ಘನ- |
ನಿನದದಿನೇಱುವ ಕಂಠೀರವತತಿ- |
ಯೆನೆ [೩ ಬಿಲ್ಲಿರ್ದೆಡೆಗೆಯ್ತಂದರದಂ]೩ ಕಂಡು | ನಡುಕಂಗೊಂಡು || ೩೪ ||

ಉರಿಯಂ ಕಾಱುವ ದೃಷ್ಟಿವಿಷಾಹಿಗ- |
ಳೆರಡಂ ಬಿಲ್ಲೆರಡೆಂದಟ್ಟಿದ ಖೇ- |
ಚರಮಾಯೆಗೆ ಮರುಳಾಗಿಯೆ ಜನಕಂ ಕೊಟ್ಟಂ ನಿಜಸುತೆಯಂ ||
ಗರುಡನ ಮುದ್ರೆಯ ಗಾರುಡವಿದ್ಯೆಯ |
ಪರಿಣತೆಯುಳ್ಳವರೇಱಿಸಿಯಿದನೆಂ- |
ದಿರದಾಗಳೆ ಪಿಮ್ಮೆಟ್ಟಲು ಪಾರ್ಥಿವಸುತರು | ಭಯಸಂಯುತರು || ೩೫ ||

---

೧ (ಗ) ಹ. ೨-೨ (ಕಖ) ನೊಲಿಸುವುದು; (ಗ) ನೊಲಿಸುಲಿಸುವುದು. ೩-೩ (ಕಖಗ) ಬಿಲ್ಲಿರ್ದೆಡೆಗೆಯ್ತಂದರ್. ಮಾತ್ರೆಗಳು ಕಡಿಮೆಯಿರುವುದರಿಂದ ಸಪ್ತಗಣಗಳನ್ನು ಮಾಡಿಕೊಳ್ಳಲು 'ಅದಂ' ಎಂಬ ಪದವನ್ನು ಕೂಡಿಸಬೇಕಾಗಿದೆ.

ಅನರಣ್ಯಾತ್ಮಜನಖಿಳಕಳಾವಿದ- ।
ನನುಪಮವಿಕ್ರಮನತುಳಬಲಂ ನಿಜ- ।
ತನಯನ ಮೊಗಮಂ ದರಹಸಿತಾನನನಾಗಿಯು ದಶರಥನು ॥
ಅನುನಯದಿಂ ನೋಡುವುದುಂ ಪೊಡಮ- ।
ಟ್ಟನುಜಂ ಬೆರಸಿರದಿರ್ದಾದರದಿಂ ।
ಧನುವಿರ್ದಲ್ಲಿಗೆ ನಡೆತಂದಂ ರಘುರಾಮಂ । ಶೌರ್ಯೋದ್ದಾಮಂ ॥ ೧೯ ॥

ಧರೆಗವತರಿಸಿದ ಶಶಿಸೂರ್ಯರ ಪೋ-
ಲ್ಪರೆ ರಾಘವಲಕ್ಷ್ಮೀಧರರುಪಸಂ-
ಹರಿಸಲು ಚಾಪದ್ವಿತಯಂ ತಮ್ಮಯ ಪೈಕವರ್ತಿತಯನು ।
ಧರಣಿಯದಿರೆ ಫಣಿಪತಿ ಕಂಪಿಸೆ ದಿ- ।
ಕ್ಕರಿತತಿ ಪೆಳರ್ಚೆ ಕುಸಿಯೆ ಕೂರ್ಮಂ ನಿ- ।
ಷ್ಠುರವಜ್ರಾವರ್ತವನೇರಿಸಿದಂ ರಾಮಂ । ಭುಜಬಲಧಾಮಂ ॥ ೨೦ ॥

ಖೇದಂ ಖೇಚರಸಂದೋಹಕ್ಕೆ ವಿ- ।
ಷಾದಂ ಕ್ಷತ್ರಿಯಪುತ್ರಾಳಿಗೆ ಸಂ- ।
ಮೋದಂ ಜನಕವಿದೇಹೀದಶರಥಜನನೀಜನಕೆಯು ॥
ಸ್ವೇದೋದ್ಭೇದಪುಳಕವವನಿಜೆ[ಗು]- ।
ತ್ಪಾದಿಸೆ ವಜ್ರಾವರ್ತವನೇರಿಸಿ ।
ಸಾದರದಿಂ ಜೇವೊಡೆ[ದ] ನೃಪಕುಲಲಲಾಮಂ । ರಘುಪತಿರಾಮಂ ॥ ೨೧ ॥

ಅಗ್ರಜನಾದೇಶದಿನಾಗಳೆ ವಿ- ।
ದ್ಯಾಗ್ರಣಿಯೆಂಟನೆಯಚ್ಯುತನಮಳೋ- ।
ದಗ್ರಯಶಂ ಮುದವೊದ[ವೆ] ನಾಗರಾವರ್ತವ ಕೈಕೊಂಡು ॥
ಉಗ್ರಂ ಪಾಶುಪತವನೇರಿಸುವ ಸ- ।
ಮುಗ್ರಾಟೋಪಂ ತನಗೆಸೆದಿರಲ- ।
ವ್ಯಗ್ರಂ ಪದೆದೇರಿಸಿದಂ ಲಕ್ಷ್ಮೀಧರನು । ರಿಪುಭೀಕರನು ॥ ೨೨ ॥

೧-೧ (ಗ) ಶೌರ್ಯಾರ್ಥಾಯಂ. ೨ (ಕಖಗ) ಗಂಪ. ೩ (ಕಖಗ) ನಂ

ಧಾರಿಣಿ ನಡುಗಿತು ಮೇರುವದಿರ್ದುದು |
ವಾರಿಧಿ ಕದಡಿತು ದಿಕ್ಪಾಲಕತತಿ |
ಭೀರುತೆವಡೆದುದು ಬೆದಱಿದನಹಿಪತಿ ಕೂರ್ಮಂ ಕುಸಿಯಿತ್ತು ||
ವಾರಿಜನಾಭಂ ಜೇವೊಡೆದಂ ವಿ- |
ಸ್ಫಾರಿತ ಭೈರವದಾರುಣತರ ಟಂ- |
ಕಾರನಿನಾದಂ ಲೋಕತ್ರಯಮಂ ಬಳಸೆ | ನೃಪಕೈವಳಸೆ || ೪೦ ||

ಚಂದ್ರಧ್ವಜನೆಂಬಂ ನರನಾಥನೃ- |
ಪೇಂದ್ರನ ಬಾ[೧ಹಾ]ಬಲಮಂ ಮೆಚ್ಚಿ ಸು- |
ರೇಂದ್ರಾಣಿ ಪ್ರತಿಯವರಂ ಪದಿನೆಣ್ಬರ್ಕನ್ನಿಕೆಯರನು ||
ಚಂದ್ರಾನನೆಯರನಿತ್ತಂ ಸಕಳನೃ- |
ಪೇಂದ್ರಂ ದಶರಥನಿರ್ದಲ್ಲಿಗೆ ಬಂ- |
ದಿಂದ್ರವಿಭವ[೨ದಿಂದಾ೨]ರಾತಿಯ [೩ಜಿತ]ಕಲಿಗೆ | ಘನಭುಜಬಲಿಗೆ || ೪೧ ||

ಹಲಮುಂ ವಜ್ರಾವರ್ತಮುಮಿಂತೀ- |
ಲಲನಾರತ್ನಂ ಜಾನಕಿಯುಂ ಮ- |
ಯ್ಗಲಿ ರಾಮನ ಕೈಸಾರ್ದುವು ಸಾರ್ವ-*ತ್ರಿಖಂಡಕ್ಷಿತಿಯೆನಲು ||
ಸುಲಲಿತ ಗದೆಯುಂ ಪದಿನೆಣ್ಬರು ವರ- |
ಲಲನಾರತ್ನಂಗಳುಮೀ ಬಿಲ್ಲುಂ |
ಜಲರುಹನಾಭನ [೪ಸಾರ್ದುವು೪] ತೊದಳಿಲ್ಲೆಂದು | ದುರ್ವರೆಯೆಂದು || ೪೨[೫] ||

ಬೆಳುಗೊಡೆ ತಳೆದವು ಚಮರೀರುಹಸಂ- |
ಕುಳಮುಂ ವರಲಲನೆಯರಿಕ್ಕಿದರಾ- |
ಗಳೆ ಮುತ್ತಿನ ಸೇಸೆಗಳಂ ಜಯಜಯ ನಿನದವುಮೊದವಿದವು ||
ವಿಲುಳಿತಮಂಗಳತೂರ್ಯರವಂ ದಿಗು- |
ವಳಯಮನಾವರಿಸಿದವಾಗಳೆ ಪೂ- |
ಮಳೆ ಕಱೆದವು ಸುರದುಂದುಭಿಯೆಸೆದವು ನುತ*ರ್ಗೆ | ರಾಮಾಚ್ಯುತರ್ಗೆ* || ೪೩ ||

---

೧ ( ಕಖಗ ) ಹು. ೨-೨ ( ಕಖಗ ) ದಿನಾ. ೩ ಈ ಚರಣದಲ್ಲಿ ಮಾತ್ರೆಗಳು ಕಡಿಮೆಯಿರುವುದರಿಂದ ಸಪ್ತಗಣಗಳನ್ನು ಮಾಡಿಕೊಳ್ಳಲು “ ಜಿತ ” ಎಂಬ ಶಬ್ದವನ್ನು ಕೂಡಿಸಬೇಕಾಗಿದೆ. ೪-೪ ( ಕಖಗ ) ಕೈಸಾರ್ದುವು. ೫ ಈ ಚರಣದಲ್ಲಿ ಮಾತ್ರೆಗಳು ಹೆಚ್ಚಿವೆ. ಸಪ್ತಗಣಗಳನ್ನು ಸರಿಪಡಿಸಿಕೊಳ್ಳಲು “ ಕೈ ” ಎಂಬ ಪದವನ್ನು ಬಿಡಬೇಕಾಯಿತು. ಈ ಚರಣವನ್ನು ‘‘ ಜಲರುಹನಾಭನ ಕೈಸಾರ್ದುವು ದಿಟವೆಂದು | ದುರ್ವರೆಯೆಂದು || ” ಹೀಗೆಯೂ ತಿದ್ದಬಹುದು.

ಇದು ಪುಣ್ಯಾಹಸಮಯಮೀಗಳೆ ಬ- |
ರ್ಪುದು ಮಾಲೆಯನಿಕ್ಕುವುದೆನೆ ಕಂಚುಕಿ |
ಮುದದಿಂ ಜಾನಕಿ ಮೃದುಪದವಿನ್ಯಾಸಂ ಮೆಱೆಯುತ್ತಿರಲು ||
ಮದನಂಗಲರ್*ಗಣೆಯಂ ನೀಡಲು ಸಂ- |
ಮೋದದಿಂ ರತಿ ಬರ್ಪಂತಿರೆ ಬಂದಳು |
ಸುದತಿಯ ಮನದೊಳೊದವಿ[ರ್ದ][೧]ತಪ್ಪಾತುರ[ಮುಂ][೨] | ಲಜ್ಜಾಭರ[ಮುಂ][೩] || ೪೪||

ನೇವುರರವದಿಂದಂ ಸೊಗಯಿಪ ಹಂ- |
ಸಾವಳಿಯಂ ರಸನಾಸೂತ್ರದ ಕಳ- |
ರಾವದೆ ಸಾರಸಚಯಮಂ [ತನು]-ಸೌರಭದಿಂದಳಿಕುಳವಂ ||
ಆವರಿಸುತ್ತಿರೆ ಬಂದಳು ಘನಲ- |
ಜ್ಜಾವನತಾನನೆ ಜಾನಕಿ ರಾಘವ- |
ದೇವಂಗಿಕ್ಕಿದಳೊಲವಿಂ ಮಾಲೆಯನಿರದೆ | ನೆರೆವಾತುರದ || ೪೫ ||

ಕಾಮನ ವಾಮೋಪಾಂತದ ರತಿಯೆನೆ |
ರಾಮನ ವಾಮೋಪಾಂತದೊಳಂತಾ- |
ಭೂಮಿಜೆಯಿರೆ ತನು ಸೋಂಕಲು ರೋಮಾಂಚಮನೊದವಿಸಿತೊಲಿಸು ||
ಸೀಮೆಗಳಿದ ಚತುರಂಗಬಲದಿನು- |
ದ್ದಾಮಭುಜಂ ರಿಪುಭೀಕರನೃಪನಭಿ- |
ರಾಮಯಶಂ ದಶರಥನೃಪನಲ್ಲಿಗೆ ಬಂದ- | ನತಿಮುದದಿಂದ || ೪೬ ||

ಧಾತ್ರೀಸುತೆ ರಾಘವಲಕ್ಷ್ಮೀಧರ- |
ಶತ್ರುಘ್ನಭರತರೆಲ್ಲರ್ವೆರಸು ವಿ- |
ಚಿತ್ರಪವಿತ್ರಸಿತಾತಪತ್ರಚಮರರುಹಗಳೆಸೆದಿರಲು[೪] ||
ಕ್ಷತ್ರಿಯಪುತ್ರರಗಿದು ತೆರಳುತ್ತಿರೆ |
[೫][ಶಾತ್ರ][೫]ವಮಂ ಬಿಡೆ ವಿದ್ಯಾಧರತತಿ |
ಧಾತ್ರೀಪತಿ ಮಿಥಿಳಾಪುರಕಭಿಮುಖನಾದಂ | ವಿಜಯವಿನೋದಂ || ೪೭ ||

---

೧ (ಕಖಗ) ರೆ. ೨ (ಕಖಗ) ಮುಂ. ೩ (ಕಖಗ) ಮುಂ. ೪ ಈ ಚರಣದಲ್ಲಿ ಗಣಭಂಗವಾಗಿದೆ.
೫-೫ (ಕಖಗ) ಸ್ವಾತ್ರಪ್ರ.

ಕವಿಶಬ್ದಂಗಿಡೆ ತೂರ್ಯನಿನಾದಂ |
ಭುವನವನಾವರಿಸಲು ಶಂಖಧ್ವನಿ |
ವಿವಿಧಪತಾಕಿನಿಯುನದಿರೆ ದಶರಥ ಮಿಥಿಳೆಯ ಪುಗುವಾಗ ||
ಅವರಿವರೆನ್ನದೆ ಪುರವರದ ಸ್ತ್ರೀ- |
ನಿವಹಂ ಪ್ರಾಸಾದಂಗಳನೇರಿಯೆ |
ಕುವಳಯಲೋಚನೆಯರು ನೋಡಿದರಿಂತೆಂದು | ತಮತಮಗಂದು || ೪೮ ||

ಅಂಬುಜವನಮಲರ್ದ*ಂತಿರೆ ನಭಮಂ |
ಚುಂಬಿಸೆ ಬೆಳುಗೊಡೆ ಚಮರೀರುಹಮಂ |
ಬಿಂಬಾಧರೆಯರು ನಲಿನಲಿದಿಕ್ಕಲು ದಿಕ್ಕರಿಯುಂಸದಲಿ ||
ಹೊಂಬಟ್ಟೆಯ ಗುಡದಿಂದೊಪ್ಪುವ ಮದ- |
ಸಂಭೇರಮುಮಂ ಪಡೆದೇರಿಯೆ ಮುದ- |
ದಿಂ ಬರ್ಪಂತಂ ತೊದಳಿಲ್ಲದೆ ದಶರಥನು | ಜಿತಮನುಮಥನು || ೪೯ ||

ಕೋರಕಿತಾಂಗಜಜಂಗಮಲತೆಗೆ ನ- |
ನೇರುವಡರ್ಪ[1]ದಂತಿರೆ ಸಕಳಕೆ |
ಕೈರವಲೋಚನೆ ಜಾನಕಿ ತನ್ನೊಡನೊಲ್ದು ಬರುತ್ತಿರಲು ||
ಧಾರಿಣಿಗವತರಿಸಿದ ರೋಹಿಣಿ-ರಮ |
ತೋರಿ[ದಂ] ಬಂದಪನೆನೆ ಬರ್ಪಂ |
ಶ್ರೀರಾಮಂ ರಾಮಂ ಯುವತೀಜನಕಾಮಂ | ಶೌರ್ಯೋದ್ದಾಮಂ || ೫೦ ||

ಶರಧಿತರಂಗಂಗಳ ವೋಲೊಪ್ಪುವ |
ತುರಗದಳಂಗಳ ನಡುವೆ ಸುರೇಂದ್ರಂ |
ಸುರತುರಗವನೊಲಿದೇರಿ [2][ಬರುವ][2]ವೊಲ್ ಭ್ರಾಂ ಬರುತಿರ್ಪಾತಂ ||
ಸುರುಚಿರತಾರಕಿತಾಂಬರವೆನೆ ಪೆ- |
ರುರವೆಕ್ಕಾವಳಿಯಿಂದೆಸೆದಿರೆ ಬಂ- |
ಧುರತರಕೀರ್ತಿವಿನಿರ್ಜಿತಶಶಲಕ್ಷ್ಮಣನು | ಕಲಿ ಲಕ್ಷ್ಮಣನು || ೫೧ ||

---

೧ (ಗ) ಪ್ರೋರ್ಕ. ೨-೨ (ಕಖಗ) ಬರ್ಪ. ಇಲ್ಲಿ ಗಣಭಂಗವಾಗಿರುವುದರಿಂದ 'ಬರುವ' ಎಂದು ತಿದ್ದಿಕೊಳ್ಳಬೇಕಾಯಿತು.

ಎರಡುಂ ಮದಕರಿಗಳ ಹೊಂಗೆಲಸದ |
ಹೊರಜೆಗೆ ಕೇವಣಮಾಗಿರೆ ಪದನಖ- |
ಕಿರಣಕಳಾಪಂ ಕೂರಂಕುಶರುಚಿರವಿಯಂ ದ್ವಿಗುಣಿಸಲು ॥
ಎರಡುಂ ಕಣ್ಗಳು ಲೋಕಕ್ಕಿವರೆನೆ |
ಭರತಂ ಶತ್ರುಘ್ನಂ ದಶರಥನೃಪ- |
ನೆರಡುಂ ಕೆಲದೊಳು [೧][ ಬರ್ಪವರವರಿಂತೆಂದು ][೧] | ನೋಡಿದರಂದು ॥ ೫೨ ॥

ನಯಮುಂ ಭಯಮುಂ ತೋಱೆ ನೃಪಾಲಕ- |
ಚಯಮುಂ ಖೇಚರಜನಮುಂ[೨] ಕಳುಪಿ ವಿ[೨]- |
ಜಯದುಂದುಭಿ ಗಗನವನಾವರಿಸಲು ನಿಜವಾಹಿನಿಸಹಿತಂ ॥
ನಯನಿಪುಣಂ ತುರಗಾರೂಢಂ ನ- |
ಮ್ಮಯ ಪತಿ ಕನಕಂ ಬೆರಸಿ[ರೆ] ಬಂದನೆ |
[೩]ಜಯಶೀ[ಲ]ಕ್ರಮವಿಕ್ರಮನಿಳಯಂ[೩] | ತ್ರಿಭುವನಜನಕಂ ॥ ೫೩ ॥

ಅಂದಂತವರೆಲ್ಲರ್ವೆರಸಿರೆ ನಡೆ- |
ತಂದರವನೆಯಂ ಮಣಿಮಯತೋರಣ- |
ದಿಂದೊಪ್ಪುವುದಂ [೪][ ಸುರಧನುವಂದೆ ][೪]ಜಗಿದುದೆನೆ ರಾಜಿಪುದಂ ॥
ಮಂದರಗಿರಿಯಿದು ಬೇಱೊಂದೆನೆ ಹರಿ- |
ಚಂದನವನದಿಂ ಸುತ್ತಿದುದಂ ಜಯ- |
ದುಂದುಭಿರವವೆಸೆಯಲು ಪೊಕ್ಕಂ ರಘುವೀರಂ | ನಿರತೋದಾರಂ ॥ ೫೪ ॥

ರತಿಪತಿಶತಮುಖಶೀತರುಚಿಗ[೫][ಳಿಗೆ][೫] |
ರತಿಶಚಿರೋಹಿಣಿ[೬][ಯರ][೬] ಮಾಡುವ ಪೋ- |
ಲ್ಸುತಜನಕನ ಚಂದ್ರಧ್ವಜಕನಕಾತ್ಮಜೆಯರನಿರದಂದು ॥
ಕ್ಷಿತಿಸುತೆಯೂರ್ಮಿಲೆ-ಕನಕಪ್ರಭೆಯರ- |
ನತಿಬಲರಾಘವ-ಲಕ್ಷ್ಮಣ-ಭರತ- |
ರ್ಗತಿಮುದದಿಂ ಮದುವೆಯ ಮಾಡಿದನಿರದೊಲಿದು | ರಘುಪತಿ ನಲಿದು ॥ ೫೫ ॥

---

೧-೧ (ಕಖಗ) ಬರ್ಪವರೆಂದಿಂದು. ೨-೨ (ಗ) ಕಳುಹಿಯೆ. ೩-೩ (ಗ) ಜಯಶೀಲಾಕ್ರಮಾದಿನಿಳಯಂ; (ಕಖ) ಜಯಶೀಲಾಕ್ರಮ ವಿಕ್ರಮನಿಳಯಂ ೪-೪ (ಕಖಗ) ಸುರಧನುವೆಂದೆ. ೫-೫ (ಕಖ) ಗಳಾ; (ಗ) ಗಳ್ಗ. ೬-೬ (ಕಖಗ) ಗಳ.

ಜನಕಂ ರಾಮಂಗಾಚಂದ್ರಧ್ವಜ-|
ನನುನಯದಿಂ ಲಕ್ಷ್ಮಣದೇವಂಗಾ-|
ಕನಕಂ ಭರತಂಗನುನಯದಿಂ ನಿಜನಿಜಸುತೆಯರನಿತ್ತು ||
ಜನಕಪದದೆ ಕೈಧಾರೆಯನೆಱೆದ-|
ಜನಪತಿ ದಶರಥನನು, ಬಂದವನಿವ-|
ರನಿತುಂ ಮಾಡಿದರಾತನ ವಿಭವನನಱೆದು | ಸಿರಿಯಂ ಮೆಱೆದು || ೫೬ ||

ಸುರಕುಜದಾರವೆಗಳುಮಂ ಸೊಗಯಿಪ |
ಸುರಭಿಯ ಹಿಂಡುಗಳಂ ಚಿಂತಾಮಣಿ |
ಉರುತರ [೧ಕ]ರಿಗಳನವರಿವರೆನ್ನದೆ ಮೊಗನೋಡದೆ ಕೊಟ್ಟು ||
ಎರೆವಣ್ಣೆಯ ತೀರ್ಪರಿದುಂ ವಿತರಣ-|
ಸುರಗಿರಿ ಮನೆಮನೆದಪ್ಪದೆ ಬಂದಿರೆ |
[ವರತರ] ಚಾಗದ ಮಹಿಮೆಯ ಮೆಱೆದಂ ಜನಕಂ | ವಸುಧಾಜನಕಂ || ೫೭ ||

ಅಂತುತ್ಸಾಹಪರಂಪರೆಗಳನ-|
ತ್ಯಂತ ಮನೋಮುದದಿಂ ದಶರಥಭೂ-|
ಕಾಂತಂ ತಳೆಯುತ್ತಿರೆ ಮತ್ತಿತ್ತಲು ಖಚರಮಹಾವರನು ||
ಇಂತಿನಿತೆಲ್ಲಮುಮಂ ವಿದ್ಯಾಧರ-
ಕಾಂತಂಗಿಂದುಗತಿಗೆ ಪೇೞಲು ಸಭೆ-|
ಯಂ ತೀವಿತು ವಿಸ್ಮಯರಸಮೆಲ್ಲಾ ಜನಕೆ | ಕೇಳ್ವರ ಮನಕೆ || ೫೮ ||

[೨ ಜನಕಾತ್ಮಜರುಂ ೨] ವರವಿದ್ಯಾಧರ-|
ಜನಮುಂ ನೋಡುತ್ತಿರೆ ದಶರಥನೃಪ-|
ತನುಜರ್ಬಲನಾರಾಯಣರೆಯ್ತಂದೆರಡುಂ ಬಿಲ್ಲುಗಳಂ ||
ಅನುನಯದಿಂದಿರ್ವರುಮೇಱಿಸಿದ-|
ಜನಕಾತ್ಮಜೆ ರಾಮಂಗಾದಳುವೀ-|
ವಿನುತರ್ಕಾರಣಪುರುಷ[೩]ರ[೩]ವನಿವಿಶ್ರುತರು | ಭುಜಬಲಯುತರು || ೫೯ ||

೧ (ಕಖಗ) ಗಿ. ೨-೨ (ಕಖಗ) ಜನತಾತಸ್ಮಜರುಂ. ೩-೩ (ಗ) ರವರ್.

ಸೆಣಸುವುದರಿದಿಂ[ತ][೧]ವರೊಳವರ್ಕಾ- |
ರಣಪುರುಷರ್ನ[ಮ್ಮಿಂ][೨]ಬಿಲ್ಲೆರಡುಂ |
ಖುಣಮಿಲ್ಲದೆ ಪೋದುವು ಮುದದಿಂ ರಾಮಾಚ್ಯುತರಂ ಕೂಡಿ ||
ಪ್ರಣಯಿನಿ ರಾಮಂಗಾದಳು ಜಾನಕಿ |
ಗಣಯಿಸದಿರ್ಪುದು ನಮಗನುಚಿತಗುಣ- |
ಗಣದೊಳ್ಮತ್ಸರವೇನೆಂದಂ ನಯಧರನು | ಖಚರೇಶ್ವರನು || ೬೦ ||

ಎರಡುಂ ಪುರ್ವುಂ ಗಂಟಿಕ್ಕಲು ಕಿಸು- |
ಸೆರೆ [[೩]ಕಣ್ಣೊಳ್ಪರ್ವಿಸಲು][೩] ಕಪೋಲಾಂ- |
ತರದೊಳು ಬೆಮರುಣ್ಮಲು ತುಟಿ ಕೆತ್ತುತ್ತಿರಲು ಕರಂ ಮುಳಿದು ||
ಹರಿಪೀಠಮನಾಸ್ಫಾಳಿಸಿ ನಿಜ ನಿ- |
ಷ್ಠುರಕೂರಸಿಯುಂ ಕೊಂಡೆ[ದ್ದಂ] ಚ- |
ಚ್ಚರದಿಂದಿಂದುಗತಿಸುತಪ್ರಭಾಮಂಡಳನು | ದರ್ಪಾನಿಳನು | || ೬೧ ||

ಉರುತರಬಾ[ಹಾ][೪]ಬಲಗರ್ವದಿ ನ- |
ಮ್ಮೆರಡುಂ ಧನುಗಳನೇಱಿಸಿ ವಿದ್ಯಾ- |
ಧರರಂ ಪರಿಭವಿಸಿದೆವೆಂದಿರ್ದಾ ರಾಘವಲಕ್ಷ್ಮಣರಂ ||
ತರುಣೀರತ್ನಂ ಬೆರಸೀಗಳೆ ತಂ- |
ದಿರದೊಪ್ಪಿಸುವೆಂ ಬಾಳ್ದಲೆಯುಂ ಚ- |
ಚಚ್ಚರದಿಂ ಕಾದಿದರಾದಡೆ ಕೊಲುವೆಂ ತಡೆಯೆಂ | ಹಲವುಂ ನುಡಿಯೆಂ || ೬೨ ||

ಎಂದಾ ಭಾಮಂಡಳನಾಗಳು ತಾಂ |
ತಂದೆಯನೊಲವಿಂ ಬೀಳ್ಕೊಂಡಂ ಕಡು- |
ಪಿಂದಂ ವಿದ್ಯಾಧರಬಲಸಹಿತಂ ಪುರದಿಂ ಪೊಱಮಟ್ಟಂ ||
ಒಂದೆ ಕುಠಾರದಿನಡವಿಗಳಂ ತಱಿ- |
ವಂದದೆ ರಾಮಾಚ್ಯುತರಂ [ಕಡು] ಮುಳಿ- |
ದೊಂದೇ ಕೂರಸಿಯಿಂದಂ ಕೊಂದಪೆನೆಂದ- | ನತಿ ಕಡುಪಿಂದ || ೬೩ ||

೧ (ಕಖಗ) ತಿ. ೨ (ಕಖಗ) ಮ್ಮಂ. ೩-೩ (ಕಖಗ) ಕಣ್ಣೊವರ್ವಿಸಲು. "ಕಣ್ಣೊಳ್ | ಪರ್ವಿದ ಕಿಸುಸೆರೆಗಳು." ಎಂದು ಪಂಪರಾಮಾಯಣದಲ್ಲಿದೆ. ಆ. ೬; ಪ. ೧೨. ೪ (ಕಖಗ) ಹು.

ಮೃಡನುರಿಗಣ್ಣಾನಸವಾದುದೊ ಮೇ- |
ಣ್ಬಡಬಾನಲವೆಯ್ದುಂದಪುದೋ ಮೇ- |
ಣ್ಕಡೆಗಾಲದ ಸಿಡಿಲೆಯ್ದುಂದಪುದೋ ಖಚರಾಕೃತಿಯಿಂದ ||
ಕಡುಪಿಂದೀರಱುವರುಮಾದಿತ್ಯ- |
ರ್ಪೊಡವಿಯನೊರ್ಮೊದಲೊಳು ತಮ್ಮನಿತುಂ |
ಸುಡಲೆಂದೊಂದಾದರೊಯೆನೆ ನಭದಿಂ ಬಂದ- | ನತಿ ಮುಳಿಸಿಂದ || ೭೪ ||

ಭರದಿಂ ಬಂದು ವಿದಗ್ಧಪುರಮುನಾ- |
ದರದಿಂ ನೋಡುತ್ತಂ ಪೊಱವೊಳಲಂ ।
ಸುರಚಾಪದೆ ಮಾಡಿದ ಪೋಲೊಪ್ಪುವ ಮಣಿಮಯತೋರಣಮಂ ||
ಪುರವೀಧಿಗೆ ಬಂದಿಂತಿದು ಜನ್ಮಾಂ- |
ತರದೊಳು ತೊದಳಿಲ್ಲೆನ್ನಯ ಪಟ್ಟಣ- |
ವರಮನೆಯೆನ್ನದು ಜನಮೆನ್ನದು ದಿಟವೆಂದ | ಮೂರ್ಛೆಗೆ ಸಂದ || ೭೫ ||

ಇರದಂಬರಚರ[೧]ರಾತನನಾಗಳೆ ।
ಭರದಿಂದಿಂದುಗತಿಯ [೨ ಮುಂದೆಯೆ ೨] ತರೆ ।
ತುರಿತದೆ ತಾತಂ ಶೀತಲಕ್ರಿಯೆಯಂ ಮಾಡಿಸಲೆಚ್ಚತ್ತು ||
ಕರಕಮಲಂಗಳ ಮುಗಿದೊಲವಿಂ ಪಿತೃ- |
ಚರಣಯುಗಂಗಳಿಗೆಱಗಿ ಗಭೀರ- |
ಸ್ವರದಿಂ ಭವವಾ[ರಾ]ರಂ [೩]ಮಱೆಯಿಸದೆಂದ[೩]- | ನತಿ ಭಯದಿಂದ || ೭೬ ||

ನಿನಗೀಮೂರ್ಛೆಗೆ ಕಾರಣವೇನೆಂ- ।
ದೆನೆ ಖಚರೇಂದ್ರಂಗೆಂದಂ ಕೌತುಕ- |
[೪]ವನೆ ತಳೆದಿರೆ ಸಭೆ ಮುದದೆ ಪ್ರಭಾಮಂಡಲನಂದಿಂತೆಂದ ||
ಎನಗೆ ಸಹೋದರಿ ಜಾನಕಿ, ಜನಕಂ ।
ಜನಕಂ, ತಾಯಿ ವಿದೇಹಿ, ಬಲಂ ಮೈ- |
ದುನನಾನವ*ರ್ಗಾಧನುವಾ[ಗೆ] ಬಱಿದೆ ಮುನಿದೆಂ | ಪುಣ್ಯದೆ ನೆನೆದೆಂ || ೭೭ ||

---

೧ (ಗ) ನಾ. ೨-೨ (ಕಖಗ) ಮುಂದೆಗೆ. ೩-೩ (ಕಖ) ಮಱೆಯಿಸದೆಂದೆಂದ; (ಗ) ಮಱೆಯಿಸದೆಂದಾದ. ೪ (ಗ) ವೆ.

ಇಲ್ಲಿಗೆ ತಂದಂ ಜನ್ಮಾಂತರರಿಪು- |
ವಲ್ಲಿಂದೆನ್ನನದೊರ್ವಂ ದೇವನ- |
ದೆಲ್ಲಮನಱಿವರ್ದೇವರು [೧ ಬಿನ್ನವಿಸಲು ೧] ದೇವಾ ಹದನಂ ||
ಬಿಲ್ಲುಂ ನಮ್ಮಿಂದನ್ಯರ ೨ಸಾರಿದು- |
ವಲ್ಲದಱಿಂದೆ೨ ಬಱಿದೆ ಮುನಿದೆಂ ಭವ-
ವಲ್ಲಿಯ ತೊಡರಾರಾರಂ ಮಱೆಯಿಸದೆಂದ- | ನತಿ ಮುದದಿಂದ || ೭೮ ||

ಎನೆ ತನಯನ ಮಾತಂ ಕೇಳ್ದಾಗಳೆ |
ಮನದೊಳೊದವೆ ವೈರಾಗ್ಯಂ ತನ್ನೊಳೆ |
ನೆನೆದಿಂತೆಂದಂ ಜಾನಕಿ ನಿನಗಾಗದೆ ಕರ ಲೇಸಾಯ್ತು ||
ಜನಕನೊಡಂಬಟ್ಟುಂ [೩ ತೆತ್ತಿರ್ದಡೆ ೩] |
ಧನುವಂ ರಾಘವನೇಱಿಸದಿರ್ದಡೆ |
[೪ ಘನತರದುರಿತಂ ೪] ಯಶಲತಿಕೆಗೆಡರ್ಪಂ ತಳೆಗುಂ- | ಖಚರತೆಯಟಿಗುಂ || ೭೯ ||

ಹೋದುವು ಬಿಲ್ಲೆರಡುಂ ನಮ್ಮಯ ಯಶ- |
ಕಾದುದಮಲಿನತೆ ರಘುಸುತ-ಕೀರ್ತಿದಿ- |
ಶಾದಂತಿಗಳಿಗೆ ಕೀರ್ತಿಮುಖತೆಯಂ ತಳೆದುದಗುರ್ವಿಸಲು ||
ಮೇದಿನಿ ಹೊಗಳಲು ಜಿನದೀಕ್ಷೆಯನಾ- |
ನಾದರದಿಂ ತಳೆವೆಂ ವೈರಾಗ್ಯ- |
ಶ್ರೀದಯಿತೆಯನೀಗೆಂದು ಪ್ರಭಾಮಂಡಳ [ ನಂ ]೫ | ಜಿತರಿಪುಬಳ [ ನಂ ]೬ || ೮೦ ||

ನಿರವಿಸಿ ರಾಜ್ಯದೊಳಾವಿದ್ಯಾಧರ- |
ವರನಾಗಳೆ ಜಿನದೀಕ್ಷೆಯನತ್ಯಾ- |
ದರದಿಂ ಸರ್ವಭೂತಹಿತಮುನಿಪದನಿಕಟದೊಳೊಲವಿಂದ- ||
ಭರದೆ ಮಹೇಂದ್ರೋದ್ಯಾನಮನೆಯ್ದಿ ಸು- |
ಚರಿತಂ ತಳೆಯುತ್ತಿರೆ ಪೊಗಳಲು ಬಂ- |
ಧುರ ನಿಜಕೀರ್ತಿಸುಧೆಯ ದಿಕ್ಪಾಲಜನವು | ವೇಳಾವನವು || ೮೧ ||

೧-೧ ( ಕಖ ) ಬಿನ್ನವಿಸಲ; ( ಗ ) ಬಿನ್ನವಿಸ. ೨-೨ ( ಗ ) ಸಾಧಿಸುವವನಲ್ಲದಱಿಂ. ೩-೩ ( ಕಖ ) ತೆತ್ತಡೆ; ( ಗ ) ತಿರ್ದಡೆ ಪೇಙ್ ೪-೪ ( ಕಖಗ ) ಘನತರ ದುರಿತ. ೫ (ಕಖಗ) ನು. ೬ (ಕಖಗ) ನು.

ಇತ್ತಲು ಜಾನಕಿ ರಾಮಾದಿಗಳನು- |
ದಾತ್ತರ್ಜನಕಾದಿಗಳುಂ ಮೋದದಿ- |
ನಿತ್ತು ಮಣಿಮಯವಿಭೂಷಣವಾಹನಚಯಮುಂ ಬಳುವಳಿಯಿಂ ||
ಬಿತ್ತರದಿಂ ಕಳುಹಲು ದಶರಥಭೂ- |
ಪೋತ್ತಮನಮರೇಂದ್ರನ ಪೊಲಯೋಧ್ಯಾ- |
ಪತ್ತನಮಂ ಪುಗುತಂದಂ ಲೀಲೆಯಿನೊಲಿದು | ಸುಖದಿಂ ನಲಿದು || ೭೨ ||

ಅತುಳಬಲಪರಾಕ್ರಮ[೧] [ ದೊದವಿಂದೀ ][೧]-
ಕ್ಷಿತಿಪಾಲಕನಿಚಯಾರುಣಮುಕುಟ- |
ದ್ಯುತಿರುಚಿರಚರಣ [[೨] ನೋಲಗದೊಳು ][೨] ರಾಜಿಸುತಿರಲೊಂದು ದಿನಂ ||
ಉತ್ತಮವಿಚಕಿಲಕುಸುಮಂಗಳನೊಲಿ - |
ದಿತ್ತು ವಿರಚಿತಾಂಜಲಿಪುಟನಾಗಿ ವಿ- |
ನುತ್ತವ[೩]ಚ ಋಷಿನಿವೇದಕ[೩] ಬಿನ್ನಪವೆಂದಂ | ಒಲಿದಿಂತೆಂದಂ || ೭೩ ||

ಭೂನಾಥಾಧಿಪ ನಮ್ಮ ಮಹೇಂದ್ರೋ- |
ದ್ಯಾನದ ಸರಯೂತೀರದೊಳಮರನು |
ತಾನೆನಿಸಿರ್ದಾಸರ್ವಭೂತಹಿತಮುನಿಪತಿ ಬಂದಿರ್ದಂ ||
ಜ್ಞಾನನಿಧಾನಂ ಚಾತುರ್ವರ್ಣ್ಯ- |
ನಾನೀಕಂ ಬೆರಸಖಿಲಗುಣಾನ್ವಿತ- |
ನಾನಂದದಿನೆಂದಂದಿಂತಾಗಳೆ ನುಡಿದಂ | ಮೆಚ್ಚಂ ಪಡೆದಂ || ೭೪ ||

[೪]ಆದೆಸೆಗೇಳಡಿಯಂ[೪] ನುತದಶರಥ- |
ಮೇದಿನಿಪತಿ ಸಿಂಹಾಸನದಿಂದೆ- |
ದ್ದಾದರದಿಂ ಮುಕುಳಿತಕರಕಮಳಂ [[೫] ನಡೆಯುತ ][೫] ಪೊಡಮಟ್ಟು ||
ಪ್ರಾದುರ್ಭೂತಾನಂದಪಟಹಘನ- |
ನಾದಂ ದಿಙ್ಮುಖಮಂ ತಳಿಯೆ ಯಶ- |
ಶ್ರೀದಯಿತಂ ಪೊರವಟ್ಟಂ ಸುತತತಿಸಹಿತಂ | ಗರ್ವವಿರಹಿತಂ || ೭೫ ||

---

೧-೧ ( ಕಖಗ ) ಮುದಿಂದೀ. ೨-೨ ( ಕಖಗ ) ನೊಡ್ಡೋಲಗದೊಳು. ೩-೩ ( ಗ ) ೩-೩ ( ಕಖ ) ವಚನ ಋಷಿವೇಧಕ; ( ಗ ) ವಚನದುಷಿವೇದಕ; " ಋಷಿನಿವೇದಕನಿತ್ತಂ " ಆಶ್ವಾಸ ೬- ಪದ್ಯ ೨೫. ಪಂಪರಾಮಾಯಣ. ೪-೪ ( ಗ ) ಆದೆಸೆಗಳಡಿಯುಂ. ೫-೫ ( ಕಖಗ ) ನಡೆತಂದು.

ದೂರದಿ ವಾಹನದಿಂದಿಳಿದೊಲವಿಂ |
ಧಾರುಣಿಪತಿ ಮುನಿಪತಿಯಂ ಚಂದ್ರಂ |
ಮೇರುವ ಬಲಗೊಂಬಂದದೆ ಬಲಗೊಂಡೊದವಿದ ಭಕ್ತಿಯೊಳು ||
ಚಾರುಚರಣಕಮಳಂಗಳನರ್ತ್ಥಿಯಿ- |
ನಾರಾಧಿಸಿ ದಿವ್ಯಾರ್ಚನೆಯಿನಯೋ-
ಧ್ಯಾರಮಣಂ ಸಮುಚಿತವಿಷ್ಟರದೊಳು ನಿಲಲು | ಶಕ್ರನ ಗೆಲಲು || ೭೬ ||

ಆಸಮಯದೊಳಿಂದುಗತಿ ಮುನೀಂದ್ರನ |
ಭಾಸುರಚರಣೋಪಾಂತದೊಳಂತಾ- |
ವಾಸವಸುತ[೧] [ ನಿಭ ][೧] ಕುಳ್ಳಿರ್ದ ಪ್ರಭಾಮಂಡಳನಂ ಕಂಡು ||
ವಾಸವವಂದಿತ ಬೆಸಸುವುದೆನಗೆಂ-
ತೀಸಾಧುಪ್ರಭುಗೀ ಖಚರೇಂದ್ರವಿ- |
ಳಾಸಂ[೨] [ ಪುತ್ರ ][೨] ನೆನಿಪ್ಪಂ ಗುಣಮಣಿಧರನಃ | ವಿನಯಾಕರನು || ೭೭ ||

ಮುನಿಪತಿ ಮೃದುಮಧುರಗಭೀರೋಕ್ತಿಯಿ- |
ನನುನಯದಿಂದಿಂತೆಂದಂ ಭೂಭುಜ- |
ಜನಕವಿದೇಹಿತನೂಭವನೀತಂ ಜಾನಕಿಯಗ್ರಜನು ||
ಜನನಸಮಯದೊಳೆ ಜನ್ಮಾಂತರರಿಪು |
ಮುನಿದೊರ್ವಂ [೩]ಕೊಲಲೊಯ್ದಂ[೩] [ ಖ ][೪] ಚರೇಂ- |
ದ್ರನ ತಲ್ಪದೊಳೀಡಾಡಿದಡಲ್ಲಿಯೆ ಬಳೆದಂ | ತನ್ನಂ ತಿಳಿದಂ || ೭೮ ||

ಹರಿಯುಂ ರಾಮನುಮೇಱಿಸೆ ಧನುಗಳ- |
ನೆರಡುಮನಧಟಿಂ ತರಲೆಂದೀತಂ |
ಬರುತ ವಿದಗ್ಧೆಯ ಪುರಪರಿಸರದೊಳು [೫]ಜಾತಿಸ್ಮ[೫]ರನಾಗಿ ||
ಮರಳಿ ಪುರಕೆ ಬಂದಱಿಪಿದೊಡನೆ ಸಂ- |
ಸರಣವಿರಕ್ತಿಗೆ ಕಾರಣಮಾಗಿರೆ |
ಭರದಿಂ ದೀಕ್ಷೆಯ ತಾಳ್ದಿದನೀಖಚರೇಂದ್ರಂ | ನತದಿವಿಜೇಂದ್ರಂ || ೭೯ ||

---

೧-೧ (ಗ) ನಿನಭ ೨-೨ (ಕಖಗ) ಸ್ತುತ ೩-೩ (ಕಖ) ಕೊಲಲೆಂದಾಯ್ದು. ೪. (ಕಖಗ) ಖೇ ೫-೫ (ಕಖ) ಜಾತ.

ಮೊದಲಿಂ ತುದಿವರವೆನಗತಿಶಯದಿಂ- |
ದಿದ ಬೆಸಸುವುದೆಂದೆನೆ ಗುರುನಾಥಂ |
ರದನದ್ಯುತಿ ಪಸರಿಸೆ ಶ್ರುತದೇವಿಯ ಕಡೆಗಣ್ಗಳ ತೆಱದಿಂ ||
ಮೃದುಮಧುರತರಧ್ವನಿಯಿಂದಿಂತೆಂ- ||
ದದನವಧಾರಿಸುತಿರೆ ರಾಮಾದಿಗ- |
ಳುದಿತೋದಿತಗುಣ [ ಗಳ ] ಪೇಟ್ದಂ ಮುನಿನಾಥಂ | ಶೀಲಸನಾಥಂ ‖ ೮೦ ||

ಧಮಪುರವರದೊಳಗಿರ್ಪಂ ವಿಪ್ರೋ- |
ತ್ತಮನೆನೆ ನೆಗಟ್ದ[1] ವಿಮುಂಚಿಯಾತನ |
ರಮಣಿಯನುಮತಿ[2]ಯವರ್ಗೆ ತನೂಭವನಾದನತಿಭೂತಿ [ ಯು ] ||
ಪ್ರಮದೆಯವಂಗೆ ಸರಸಿಯೆಂದೆಂಬಳು |
[3]ದುರ್ಮತಿ [4][ ಯಿಂದ ][4] ಕಯನ ಬೆಂಬಳಿಯೊಳೆ |
ರಮಿಯಿಸಲೆಂದತಿ ಪಾತಕದಿಂದಮೆ ಪೋಗೆ | ಸ್ವೈರಿಣಿಯಾಗೆ || ೮೧ ||

ನೆರಪಿದ ಧನವೆಲ್ಲವ ಕೊಂಡಾದು- |
ಶ್ಚರಿತೆ [5][ ಕಯನ ][5] ಬೆಂಬಳಿಯೊಳು ಪೋಗಲು |
ಪಿರಿದುಂ ಕಡುಪಿಂದತಿಭೂತಿಯುಮವರಿರ್ವರನಱಸುತ [ ಲಿ[6] ] ||
ತ್ವರಿತದಿ ಪೋಪುದುಮಾತನನಱಸಲು |
ಭರದೆ ವಿಮುಂಚಿಯುಮನುಮತಿಯುಂ ತ- |
ತ್ಸರಸಿಯ ತಾಯುರಿಯುಂ ಪೊರಮಟರು [7]ಪುರಮಂ | ಶೋಭಾಕರವಂ[7] || ೮೨ ||

ಅಂತಾ ಮೂವರುಮತಿಭೂತಿಯನ- |
ತ್ಯಂತ ಭರದಿನಱಸುತೆ [8]ಶಂಭವಪುರ[8]- |
ಮಂ [9][ ತಾಮನಿಬರು ][9] ಪೊಕ್ಕು ಜಿನಾಲಯಮಂ ಮುದದಿಂದೆಯ್ದಿ ||
ಶಾಂತಸ್ಸರ್ವಮುನೀಶ್ವರಚರಣೋ- |
ಪಾಂತದೊಳೊಲಿದು ವಿಮುಂಚಿ ಮುನೀಂದ್ರತೆ- |
ಯಂ ತಳೆದಂ ನೆಗಟ್ದನುಮತಿಯುರಿಗಳುಮಿರದೆ | ದೀಕ್ಷಾತುರದೆ ‖ ೮೩ ||

---

೧. ದ್ವಿತ್ವ. ೨ ಪಂಪರಾಮಾಯಣದಲ್ಲಿ ಇವಳ ಹೆಸರು "ವಸುಮತಿ" ಎಂದಿದೆ. ಆಶ್ವಾಸ ೬-೩೨ ವ. ೩. ಪ್ರಾಸಭಂಗ. ಇದನ್ನು "ಕುಮತಿಯನಿರದೆ" ಎಂದು ತಿದ್ದಬಹುದು ೪-೪ ( ಕಖಗ ) ಯಿಂ. ೫-೫ ( ಕಖ ) ಕಯನೆಂಬನ; ( ಗ ) ಕಯನನ್ನ. ೬ ( ಕಖಗ ) ಲು. ೭-೭ [ ಪುರದಿಂ | ಶೋಭಾಕರದಿಂ ] ಎಂದು ಕೆಲವರು ಸೂಚಿಸುತ್ತಾರೆ. ೮-೮ ಪಂಪರಾಮಾಯಣದಲ್ಲಿ "ಅಂಬರಪುರ" ವೆಂದಿದೆ ಆ. ೬, ಪ. ೩೫ ವ. ೯-೯ ( ಕಖಗ ) ತಣಿಬರು.

ನಿರುಪಮಕನಕಶ್ರೀಯಾರ್ಯಿಕೆಯರ |
[೧]ಚರಣೋಪಾಂತ[೧]ದೊಳಾಯಿರ್ವರು ಮಾ- |
ದರದಿಂ ವಿರತಿಯರಾಗಿ ಯಥೋಕ್ತವಿಧಾನದಿನಸುವುಟಿುದು ||
ಸುರಗತಿಯಂ ಪಡೆದರ್ಮೂವರುಮಿವ- |
[[೨]ರಿರದೇಂ[೨]] ಪರಮಜಿನೇಶ್ವರ ದೀಕ್ಷೆಗೆ |
ನಿರವದ್ಯಾಮಳ ಸುಖದಾಯಿಗೆ ಸುರಪದ [ಮುಂ[೩]]| ಮೋಕ್ಷಾಸ್ಪದ [ಮುಂ[೪]] || ೮೪ ||

ಅವರೊಳ್ಗೆ ಗಟ್ಟಿ ವಿಮುಂಚಿಚರಾಮರ- |
ನವತರಿಸಿ[ಯೆ] ಯಿಂದುಗತಿವಿಯಚ್ಚರ- |
ಭುವನಾಧಿಪನಾದಂ ಮತ್ತನುಮತಿಚರ[[೫]ದೇವಿಯು[೫]] ಬಂದು ||
ಭವಬದ್ಧಸ್ನೇಹದಿನಿಂದುಗತಿಗೆ |
ಯುವತಿಯೆ ಪುಷ್ಪಾವತಿವೆಸರಿಂ ಸಂ- |
[[೬]ಭವಿಸಿದಳುರಿ[೬]]ಚರದೇವಿ[ಯು] ವಿದೇಹಿ[[೭]ಯಾದಳ್[೭]]| ಸುರನುತ[[೮]ಪಾದಳ್[೮]] ||೮೫||

ಇತ್ತಲ್ಸರಸಿ ಭವಾಟವಿಯೊಳ್ತೊಳ- |
ಲುತ್ತ ಬಳಾಹಕಗಹನದೊಳಾದು- |
ವ್ರ್[೯]ತ್ತೆಯೆರಳೆ[೯]ಯಾದಳು ಕಾಞ್ಚಿಟ್ಟಿಂ [೧೦]ಮಿಡುಮಿಡುಮಿಡುಕುತಲಿ[೧೦] ||
ಸತ್ತಲ್ಲಿಂ ಚಂದ್ರಪುರಮನಾಳ್ವ ನೃ- |
ಪೋತ್ತಮಚಂದ್ರಧ್ವಜನ ಮನಸ್ವಿಗೆ |
ಚಿತ್ರೋತ್ಸವೆಯೆಂಬಳ್ಮಗಳಾದಳು ಯುವತಿ | ಸೌಭಾಗ್ಯವತಿ ||೮೬||

ಸ್ಮರಮದಿರಾರಸಮತ್ತಂ ದುರ್ಗತಿ- |
ಶರನಿಧಿಯೊಳ್ಮುಳುಗಾಡುತ್ತಂ ಕಯು- |
ನಿರದೆ ಕ್ರಮೇಳಕನಾಗಿಯೆ ಚಂದ್ರಧ್ವಜನ ಪುರೋಹಿತನು ||
ವರಮತಿ [೧೧]ಧೂಮಕೇತುವೆಂಬಾತನ |
ತರುಣಿಗೆ ಕಪಿಳವೆಸರ ಮಗನಾದಂ|
ಭರದಿಂ ಚಿತ್ರೋತ್ಸವೆಯೊಡನೆ [ಯೆ] ತಾಂ ಬಳೆದಂ | ಸ್ನೇಹವ ತಳೆದಂ ||೮೭||

೧-೧ (ಗ) ಚರಣೋಪಾಂಗ. ೨-೨ (ಕಖಗ) ರಿರದೇಂ ೩ (ಕಖಗ) ಮಂ ೪ (ಕಖಗ) ವಂ ೫-೫ (ಕಖಗ) ದೇವಂ. ೬-೬ (ಕಖಗ) ಭವಿಸಿದಳುರೆ. ೭-೭ (ಕಖಗ) ಯಾದಂ ೮-೮. (ಕಖಗ) ಪಾದಂ ೯-೯ ಪಂಪರಾಮಾಯಣದಲ್ಲಿ "ಪುಲಿಯಾಗಿ ಪುಟ್ಟಿ" ಎಂದಿದೆ. ಆ. ೬. ಪ ೩೬ ಗ. ೧೦-೧೦ (ಗ) ಮಿಡುಮಿಡುಕುತಲು. ೧೧ ಪಂಪರಾಮಾಯಣದಲ್ಲಿ "ಧೂಮಕೇಶ" ನೆಂದಿದೆ. ಆ. ೬ ಪ. ೩೭.

ಒಡನಾಡಿಯುಮೊಡವಳೆದೊಡನೋದಿಯು- |
ಮೊಡನೆಯೆ ಯೌವನಮಂ ತಳೆದವರ್ಗ |
ಳೊಡವಕ್ಕಿಗಳೆನಲೊಡಲೆರಡಸುವೊಂದೆಂಬಂದದೊಳಿರ್ದು ||
ಪಡೆದಾಗಳ್ಕ್ರೀಡಿಸಲಿಲ್ಲೆಂಬೀ- |
ಕಡುಮೋಹದೆ ಪೊಱ[೧]ಮಟ್ಟಾಪುರಮಂ- |
ತಡೆಯದೆ ಬಂದು ವಿದಗ್ಧಪುರದೊಳವರಿರಲು । ಮುದವೊದವಿರಲು || ೮೮ ||
ಅತಿಭೂತಿಯುಮಿತ್ತಲು ಸಂಸ್ಕೃತಿ ಸಂ- |
ತತಿಯೊಳ್ಪಲಕಾ [[೨] ಲಂ ತೊಳಲ್ದಾ [೨]] ದು- ।
ರ್ಮತಿ ತಾರಾಕ್ಷವೆಸರ ಕಮಲಾಕರದೊಳು ಹಂಸೆಗೆ ಪುಟ್ಟಿ ||
ಅತುಳಿತ ಪಂಚನಮಸ್ಕಾರಂಗಳ- |
ನತಿಮುದದಿಂ ಕೇ[೩]ಳ್ದಲ್ಲಿಂ[೩] ಕಿನ್ನರ- |
ಗತಿವಡೆದಿರದೆ [೪]ಪ್ರಕಾಶಸಿಂಹನ ಸುತನು | ಶೌರ್ಯೋನ್ನತನು || ೮೯ ||
ಕುಂಡಳಮಂ[೫]ಡಿತನಾಗಿ[೫] ಪಡೆದು ಕೈ- |
ಕೊಂಡಾಪುರಮಂ ತುರಗಾರೂಢಂ ।
ಕುಂಡಳಕಾಂತಿ ಪಸರಿಸಲು ಬರುತಂ ಚಿತ್ತೋತ್ಸವೆಯಿರಲು ||
ಕಂಡಿದಿರೊಳು ಸೋಲ್ತಾಕೆಗೆ ಕಪಿಳನ ।
ದಂಡಿಸಿ ಪೊರಮಡಿಸಿದನಂಗಜ ಕೋ- |
[[೬] ದಂಡಕ್ಕಾರಗಿಯದರಿರದಾಕೆಯು [೬]] ತಂದಂ | ಮದುವೆಯ ನಿಂದಂ || ೯೦ ||
[[೭] ಅಂತ [೭]] ವರಿರ್ವರುಮಿಷ್ಟವಿಷಯಸುಖ- |
ದಿಂ ತಣಿಯುತ್ತಿರಲನರಣ್ಯ[೮]ನ ಸಾ- |
ವಂತನವರನಂಜಿಸಿ ಪೊಱಮಡಿಸಲು ಪರದೇಶದೊಳಿರ್ದು ||
ಸಂತಸದಿಂ ಜಿನಮುನಿಪದಕಮಳೋ- |
ಪಾಂತದೊಳಿರ್ವರುಮಾಗಳಣುವ್ರ[೮]ತ- |
ಮಂ ತಳೆದಲ್ಲಿಂ ದೇವಗತಿಯೊಳುದ್ಭವಿಸೆ | ಸುಖಸಂಭವಿಸೆ || ೯೧ ||

---

೧. ಈ ಸಂಗತಿಯು ಪಂಪರಾಮಾಯಣದಲ್ಲಿಲ್ಲ. ೨-೨ ( ಕ ) ಲಂ ತೊಳಲ್ದು; ( ಖ ) ಲಾ ತೊಳಲ್ದಾ; ( ಗ ) ತೊಳಲ್ದು, ೩-೩ ( ಗ ) ಕೇಳ್ದಲ್ಲಿ. ೪ ಪ್ರಕಾಶಸಿಂಹನ ಹೆಸರು ಪಂಪರಾಮಾಯಣದಲ್ಲಿ ಬಂದಿಲ್ಲ. ೫-೫ ( ಗ ) ಮಂಡಿತನಾದಿ ೬-೬ ( ಕ ) ದಂಡಕ್ಕಾರಗಿರಿಯದಾಕೆಯ; ( ಖ ) ದಂಡಕ್ಕಾರದೆ ಆಕೆಯು; ( ಗ ) ದಂಡಕ್ಕಾಗಿರಿಯದಾಕೆಯ ೭-೭ ( ಕಖ ) ತಂಥ; ( ಗ ) ತಂದ ೮-೮ ಈ ವೃತ್ತಾಂತವು ಪಂಪರಾಮಾಯಣದಲ್ಲಿಲ್ಲ.

ಅಲ್ಲಿಂ ಬಂದು ಜನಕಭೂಪಾಲನ |
ವಲ್ಲಭೆಯೆನಿಪ ವಿದೇಹಿಯುದರದೊಳು |
ಸಲ್ಲಲಿತಾಕೃತಿಯುವಳ್ಗಳಾಗಿಯೆ ಪುಟ್ಟಿದ ದಿನದಲ್ಲಿ ||
ನಿಲ್ಲದೆ ಮತ್ತಿತ್ತಲು ಕಪಿಳಂ ನಿಜ |
ವಲ್ಲಭೆ ಚಿತ್ತದೊಳಿರೆ ಬಾಹ್ಯತಪವ- |
ನೆಲ್ಲಂ ತಳೆದಮರತೆವಡೆದೀತನ ನೆನೆದು | ಪಿರಿದುಂ ಮು[ನಿ]ದು || ೯೨ ||

ಮದಹಿತ ಕುಂಡಳಮಂಡಿತನೀಗಳು |
ತ್ರಿದಶಸದನದಿಂದೊರ್ವಂಗನೆ ವೆರ- |
ಸುದಯಿಸಿದಂ ಜನಕನ ವನಿತೆಯ ಗರ್ಭದೊಳೆಂದತಿ ಮುಳಿದು ||
ಅದಿರೆ ನೆಲಂ ಕೊಲಲೆಂದೊಯ್ದೀತನ |
ವದನೇಂದುವ ಕಂಡುಳಿದು ಮುಳಿಸನತಿ |
ಮುದದಿಂ ಕುಂಡಳವಂ [ಕಿವಿಯೊಳಗೆ] ತೊಡರ್ಚಿ | ರಾಗಂ ಪೆರ್ಚಿ || ೯೩ ||

ಅವನಿಗೆ ದಳಲಘುವಿದ್ಯೆಯಿನಂತಾ- |
ದಿವಿಜನಿಳಿಪೆ ಬಂದೀಯಿಂದುಗತಿಯ |
ಯುವತಿಯು ಪುಷ್ಪವತಿಯು ತಲ್ಪದೊಳಂದೀತಂ ಬೀಳಲೊಡಂ ||
ಭವಬದ್ಧಸ್ನೇಹದಿನಿವರಾಗಳೆ |
ಕುವರಂ ತಮಗಾದಂತಿರೆ ರಾಗಿಸಿ |
ವಿವಿಧಕಳಾಗಮವಿದ್ಯೆಗಳೆಲ್ಲವ ಕಲಿಸಿ | ಜನಹಂಬಲಿಸಿ || ೯೪ ||

ಪುರುಪರಮೇಶ್ವರ ಸನ್ನಿಧಿಯೊಳು ಬಂ- |
ದುರಗೇಂದ್ರಂ ನಮಿವಿನಮಿಗಳಿಗೆ ಕೊ- |
ಟ್ಟಿರಡುಂ ಬಿಲ್ಲುಂ ರಾವಮಾಚ್ಯುತರೇಱಿಸಿ ಕೈಕೊಂಡು ಬರೆ ||
ಭರದಿಂ ಕಾದಲು ಬರುತಂ ಜನ್ಮಾಂ- |
ತರದ ವಿದಗ್ಧಪುರದೆ [ತಾಂ] ಜಾತಿ- |
ಸ್ಮರನಾಗಿಯೆ ಇದನೆಲ್ಲವನೀತನುಮಱಿದ | ವೈರವ ತೊಱೆದ || ೯೫ ||

---

೧-೧ (ಕಖಗ) ಕಿವಿಗೆ ೨-೨ (ಗ) ಗತಿ ೩ (ಗ) ೦. ೪ ಈ ಸಂದರ್ಭದಲ್ಲಿ ನಮಿವಿನಮಿಗಳಿಗೆ ವಜ್ರಾವರ್ತಸಾಗರಾವರ್ತ ಚಾಪಗಳು ದೊರೆತ ಸಂಗತಿಯು ಪಂಪರಾಮಾಯಣದಲ್ಲಿಲ್ಲ.

ಹಲವುಂ ಭವದೊಳು ವಿಷಯಾನಳನಿಂ |
ಮಲಮಲಮಱುಗುವ ಜೀವಾವಳಿಯಂ |
ಸಲೆ ನಿಲೆ ಕಾವೊಡೆ ಜಿನಮತವಲ್ಲದೆ ಶರಣಿಲ್ಲೆಂತೆನಲು ||
ಕೊಲೆಯಂ ಹುಸಿಯಂ ಕಳವಂ ಕುಲಟಾ-
ಲಲನಾರತಿಯಂ ಕಾಂಕ್ಷೆಯುಮಂ ತಾ- |
ನಲಸದೆ ಬೆಸಸುವ ಜಿನನಲ್ಲದವನುರ್ವೀತರೆ | ಬುಧಸನ್ನುತರೆ || ೯೬ ||

ಅನುನಯದಿಂ ನಿಜಬಂಧುಭವಾವಳಿ- |
ಯನಿತುಮ[೧]ನಿರದೆ[೧] ಪ್ರಭಾಮಂಡಳನೊಲಿ- |
ದನುನಯದಿಂ ಕೇಳ್ವತಿ ಕೌತುಕದಿಂ ನೆನೆನೆನೆದೆಱಗಿದನು ||
ಜನಕಜೆ ಮುದದಿಂ ನನೆಕೊನೆವೋ[೨]ದಪು-[೨] |
ದೆನೆ ರೋಮಾಂಚವ ತಳೆದಳು ದಶರಥ-||
ನನಿತುಂ ಸಭೆವೆರಸೆಱಗಿದನಾಮುನಿ ಪೇಟ್ದಂ | ದುರಿತವ ತೂಟ್ದಂ || ೯೭ ||

ಸೊಗಸಿನ ಬಲ್ಸರಿ ಸೊಗಸಿನ ಸೋನೆಯು |
ಸೊಗಸಿನ[೩] ವುರುಪೂ[೩]ರಂ ಸೊಗಸಿನ ನದಿ |
ಸೊಗಸಿನ ವಾರಿಧಿ [ ಸೊಗಸಿನ ಗಿರಿ ] ಯೆಂದಡಿಗಡಿಗೆನುತಿಲ್ಲ ||
ಮಗಮಗಿಸುವ ಚಂದನರಸಮುಂ ಮ- |
ಲ್ಲಿ[೪]ಗೆಯುರಲಿಂ[೪]ದಧಿವಾಸಿತಮುಂ ಸಲೆ |
ಮೃಗಧರನುದಯದೊಳನುಲೇಪಿಸಿದಂತಿರಲು | ಪುಳಕಂ ಬರಲು || ೯೮ ||

## [೫]ಉತ್ಸಾಹರಗಳೆ[೫]

ಅಸಮಯದವನತನೃಪಮುಕುಟಮಣಿಪ್ರಭಾಳಿಯಿಂ | ವಿಭೂಷಣಾಂಶುಮಾಳಿಯಿಂ ||
ದಶರಥಕ್ಷಿತೀಶಚಾರುಚರಣಕಮಳಯುಗಳಮಂ | ಸುರತ್ನನೂತ್ನನಿಗಳಮಂ ||
ಖಚರಕುವರನರ್ಚಿಸಿರ್ದನತಿವಿನೇಯವಿನಮಿತಂ | ಸಮಸ್ತಗುಣವಿರಾಜಿತಂ ||
ತೆಗೆದು ತಳ್ಕವಿಸಿದರಾಗಳಾತನಂ ರಘೂದ್ವಹಂ | ಪಸರಿಸಿದಂ ಸ್ವಭಾವಹಂ ||

---

೧-೧ ( ಗ ) ನಿವದೆ. ೨-೨ ( ಕಖ ) ವೊದವಿಪು. ೩-೩( ಖಗ ) ನುರು. ೪-೪ ( ಗ ) ಯರಸದಿಂ. ೫-೫( ಕಖ ) ವೃತ್ತದ ಹೆಸರು ಕೊಟ್ಟಿಲ್ಲ. ಉತ್ಸಾಹರಗಳೆಯ ಲಕ್ಷಣವು ಇದಕ್ಕೆ ಸರಿಹೋಗುವುದಿಲ್ಲ; ಆದರೆ ಇದರ ಚರಣದ ಆದಿಭಾಗವು ಉತ್ಸಾಹವೃತ್ತದ ಚರಣದಂತಿದೆ ಮತ್ತು ಇಡಿಯದಾದ ಚರಣವು ಲಯೋತ್ತರವೃತ್ತದ ಚರಣದ ಮೂರುನಾಲ್ಕಾಂಶದ ಹಾಗಿದೆ. ಈ ವೃತ್ತವು ಆವ ಛಂದೋಗ್ರಂಥದಲ್ಲಿಯೂ ದೊರೆಯುವುದಿಲ್ಲ. ಇದರಂತಹ ರಗಳೆಯು ಪಂಪಭಾರತದಲ್ಲಿದೆ. ಆ ೧, ಪ. ೫೮; ಆದರೆ ಅಲ್ಲಿಯೂ ಹೆಸರು ಕೊಟ್ಟಿಲ್ಲ.

ಜನಕತನಯೆಯಾಗಳಗ್ರಜಂಗತೀವ ಹರ್ಷದಿಂ। ಮುದಶ್ರುಪೂರವರ್ಷದಿಂ ||
ನಿಧಿಗೆ ದೀಪವರ್ತಿಯೆಱಗುವಂದದಿಂದೆಱಗುವುದುಂ। ಕರಂ ನಲಿದು ಪರಸುವುದುಂ ||
ದಶರಥಂ ಮುನೀಂದ್ರಚಂದ್ರನನುಮತದೆ ತೆರಳ್ವುದುಂ| ಬಲಂ ಪುರಕೆ ಮರುಳ್ವುದುಂ
ವಿಜಯಗಜಮನಮರಪತಿಯ ತೆಱದಿನೇಱ ದಶರಥಂ| ವಿನೋದನಿಃಚಿತಮನ್ಮಥಂ ||
ರಾಮಲಕ್ಷ್ಮಣಾದಿಗಳ್ವೆರಸು ಕನಕವಿಮಾನವಮಂ| ಸುರತ್ನಮಯವಿತಾನವಮಂ ||

ಪಟುಪಟಹನಿನಾದವೊದವೆ ದೆಸೆಗೆ ಪಸರಿಸುತ್ತಿರ [ಲ್][೧] | ವಿನೂತೆಯಂ ಪುಗುತ್ತಿರ [ ಲ್ ][೨] ||

ವಾರ್ಯತೂರ್ಯನಿನದವೊದವಿ ಕಿವಿಗೆ ಸೊಗಯಿಸುತ್ತಿರ[ಲ್][೩] | ಮತ್ತೇಭ ರಾಜಿಸುತ್ತಿರ [ಲ್][೪] ||

ಕಡಲ ತೆಱೆಯ ತುಱುಗಲಂತೆ ಸುತ್ತಿಬರಲು ವಾಜಿಗ [ಳ್][೫] | ತುಱುಂಗೆ ರಥದ ವಾಜಿಗ[ಳ್][೬] ||

ಕನಕಗಿರಿಯನೆಱಗಿದಂದದರಮನೆಯ ಪುಗುತ್ತಿರ[ಲ್][೭] | ಜನಂಗಳೀಕ್ಷಿಸುತ್ತಿರ[ಲ್][೮] ||
ಕನಕಪೀಠದೊಳು ವಿಯಚ್ಚರಾಧಿನಾಥನಿಪ್ಪುದುಂ| ಕುಲಾಂಗನೆಯರು ಬರ್ಪುದುಂ ||

ಪದೆದು ಪರಸಿ ಸೇಸೆಯಿಕ್ಕಿಯಾರತಿಯ ನಿವಾಳಿಸ [ಲ್][೯] | ಮರಾಳಿ ನಲಿದು ನರ್ತಿಸ [ಲ್][೧೦] ||

ವಿವಿಧವಸ್ತುವಾಹನಾದಿಗಳನೆ ಕೊಟ್ಟು ದಶರಥಂ | [ಸು]ಗೀತ[೧೧][ದೊಳ್ಮೆ][೧೧] ನೋರಥಂ ||
ಜನಕನೃಪತಿಗರುಪಲೆಂದು [೧೨]ಕಳಿಪೆ ಪವನವೇಗನಂ। ಮನಸ್ಸುಪವನವೇಗನಂ[೧೨] ||

ಮಿಥಿಳೆಗಾತನೆಯ್ದೆ ಪೋಗಿ [೧೩]ಪೇಟಲಿಂ[೧೩]ತಿವೆಲ್ಲಮಂ। ಮರಳ್ಚಿ ಸಭೆಯನೆಲ್ಲಮಂ ||
ಮಗುಳೆ ಮಗುಳೆ ಕೇಳ್ದಯೋಧ್ಯೆಯೊಳು ತನೂಜನಿರ್ದುದಂ। ವಿರೋಧಿಯೊಯ್ಯೆ ಬರ್ದುದಂ ||

ಸುತನನಾಗಳಂತೆ ಪಡೆದ ತೆಱದ ಹರುಷಭಾ[೧೪]ರದಿಂ। ಚರಂ ತಣಿಯೆ ದಿನಾರದಿಂ ||
ಅಱುಪಿ ಬೇಗದಿಂ ವಿದೇಹಿಗಿಂತಿದಂ ನೃಪಾಲಕಂ। ಸಮಸ್ತಮಂತ್ರಿಜಾಲಕಂ ||

ಮಿಥಿಳೆ ಕೂಡಿ ರಂಜಿಸ[ಲ್][೧೫] ಸುರತ್ನತೋರಣಂಗಳಿಂ। ಸುತೂರ್ಯ[೧೬]ಘನರವಂಗಳಿಂ[೧೬] ||

ಗುಡಿಯ ಹಳವಿಗೆಗಳ ತೋರಣಂಗಳಿ[೧೭]ಟ್ಟೆಳಂಗಳಿಂ[೧೭]। ಪ್ರಮೋದನರ್ತನಂಗಳಿಂ ||
ಪುರಜನಂಗಳಾಡುವೋಕುಳಿಯ ಸರಸವಿನೋದದಿಂ। ಜನಂಗಳ ಪ್ರಮೋದದಿಂ ||
ತಮತಮಗೆ ತಣಿವ ವಿವಿಧಮಣಿಪಟವಾಸಚೂರ್ಣದಿಂ। ಪ್ರಸೂನಕಪ್ರಕೀರ್ಣದಿಂ ||

೧ (ಕಖಗ) ಲು. ೨ (ಕಖಗ) ಲು. ೩ (ಕಖಗ) ಲು. ೪ (ಕಖಗ) ಲು. ೫ (ಕಖಗ) ಳು. ೬ (ಕಖಗ) ಳು. ೭ (ಕಖಗ) ಲು. ೮ (ಕಖಗ) ಲು. ೯ (ಕಖಗ) ಲು. ೧೦ (ಕಖಗ) ಲು. ೧೧-೧೧ (ಕಖಗ) ವಾದ್ಯಮು. ೧೨-೧೨ (ಗ) ಕಳಿಬಪರವನವೇಗನಮ್ಮನವನನಿಯೋಗನಂ. (ಕಖ) ಕಳಿಪೆ ಪವನ ವೇಗನಂ। ಮನಃ ಪವನ. ೧೩-೧೩ (ಗ) ಪೇೞ್ದೆಯಿಂತಿ. ೧೪-೧೪ (ಗ) ಚಾರದಿಂ. ೧೫ (ಕಖಗ) ಲು. ೧೬-೧೬ (ಗ) ಘನಂಗಳಿಂ. ೧೭-೧೭ (ಗ) ಲಟ್ಟಗಂಗಳಿಂ.

ತಣಿಪೆ ಸಕಲಜನಮನೆಯ್ದೆ ಮಣಿವಿಭೂಷಣಂಗಳಿಂ। ಲಸದ್ವಿಭೂಷಣಂಗಳಿಂ ॥
ಏಱಿ ಪವನವೇಗನೊಡನೆ ರತ್ನಮಯವಿಮಾನಮಂ।ವಿಚಿತ್ರತರವಿತಾನಮಂ ॥
ಕತಿಪಯಾಪ್ತಪರಿಜನಂಗಳೊಡನೆ ಬರಲು ಬೇಗದಿಂ। ವಿದೇಹಿಯೊಡನೆ ರಾಗದಿಂ ॥
ಎಡೆ[೧][ಯೆಡೆಯ][೧] ನದೀನದಾದ್ರಿನಗರತತಿಯ ನೋಡುತಂ। ಕ[ಡಂ]ಗಿ ಮಾತನಾಡುತಂ ॥
ಸಕಲನಗರತಿಲಕಮೆನಿಪಯೋಧ್ಯೆಗೆಯ್ದೆ ಬರ್ಪುದುಂ। ವಿಮಾನಮ[೨]ಲ್ಲಿ ನಿಲ್ವುದುಂ[೨] ॥
ಇಳಿದು ರಾಜಮಂದಿರವನತೀವ ಮುದದೆ ಪುಗುವುದುಂ। ಸುರೇಂದ್ರಸಭೆಯ ಮಿಗುವುದುಂ॥
ದಶರಥಾಪರಾ[೩][ಜಿತೆಯರ ಪದಕಮಲಕೆ][೩]ಱಗುವುದುಂ। ಅವರ್ಪದೆದು ಪರಸುವುದುಂ॥
ತಮಗೆ ರಾಮಲಕ್ಷ್ಮಣಾದಿಗಳ್ ವಿನಮಿತರಾಗಿಯುಂ। ಜನಾಳಿ ತಲೆಯ ತೂಗೆಯುಂ॥
ಜನಕಪತಿಗೆ ವಿನಯವಿನತನಾಗೆ ಖಚರವಲ್ಲಭಂ। ಅನೇಕದಿವಸದುರ್ಲಭಂ ॥
ಮಗನ ತೆಗೆದು ಬಿಗಿದು ತಳ್ಕಯಿಸಿ ಪುಳಕಸಮೂಹದಿಂ। [೪]ಅಳುಂಬ[೪]ಮಾದ ಮೋಹದಿಂ॥
ತಳೆದು ಪುಳಕಮಂ ವಿದೇಹಿ[೫][ಗತುಲಮುದದೆ][೫]ಱಗುವುದುಂ। ಪಲರ್ಮೆಯುಂ ಪರಸುವುದುಂ ॥
ಆಗಳಂತೆ ಸುತನ ಹಡೆದ ತೆಱದೆ ಸತ್ಪ್ರಮೋದಮಂ। ವಿಯೋಗದುರುವಿಷಾದಮಂ ॥
ಆತನಖಿಳಬಾಲಕೇಳಿಗಳಱಿಯದ ವಿಷಾದಮಂ। ಅಳುಂಬಮಾದ ಮೋದಮಂ ॥
ಒರ್ಮೊದಲೊಳನೇಕಭಾವಮಾಗಲವರ್ಗೆ ಬೇಗದಿಂ। ಮನಂ ತಣಿಯಲು ರಾಗದಿಂ ॥
ವಿವಿಧವಸ್ತುವಾಹನಂಗಳನ್ನು ಕುಡಲು ದಶರಥಂ। ಸುಸಂಭವನ್ಮನೋರಥಂ ॥
ಅಮೃತಮಯಪಯೋಧಿಯೊಳಗೆ ಮೂಡಿ ಮುಳುಗಿದಂತೆಯುಂ। ಸುಧಾಂಶುಸೇವೆಯಂತೆಯುಂ ॥
ರಾಮಲಕ್ಷ್ಮಣರೊಡನಖಿಳಶಸ್ತ್ರಶಾಸ್ತ್ರವಿದ್ಯೆಯಂ। ಜಗತ್ತ್ರಯೈಕಹೃದ್ಯೆಯಂ॥
ಕಲಿತು ಕಲಿಸಿ ನಲಿದು ತಿಂಗಳಲ್ಲಿ ಸುಖದಿನಿರ್ಪುದುಂ। ಪ್ರಮೋದದೊಳ್ತೊಡರ್ಪುದುಂ ॥
ಜನನಿಜನಕರೊಡನಯೋಧ್ಯೆಯಂ ತಳರೆ ವಿಯಚ್ಚರಂ।ನೃಪೇಂದ್ರನಱಿದು ಚಚ್ಚರಂ॥
ನೂತ್ನರತ್ನಮಯವಿಭೂಷಣಾದಿಗಳನನೇಕಮಂ। ಹಯದ್ವಿಪಪ್ರವೇಕಮಂ ॥
ತರಿಸಿಕೊಟ್ಟು ಕಳುಪೆ ಮಿಥಿಳೆಗೆಯ್ದೆ ತಮ್ಮ ಮಾವಳುಂ। ಕರಂ ಮಹಾನುಭಾವರುಂ ॥
ಇಂದ್ರಶಚಿಜಯಂತರಂತೆ ಪೊಕ್ಕು ತಮ್ಮ ನಗರಮಂ। ಜಿತಾಮರೇಂದ್ರನಗರಮಂ ॥
ಇರಿಸಿ[೬][ಕನಕನನು ಮಿಥಿಳೆಯೊಳನಿಬರಂದು ನಗರಮಂ][೬] ವಿಯಚ್ಚರೇಂದ್ರನಗರಮಂ॥
ಲೀಲೆಯಿಂದೆ ಪೊಕ್ಕು ಸುಖದಿನಲ್ಲಿ ಜನಕನಿರ್ಪುದುಂ। ವಿಯಚ್ಚರಾಳಿ ನೋಟ್ಪುದುಂ॥

---

೧-೧ (ಕಖಗ) ಯೆಡೆಯಣ. ೨-೨ (ಗ) ದಲ್ಲಿಗಿಪುದುಂ. ೩-೩ (ಕಖಗ) ಜಿತೆಪದಾಂಬುಜಕ್ಕೆ. ೪-೪ (ಕ) ಆಳುಂಜ, (ಗ) ಆಳುಂವು. ೫-೫ (ಕಖಗ) ಗತಿಮುದದಿಂದೆ. ೬-೬ (ಕಖಗ) ಜನಕನನು ಜನಕನಂ ಮಿಥಿಳೆಯೊಳನಿಬರುಂ.

ಜನಪತಿ ದಶರಥನಿತ್ತಲು ದಿವ್ಯಾ- ।
ರ್ಚನೆವೆರಸತುಲಿತ ಭಕ್ತಿಯೊಳೆಯ್ತಂ- ।
ದನುಪಮ ಸರ್ವಭೂತಹಿತಮುನಿಪದಕಮಲವನೊಂದುದಿನಂ ॥
ವಿನಯದಿನರ್ಚಿಸಿ ಪೊಡಮಟ್ಟಂತೆಂ- ।
ದನುನಯದಿಂ ಬೆಸಗೊಂಡಂ ತನ್ನಯ ।
ಘನತರವೆನಿಸ ಭವಾವಳಿಯಂ ಯತಿನುತನ । ಅಮರಾರ್ಚಿತನ ॥ ೯೯ ॥

ಮುನಿಪತಿ ಜನಪತಿಗೆಂದಂ ನಿನಗಂ- ।
ಟನೆಯ ಭವಂ ಮೊದಲಾಗಿರೆ ಕೇಳೆಂ- ।
ದನುನಯದಿಂದಂ ಚಂದ್ರಪುರದ ಚಂದ್ರಧ್ವಜನರಪತಿಯ ॥
[ವನಿತೆಗೆ ಧಾರಿಣಿ]ಯೆಂಬಳಿಗಾತ್ಮಜ- ।
ನೆನಿಸಿದ ಧಾರಣನಾದೈ ನೀನಂ- ।
ಗನೆಯ [ಸುಧರ್ಮೆಯ] ಸಂಸರ್ಗದಿ ಜಿನಮತವ । ನುರ್ವೀಹಿತವ ॥ ೧೦೦ ॥

ನಿರುಪಮ ಧರಿಯಿಸಿ ಬಂದಲ್ಲಿಂ ಸುರು- ।
ಚಿರಧಾತಕಿಷಂಡ-[ದ್ವೀಪದೊಳಾ]- ।
ಸುರಗಿರಿಯುತ್ತರಕುರವದೊಳಾದೈ ಭೋಗ[ದ] ಭೂಮಿಜನು ॥
ಚರಮದೊಳಲ್ಲಿಂ ಸೌಧರ್ಮದೊಳೊಲಿ- ।
ದೆರಡಬ್ಧಿವರಂ ಸುರನಾಗಿದ್ದೈ ।
ಪರಿವಿಡಿಯಿಂದಂ ಬಂದಲ್ಲಿಂದೀ ಕ್ಷಿತಿಯ । ಪುಷ್ಕಳವತಿಯ ॥ ೧೦೧ ॥

ಅತುಳಿತ[ದ] ಪುಂಡರೀಕಿಣಿಪುರದಧಿ- ।
ಪತಿನುತ[ನಾ]ನಂದಿಘೋಷನೃಪತಿಯ ।
ಸತಿ ವಸುಮತಿ[ಗೆಯೆ] ಸುನಂದಿವರ್ಧನನಾದೈ ಬಂದಲ್ಲಿಂ ॥
ಅತುಳಬಳಂ ನಿನ್ನಯ ಪಿತೃ ದೀಕ್ಷೆಯ- ।
ನತಿಮುದದಿಂ ತಳೆದಗ್ರಿಮಮಧ್ಯ- ।
ಸ್ಥಿತಮಾ[ದಾ]ಗ್ರೈವೇಯಕದೊಳಗಹಮಿಂದ್ರ- । ನಾಗೆ ಮುನೀಂದ್ರ ॥ ೧೦೨ ॥

---

೧-೧ (ಕಖ) ಯತಿನಾನ. ೨-೨ (ಕಖ) ವನಿತೆಗೆ ಧಾರ್ಯೆ; (ಗ) ವನಿತೆಧಾರ್ಯೆಯೆ. ೩-೩ (ಗ) ಬವಳಿಂಸಾತ್ಮಜ. ೪-೪ (ಕಖ) ನಿಂನ್ನಂ. ೫-೫ (ಕಖಗ) ದ್ವೀಪದ ೬-೬ (ಗ) ಕುವಲಯ. (೭) ರ. ಪಂಪರಾಮಾಯಣದಲ್ಲಿ ಪುಷ್ಕಲಾವತಿಯೆಂದಿದೆ. ಆ ೬, ಪ. ೫೭ ಗ. ೮-೮ (ಕಖಗ) ಗೆ. (೩) ಪಂಪರಾಮಾಯಣದಲ್ಲಿ "ನಂದಿವರ್ಧನ" ನೆಂದಿದೆ. ಆ. ೬, ಪ. ೫೭ ವ. ೯ (ಗ) ದ್ರಿ. ೧೦ (ಕಖಗ) ದ.

ಭರದಿಂ ನಿನ್ನಯ ತಂದೆಯ ಗುರುಗಳ |
ನಿರುಪಮರೆನಿಪ ಯಶೋಧರಮುನಿಪರ |
ಚರಣ[ದ] ಕಾರುಣ್ಯದಿನುದಯಿಸಿದೈ ಬ್ರಹ್ಮ[ದ] ಕಲ್ಪದೊಳು ||
ಇರದಲ್ಲಿಂ ಬಂದಪರವಿದೇಹದ |
ವರವಿಜಯಾರ್ಧದ ಶಶಿಪುರದ ವಿಯ- |
ಚ್ಚರಪತಿಯೆನಿಸಿದ [ಸು]ರತ್ನಮಾಲಿಯ ಸತಿಗೆ । ವಿದ್ಯುಲ್ಲತೆಗೆ || ೧೦೩ ||

ಸೂರ್ಯಂಜಯನಾದೈ ಕಡೆಯೊಳು ತಾ- |
ತ್ಪರ್ಯ[ದೊಳು] ತಿಲಕಸೌಂದರರೆಂಬಾ- |
ಚಾರ್ಯರ ಕರುಣದಿನೆಸೆವ ಮಹಾಶುಕ್ರದೊಳಿರದುದಯಿಸಿದೈ ||
ನಿರ್ಯಾಣದಿನಲ್ಲಿಂದನರಣ್ಯನ |
ಭಾರ್ಯೆಗೆ ಪೃಥ್ವೀಮತಿದೇವಿಗೆ ಗುಣ- |
ವರ್ಯಂ ದಶರಥನಾ[ಗಿರ್ದೈ] ನೀನೆಂದ । ಮುನಿ ಮುದದಿಂದ || ೧೦೪ ||

ನಿನ್ನಯ ನಾಲ್ಕನೆಯ ಭವದ ತಂದೆ ಜ- |
ಗನ್ನುತ[ನಾ]ನಂದಿಘೋಷಯತಿಪತಿ- |
ಯುನ್ನತ ಮಧ್ಯಮಗ್ರೈವೇಯಕದಿಂ ನಾವಾದೆವು ಬಂದು ||
ನಿನ್ನಾಱನೆಯ ಭವದ ಪಿತೃವೆನಿಸಿದ |
ಸನ್ನುತ[ಸು]ರತ್ನಮಾಲಿಯ ಭವಮಂ |
ನೀನ್ನೆಱೆ ಕೇಳೆಂದಱೆ[ಪಿ]ಯೆ ಬೆಸಸಿದನಂದು । ಮುನಿಯಿಂತೆಂದು || ೧೦೫ ||

ಕದನನಿಮಿತ್ತಂ ಸಿಂಹಪುರದೊಳಿ- |
ರ್ದಧಟನ ವಜ್ರಾಲೋಚನನೆಂಬನ- |
ನದಿರದೆ ಗೆಲಲೆಂದೊಲವಿಂ[ದೆ ಸು]ರತ್ನಮಾಲಿ ಪೋಗುತಿರೆ ||
ಇದಿರೊಳು ನಿಂದೆನ್ನಯ ಮುಂದೊರ್ವಂ |
ತ್ರಿದಶವರಂ ರಣಲಂಪಟತೆಯ ಬಿಡು |
ಮುದದಿಂದಾಂ ಪೇಟುವ ಕಥೆಯಂ ಕೇಳೆಂದ । ನನುನಯದಿಂದ || ೧೦೬ ||

೧-೧ (ಗ) ಶಶ್ರೀಪುರದ. ೨ ಮೇಲಿನ ೧೦೨ನೆಯ ಪದ್ಯದಲ್ಲಿ ಪಂಪರಾಮಾಯಣದೊಳಗಿನ "ನಂದಿವರ್ಧನ" ನನ್ನು "ಸುನಂದಿವರ್ಧನ" ನೆಂದು ಹೇಳಿದೆ. ಅದರಂತೆ ಇಲ್ಲಿ ಒಂದು ಮಾತ್ರೆ ಕಡಿಮೆಯಾಗಿರುವದರಿಂದ "ರತ್ನಮಾಲಿ" ಯನ್ನು "ಸುರತ್ನಮಾಲಿ" ಯೆಂದು ಹೇಳಿದೆ. ೩-೩ (ಕಖಗ) ನಾದೈ. ೪ ಪಂಪರಾಮಾಯಣದಲ್ಲಿ 'ವಜ್ರಲೋಚನ' ನೆಂದಿದೆ. ಅ. ೬ ಪ. ೫೪ ವ. ೫-೫ (ಗ) ಮುದದಿಂದ. ೬-೬ (ಕಖ) ನನುದಯದಿಂದ.

ಭರತದ ವಿಜಯಾರ್ಧದ ಶಶಿಪುರವರ- ।
ದರಸಂ ಶ್ರೀಭೂತಿಸುಭೂತಿವೆಸರ[೧] ।
ವರಸುತನುಪಮನ್ಯು ಪುರೋಹಿತ[ನೀತಗೆ][೩] ಸುಖಮಯನಾಗಿ ॥
ಪರಮಕಮಳಗರ್ಭವ್ರತಿಪತಿಗಳ ।
ಚರಣೋಪಾಂತದೊಳಾಭೂಪಾಲ[೦] ।
ಭರದಿಂ ಮಧುಮಾಂಸವ ಬಿಟ್ಟರಲುಪಮನ್ಯು । ಕೃತಘನಮನ್ಯು ॥ ೧೦೭ ॥

ವ್ರತಭಂಗವ ಮಾಡಲು ಕೆಟ್ಟ[ನು] ಸಂ- ।
ಸೃತಿಲತೆಯೊಳು ತೊಡರುತ್ತಂ ಘನದು- ।
ರ್ಗತಿಯೊಳು ಮಂದಾರಾಟವಿಯೊಳು ಹುಲ್ಲೆಯ ಬಸಿಱೊಳು ಪುಟ್ಟಿ ॥
ಅತಿದಾರುಣ ದಾವಾನಲನಿಂ ಸ- ।
ತ್ತತಿರೌದ್ರಂ ಕಾಂಭೋಜವಿಷಯದೊಳು ।
ಮತಿಹೀನ ಕಪಿಂಗಳನಾದಂ ಲುಬ್ಧಕನು । ಕಡುಪಾತಕನು ॥ ೧೦೮ ॥

ಎರಡನೆಯ ನರಕದೊಳು ದಾರುಣದು- ।
ರ್ಧರದುಃಖವನನುಭವಿಸುತ್ತಿರೆ ದು- ।
ಶ್ಚರಿತದ ಫಲದಿಂ ಮತ್ತಿತ್ತಲು ಕಳೆದುಪಮನ್ಯುದುರಾತ್ಮಂ ॥
ಕರಿಯಾದನು ಕಳೆದಲ್ಲಿಂ ನಿನ್ನಯ ।
ವರಸುತನೆನಿಪ ಸುಭೂತಿನೃಪಾಲಕ- ।
ನರಸಿ[ಗೆ] ಯೋಜನಗಂಧಿಗರಿಂದಮನೆಂಬಂ । ರಾಜ್ಯಾಲಂಬಂ ॥ ೧೦೯ ॥

ಆಗಿರೆ ಮುನ್ನಿನ ಕಮಳಗರ್ಭಜಿನ- ।
ಯೋಗಿಗಳಂ ಕಂಡವ ಜಾತಿಸ್ಮರ- ।
ನಾಗಿ ತೊಱೆದು ಹನ್ನೊಂದನೆಯ ಸ್ವರ್ಗದೊಳುದ್ಭವಿಸಿರ್ದು ॥
ಬೇಗದೆ ನೃಪತಿಶ್ರೀಭೂತಿಯ ನರ- ।
ಕಾಗಮನಮನವಧಿಜ್ಞಾನದಿ ನಱಿ- ।
ದಾಗಳೆ ಬಂದು [ಪ್ರತಿಬೋಧಿಸಿದಂ] ದೇವಂ । ನಿರ್ಮಲಭಾವಂ ॥ ೧೧೦ ॥

---

೧-೧ (ಗ) ವೆಸರ್ಗ. ೨ (ಗ) ರು. ೩-೩ (ಕಖ) ನಿವರಿಗೆ; (ಗ) ನೀತರಿಗೆ. ೪ (ಗ) ರಾ. ೫ (ಕಖಗ) ರ. ೬ (ಕಖಗ) ರು. ೭-೭ ಪಂ॰ರಾಮಾಯಣದಲ್ಲಿ 'ಕಿರಿಂಜಯ' ನೆಂದಿದೆ. ಆ ೬, ಪ. ೬೩ ವ. ೮ 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ. ೯-೯ (ಕಖಗ) ಪ್ರಬೋಧಿಸಿದಂ.

ಆದೇವಂ ಪ್ರತಿಬೋಧಿಸೆ ನೀಂ ಬಂ-।
ದಾದ್ಯೆ [ಸು]ರತ್ನಮಾಲಿ[ಯೆ] ಅಲ್ಲಿಂ-।
ದಾದಿವಿಜಂ ಮತ್ತೊರ್ವೆ ನಲಿದು ನೀವೆಂದಾತಂ ತಿಳಿಪೆ ॥
ಆದರದಿಂದೆ ತಿಳಕಸೌಂದರಮುನಿ-।
ಪಾದಪಯೋಜಾತದ ಕರುಣದಿನಂ-।
ದಾದಂ ಪತ್ತನೆಯ ಸ್ವರ್ಗದೊಳಮರೇಂದ್ರ । ನತದಿವಿಜೇಂದ್ರ ॥ ೧೧೧ ॥

ಅಂತುಪಮನ್ಯುಚರಾಮರನಂ ಭೂ-।
ಕಾಂತಂ ಶ್ರೀಭೂತಿಚರಾಮರನಂ।
ಸಂತಸದಿಂದಱ್ ನಿನ್ನಯ ಮೈದುನ[೧]ಜನಕಕನಕರೆಂದು[೧] ॥
ಇಂತೀ ನಾಲ್ವರ್ ನಿಮಗೆ ನೃಪಾಲ ಭ-।
ವಾಂತರಜನಿತಸ್ನೇಹಮೆನಲ್ಮುನಿ-।
ಕಾಂತಂ ದಶರಥನೆಲ್ಲವನವಱಿಂ ತಿಳಿದಂ । ಪುಳಕವ ತಳೆದಂ ॥ ೧೧೨ ॥

ಎನೆ ಮುನಿಪನ ಬೋಧಾ[೨]ತಿಶಯಮುಮಂ[೨]।
ತನಗೆ ಸಮನಿಸಿದ ಭವಸಂಚಯಮಂ।
ಜನಕಾದಿಗಳ ಪುರಾತನಭವಮಂ ಕೇಳ್ದತಿಕೌತುಕದಿಂ ॥
ಮುನಿನಾಥನನಾಗಳೆ ಬೀಳ್ಕೊಂಡಿರ-।
ದನುನಯದಿಂ ಬಂದನಯೋಧ್ಯೆಗೆ ತಾಂ।
ಜನನಾಥಂ ದಶರಥನೊದವಿರೆ ಘನಪುಳಕಂ । ಕವಿಮುಖತಿಳಕಂ ॥ ೧೧೩ ॥

---

೧-೧ (ಗ) ಜನಕನಲೆಂದ. ೨-೨ (ಗ) ಶಯಮಂ.

# ೫ ನೆಯ ಸಂಧಿ.

ರಾಗ ಭೂಪಾಳಿ. ಭಾಮಿನೀಷಟ್ಪದಿ.

ತೃಣಸಮಾನಮೆನಲ್ಸಕಲಧಾ- ।
ರಿಣಿಯುನಯ್ಯನ ನನ್ನಿಗಿತ್ತುರು- ।
ಗುಣದ ಕಣಿಯೆಂದೆಯ್ದೆ ಪೊಗೞ್ವರುದಾತ್ತರಾಘವನ ॥ ಪಲ್ಲವ ಪದ ॥

ಶ್ರೀಪತಿಕ್ಷಿತಿಪಾಲಮೌಳಿಕ- ।
ಳಾಪಮಣಿಗಣಕಿರಣಮಾಲಾ- ।
ವ್ಯಾಪಿತಂ ಶ್ರೀಪಾದಪದ್ಮಂ ದಶರಥನೃಪಾಲಂ ॥
ತಾಪಿತಾರಿವಧೂಹೃದಯನು- ।
ದ್ದೀಪಿತಾತ್ಮೀಯಪ್ರತಾಪಂ ।
ಪಾಪಭೀರು ಬರಲ್ಕೆ ಪೇೞ್ದಂ ವಾದಿಗೆಜಹರಿಯಂ ॥ ೧ ॥

ಆಗ ನೃಪನೋಲಗದೊಳಿರ್ದತಿ ।
ರಾಗದಿಂ ರಾಘವನ ತರಲತಿ ।
ಬೇಗದಿಂದಂ ಬೆಸಸೆ ಹಿಮಗಿರಿ ಬರ್ಪ ತೆಱದಿಂದ ॥
ತ್ಯಾಗಮುಂ ವೀರಮುಮುದಾರತೆ ।
ಭೋಗಮುಂ ತಾನೆನಲು ಜನಕಿಂ- ।
ಬಾಗಿ ಬಂದಂ ಸೀರಪಾಣಿ ವಿನೀಲವಾಸವನು ॥ ೨ ॥

ಸಂಜೆಗೆಂಪಾವರಿಸಿ ನಡೆತ- ।
ಪ್ಪಂಜನಾಚಲದಂತೆ ಬಂದಂ ।
ರಂಜಿಸಲು ಪೀತಾಂಬರಂ ರಾಘವನ ಬೆಂಬಳಿಯ ॥
ಕಂಜನಾಭಂ ಮಣಿಯ ಜಂಜೆಯ- ।
ದಂಜನದ್ವಿಪದಂತೆ ಹಗೆಗಳ ।
ನಂಜು ಪುಗುತಂದಂ ಸರೋಜ[ದಳಾಕ್ಷ]ಲಕ್ಷ್ಮಣನು ॥ ೩ ॥

೧-೧ (ಕಖ) ಪೊಗಳುವರು. ೨-೨ (ಗ) ಗಜಕೇಸರಿಯಂ. ೩-೩ (ಗ) ತರಲತೀವ. ೪-೪ (ಗ) ತ್ಯಾಗಮುಂ. ೫-೫ (ಕಖಗ) ದಳೇಕ್ಷಣಂ ಈ ಪಾಠಾಂತರದಿಂದ ಸಪ್ತಗಣಗಳಾಗುತ್ತವೆ. ಮೇಲಿನ ಪಾಠವು ಸ್ವಾಭಾವಿಕವಾಗಿರುವುದರಿಂದ ಅದನ್ನೇ ಇಟ್ಟುಕೊಳ್ಳಲಾಗಿದೆ. ಸಪ್ತಗಣಗಳನ್ನಿಟ್ಟುಕೊಂಡರೆ ಭಾಮಿನಿ ಷಟ್ಪದಿಯ ಲಕ್ಷಣಕ್ಕೆ ಸರಿಹೋಗುವುದಿಲ್ಲ. ಅದೊಂದು ಹೊಸ ಷಟ್ಪದಿಯೇ ಆಗುವುದು.

ಆವರಿಸೆ ರಾಮಾಂಗದೀಪ್ತಿ ಸ- ।
ಭಾವಳಯಮಂ ಕೊರಳೊಳಿರ್ದೇ- ।
ಕಾವಳಿಯ ರುಚಿ ಕೂಡೆ ಪುಂಜಿಸಲೆಱಗೆ ಜನಕಂಗೆ ॥
ಭೂವರನ ದಶರಥನ ಪದಯುಗ- ।
ಪಾವನಾಮಲಸುಖಮುಖಂ ಶೋ- ।
ಭಾವಹಂ ತಾನಾಯ್ತು ರಾಕಾಚಂದ್ರನಂದದೊಳು ॥ ೪ ॥

ಸಭೆಯ ಕಣ್ಣುಂ ಮನಮುಮೆಱಗಲು ।
ಶುಭಮತಿಗಳೊಲಿದೆಱಗಿ ತಂದೆಗೆ ।
ವಿಭುಗಳಿರ್ವರುಮಿಕ್ಕೆಲದ ಸಿಂಹಾಸನದೊಳಿರಲು ॥
ಅಭಿಮತವನಱಿಪಲ್ಕೆ ಮನದೊಳ್ ।
ಪ್ರಭವಿಸಿದ ವೈರಾಗ್ಯಮಂ ನೃಪ- ।
ನಭಿಭವಿಸೆ ದಶನಾಂಶು ಚಂದ್ರಿಕೆಯಿಂ ಸುತಂಗೆಂದಂ ॥ ೫ ॥

ರಾಮಲಕ್ಷ್ಮಣಭರತಶತ್ರು- ।
ಘ್ನಾಮಳಾಯತವಿನಯಮಧಿಕ- ।
ಪ್ರೇಮಮಂ ತನಗೀಯೆ ರಾಮಂಗೆಂದನಿಂತೆಂದು ॥
ಹೇಮಗಿರಿಯಂ ಪಡೆವ ತೆಱದಿಂ ।
ಭೂಮಹಿತನಂ ನಿನ್ನನುದಿತೋ- ।
ದ್ದಾಮಯಶನಂ [೧]ಪಡೆದೆನೆನಗಿನ್ನಾವುದರಿದುರ್ವ್ವಿಯೊಳು[೧] ॥ ೬ ॥

ಧರ್ಮಕಾಮಂಗಳು ಜನಕೆ ಫಲ, ।
ಧರ್ಮಕಾಮ[[೨]ಂಗಳು ಧನಕೆ ಫಲ][೨], ।
[೩]ಪೆರ್ಮೆಗಂ[೩] ಧರ್ಮಾರ್ಥಕಾಮಫಲಕ್ಕೆ, ಪಡೆದಿಂತು ॥
ಕೂರ್ಮೆಯಿಂ [೪]ಸಾಮ್ರಾಜ್ಯಪದಮಂ[೪] ।
[೫]ನಿರ್ಮಳಾಂತಃಕರಣ[೫]ನಾಗದ ।
ಕರ್ಮರೂಪಂ ಕ್ಷತ್ರಿಯಂ ಭೂಭಾರಕಂ ಮಗನೆ ॥ ೭ ॥

---

೧-೧ ಇಲ್ಲಿ ಸಪ್ತಗಣಗಳಾಗುತ್ತವೆ. (ಗ) ಪಡೆದೆನೆನಗಿನ್ನಾಟದರಿದು ಹೇಳುರ್ವಿಯೊಳಗೆ ಇಲ್ಲಿ ಮತ್ತೆ ಮಾತ್ರೆಗಳು ಹೆಚ್ಚಾಗಿ ಗಣಭಂಗಗಳಾಗಿವೆ. ಮಾತ್ರೆಗಳು ಹೆಚ್ಚಾಗಿರುವುದು ಪ್ರತಿ ಮಾಡುವವರ ದೋಷವೆಂದು ತೋರುತ್ತದೆ ಈ ಚರಣವನ್ನು ಹೀಗೆತಿದ್ದಬಹುದು, "**ದ್ದಾಮಯಶನಂ ಪಡೆದೆನೆನಗಾವುದರಿದುರ್ವಿಯೊಳು**" ॥ ೨-೨ (ಕಖಗ) ಧನಕ್ಕೆ ಫಲ ನೀಂ ೩-೩ (ಗ) ಪೆರ್ಮಗಂ. ೪-೪ (ಗ) ಸಾಮ್ರಾಜ್ಯಫಲದಿಂದಮಂ. ೫-೫ [ಗ] ನಿರ್ಮಳಾಂಶುಕರಣ.

ಬಡವನಗಣಿತಮೆನಿಪ ನಿಧಿಯಂ |
ಪಡೆವ ತೆಱದಿಂ ಪುತ್ರ ನಿನ್ನಂ |
ಪಡೆದೆನೆಂತಾನುಂ ಪುರಾರ್ಜಿತಪುಣ್ಯಫಲದಿಂದ ||
ಬಿಡದೆ ತೊಡರ್ವೀಮೋಹಲತೆ[ಯಿಂ][೧] |
ತಡೆಯದೆನ್ನಂ ಬಿಡಿಸು ರಾಘವ |
ಬಿಡಿಸದಿರ್ದಡೆ ನಿನಗುಪೇಕ್ಷಾದೋಷಮಾದಪುದು || ೮ ||

ತನುಜ ನಮ್ಮನ್ವಯದೊಳೆಲ್ಲರ್ |
ಜನಿಯಿಸಲ್ಮನುಜಾತರವರದ- |
ನನುನಯದೆ ಸಾಮ್ರಾಜ್ಯಪದಮಂ ಕೊಟ್ಟರಾಕ್ರಮದಿಂ ||
ಎನಗೆ ಕೊಟ್ಟಂ ಮಜ್ಜನಕನಾಂ |
ನಿನಗೆ [೨][ಕುಡುವೆಂ][೨] ಕುಡದೆ ನಿಂದಡೆ |
ಜನದ ಪರಿಹಾಸಕ್ಕೆ ಪಾತ್ರಂ ನಾನೆ ಮನುಕುಲಕೆ || ೯ ||

ನೋಟದಿಂದೊಡವಿರ್ದುದೇಂ ಕ- |
ಣ್ಬೇಟಮಂ [೩][ಕೇಳಾತ್ಮಜನೆ][೩] ಕಿವಿ- |
ವೇಟಮಂ ಕೂಟವಮನಂಗಜಕಾಟಕೂಟವನು ||
ಕೋಟಲೆಯನಾಂ ಘೋರಸಂಸಾ- |
ರಾಟವಿಯೊ[೪]ಳಿನ್ನೆವರ ಸವಿದೆಂ[೪] |
[೫]ಜೂಟಣದ[೫] ಗುಂಡಿಗೆಯೊಲಾದೆಂ ಧರ್ಮಮನಱಿಯದೆ || ೧೦ ||

ಧಾರಣನುಮಾಭೋಗಭೂಮಿಜ- |
[೬]ನಾರಯಲ್ಸೌ[೬]ಧರ್ಮಕಲ್ಪಜ- |
ನೀರಸೆಯೊಳಂ ನಂದಿವರ್ಧನನಯ್ದನೆಯ ದಿವಿಜಂ ||
ಭೂರಮಣಸೂರ್ಯಂಜಯಂ ಮ- |
[೭]ತ್ತೀರಯ್ದನೆಯ[೭] ಕಲ್ಪಜಂ ಪೆಱ- |
ರಾರು [೮]ದಶರಥನಿಂತು ತಿರಿತರುತಿರ್ದನಾಂ[೮] ಮಗನೆ || ೧೧ ||

---

೧ (ಕಖಗ) ಯುಂ. ೨-೨ (ಕಖಗ) ಕೊಟ್ಟಂ. ೩-೩ (ಕಖ) ಕೇಳ್ದಾದಂ; (ಗ) ಗ್ರಂಥಪಾತ. ೪-೪ (ಗ) ಳಿನ್ನೆವರಸದಿಂ. ೫-೫ (ಗ) ಟಾಟಣದ. ೬-೬ (ಗ) ನಾನಯಲ್ಸೌ. ೭-೭ ಇಲ್ಲಿ ಗಣವಿಭಾಗವಾಗಿದೆ. ೮-೮ (ಗ) ದಶರಥನಿಂತಿರುತಿರ್ದನಾಂ.

ಜನಪತಿ ಶ್ರೀಭೂತಿ ಹರಿಣಂ ।
ವನಚರಂ ನಾರಕನೆನಗೆ ಮೂ- ।
ಱನೆಯ ಭವದಂದಿನ ಜನಕನಂ ನೋಡಿ ರತಿಯಾಗಿ ॥
ಎನಗೆ ಮೈದುನ ಜನಕನಾದಂ ।
ನಿನಗೆ ಮಾವಂ ಘೋರಸಂಸೃತಿ- ।
ವನಧಿಯೊಳು ತೊಳಲದವರಾರ್ಜಿ[೧]ನವರನನುಳಿ[೧]ದವರು ॥ ೧೨ ॥

ಹತಮತಿ ಶ್ರೀಭೂತಿಯ ಪುರೋ- ।
[೨][ ಹಿತನಿಭನುಮಾಗಿ ][೨] ತತ್ಪೌತ್ರನು- ।
ಮತಿಶಯಾಮರನುಂ ಕ್ಷಿತಿಯೊಳೀಗಳ್ಕನಕನಾದಂ ॥
ಮೃತಿಜನಕ ಸಂತತಿಯ ಕಂಡಾ- ।
ನತಿಭಯಾಕುಲನಾದೆನಱಿದೆಂ ।
[೩]ಯತಿಪತಿಯ[೩] ದೆಸೆಯಿಂದ[೪]ಮೀಗಳು ಮೋಕ್ಷಮಾರ್ಗವನು ॥ ೧೩ ॥

ಎನಗಿದಕ್ಕೈದನೆಯ ಭವದೊಳು ।
ಜನಕನೆನಿಸಿದ ನಂದಿಘೋಷಂ ।
ಮುನಿವಿನೂತನು ಪರಮಗ್ರೈವೇಯಕದಿನೆಯ್ತಂದು ॥
ಜನನಜಲಧಿಯಿನೆನ್ನ ದಾಂಟಿಸ- ।
ಲನುಪಮರ್ಬಿಜಯ[೫][ ವನು ][೫] ಗೆಯ್ದ[ ರು ][೬] ।
ಜಿನಮುನೀಂದ್ರಸ್ಸರ್ವಭೂತಹಿತರ್ತನೂಜಾತ ॥ ೧೪ ॥

ಉರಿಯುಮನುಮತಿಯುಂ ವಿಮುಂಚಿಯು- ।
ಮಿರದೆ ತೊಱೆದು ದಿವಿಜಗತಿಯಿನವ- ।
ತರಿಸಿಯೀಗ ವಿದೇಹಿ-ಪುಷ್ಪವತೀ[೭][ಂದುಗತಿಯಾಗಿ ] ॥[೭]
ಧರೆಯೊಳಿರ್ದುದ ನೀನೆ ಕಂಡೈ ।
ದುರಿತವಶದಿಂ ಘೋರಸಂಸೃತಿ- ।
ಶರಧಿಯೊಳು [೮]ನವೆಯಿಸದಿರೆನ್ನನುದಾತ್ತ[೮]ರಘುಜಾತ ॥ ೧೫ ॥

---

೧-೧ (ಕಖ) ಜಿನರುಂದುಳಿ. ೨-೨ (ಕಖ) ಹಿತನುವಿಭಮುಂ; (ಗ) ಹಿತನು ವಿಭುಮುಂ; "ಹಿತನುವಿ ಭಮುಂ ಅವನ ಪೌತ್ರನು" ಎಂಬುದೊಂದು ಸೂಚನೆಯು ಬಂದಿದೆ. ಇದರಲ್ಲಿ ಮೂರೂ ಪ್ರತಿಗಳಲ್ಲಿರುವ 'ತತ್' ಶಬ್ದವು ಲೋಪವಾಗಿದೆ. ಮೇಲೆ ಹೆಚ್ಚಾಗಿ ಬಂದಿರುವ "ಆಗಿ" ಎಂಬ ಪದವು ಪಂಪರಾಮಾಯಣವನ್ನನುಕರಿಸಿ ಇಡಲಾಗಿದೆ. ೩-೩ (ಕಖ) ಯತಿಪ. ೪ (ಕಖ) ಲೀ. ೫-೫ (ಕಖಗ) ೦. ೬ (ಕಖಗ) ರೀ. ೭-೭ (ಕಖಗ) ಖಚರಪತಿಯಾಗಿ, ಪಂಪರಾಮಾಯಣದಲ್ಲಿ "ಇಂದುಮತಿ" ಎಂದಿದೆ. ೮-೮ (ಗ) ನವಯಿಸದಿದಿರೆನವದಾತ್ತ.

ಅರ್ಥಮಪ್ಪೊಡೆ ಪಾಪಕೋಪಾ- |
ನರ್ಥದಿಂದಲ್ಲದೆ ಸಮನಿಸದು |
[೧] [ಅರ್ಥಿಗರ್ತಮತಮಗದಂ] [೧] ಭೋಗಿಸುವ ಕಾಲದೊಳು ||
ವ್ಯರ್ಥದುಃಖಮೆನಿಪ್ಪ ನರಕದ |
ವರ್ತನೆಯನನುಭವಿಸುವಂದುಂ |
[೨] [ಸ್ವಾರ್ಥಮೊಂದದುಮಿಲ್ಲ] [೨] ತಾನೇ ಪಡೆಗುಮುದವಟಿಲಂ || ೧೬ ||

ನವನಿಧಿಯುಮೀರೇೞುರತ್ನಂ !
ಹವಣುಗಳಿದ ಷಡಂಗಬಲಮುಂ |
ಯುವತಿರತ್ನಂ ಬಗೆಯೆ ತೊಂಬತ್ತಾಱುಸಾಸಿರಮುಂ ||
ವಿವಿಧದಶವಿಧಭೋಗಮುಂ ಬಾಂ[೩]- |
ಧವರನೇಕರುಮಿರಲು [೩]ಬಿಟ್ಟ- |
ಭುವನಮಂ ಧರೆ ಹೊಗಳೆ ದ್ವಾದಶಚಕ್ರವರ್ತಿಗಳು || ೧೭ ||

ಚಮರಿಚಯಮುಂ ಮತ್ಸ್ಯಕುಳಮುಂ |
ಭ್ರಮರತತಿಯುಂ [೪]ಸ್ತಂಭಗಣಮುಂ[೪] |
ಸಮದಗಜಘಟೆಯುಂ ಬಗೆವೊಡೊಂದೊಂದೆ ವಿಷಯದೊಳು ||
ರಮಿಯಿಸಲ್ಬಂದೆಱಗಿ ಕೆಟ್ಟುವು |
ತಮಗನರ್ಥಂ ಮಾಡಿಕೊಂಡುವು |
ಕ್ರಮದೆ ಪಂಚೇಂದ್ರಿಯ [೫]ವಶ[೫]ಗತರ್ಗಾಗದುದುಮುಂಟೇ || ೧೮ ||

ತೆರಳ್ದುವಲಸಿತ ತೆಱದಿ ಮೊಗಮುಂ |
ಸುರುಳ್ದುವವಚತ್ರಂತೆ ದೇಹಂ |
ನರೆ ಶಿರದೊಳೊಗೆದುವು ಯಮನ ಘನಸಿತಪತಾಕೆಯೆನೆ ||
ಜರೆ ಪಿರಿಯ ಮೃತ್ಯುವಿನ ದೂತಿಯ |
ಪರಿಯಲೆನ್ನಂ ಕರೆಯುತಿರ್ದಪು- |
ದಿರದೆ ಗೆಲ್ವೆಂ ತಪದಿನವರಂ ಹಗೆಯ ಗೆಲ್ವಂತೆ || ೧೯ ||

---

೧-೧ (ಕಖ) ಅರ್ತ್ಥಿಗರ್ತ್ಥಮತಮಗದಂ; (ಗ) ಅರ್ಥಿಗರ್ಥಮಗಪಂ. ೨-೨ (ಕಖ) ಸ್ವಾರ್ಥಮಿರ್ವಱುಮಿಲ್ಲ; (ಗ) ಸ್ವಾರ್ಥಮೊರ್ಪದುಮಿಲ್ಲ. ೩-೩ (ಗ) ಬಾಂಧವನೆಕರುಮಿರಲು. ೪-೪ (ಗ) ಸಕಲಭಗಣಮುಂ. ೫-೫ (ಗ) ದಸ.

ತಿಲಕಮೆನೆ ಸಾಮ್ರಾಜ್ಯಪಟ್ಟಂ |
[೧]ನಿಲ್ಕೆ[೧] ನಿನ್ನ ಲಲಾಟಪಟ್ಟದೊ- |
ಳೊಲಿದು ನೆಲಸುಗೆ [[೨]ಭುಜದೊಳಂಗದದಂತೆ[೨]] ಭೂವನಿತೆ ||
ಲಲಿತಧವಳಚ್ಛತ್ರದಿಂ ತ- |
ಣ್ಣೆಳಲನೊದವಿಸು ಮಕುಟಲಕ್ಷ್ಮಿಗೆ |
ತಳೆವೆನಾನಪವರ್ಗಲಕ್ಷ್ಮಿಯ [೩]ಕುಚಸಮಾಲಿಂಗನವಮಂ[೩] || ೨೦ ||

ಎನೆ ವಿನಯವಿನಮಿತಶಿರಂ ಪಾ- |
ವನಕರಾಂಭೋಜಂಗಳಂ ಮುಗಿ- |
ದನುನಯಮನೊದವಿಸಲು ಚಂದ್ರಿಕೆಗಾತ್ಮದಶನಾಂಶು ||
ಅನುನಯದಿನಿಂತೆಂದನಾಗಳು |
ಮನುಕುಲದ ಪೂರ್ವಕ್ಷಿತೀಶ- |
ರ್ಜನಕ ನಿಮಗೊಪ್ಪಿಸಿದರೆಳೆಯಂ ನನಗದೆಲ್ಲಿಯುದು || ೨೧ ||

ಕಮಠನಗಿದಂ ಸುಗಿದನಹಿಪತಿ |
ಸಮುದದಿಗಿಭಂಗಳ್ಕುಸಿದುವು- |
ತ್ತಮಭುಜಾದಂಡದೊಳು ರಿಪುಗಿರಿವಜ್ರದಂಡದೊಳು ||
ಹಿಮಧರಾಧರಮುವಧಿಯಾದ ವ- |
ಸುಮತಿಯಂ ಕಸ್ತೂರಿಕಾಕ- |
[೪]ರ್ದಮ[ವ][೪] ತಳೆವಂದದೊಳೆ [೫]ಪರಿಹರಿಸ[೫]ಮರ[೬]ದೇಸಿಯನು[೬] || ೨೨ ||

ಅಗಿದು ಕಮಠನ ಕಠಿನಕರ್ಪರ- |
ಕುಗಿದುರಗಪತಿಯತಿವಿಷಮತೆಗೆ |
ಸುಗಿದು ದಿಗ್ಗಜದುದ್ಧತಿಕ್ಕೆಗೆ [[೭]ತಳೆದ] [೭]ಕುಲಗಿರಿಗೆ ||

---

೧-೧ (ಕಖಗ) ಛಂದೋಭಂಗವಾಗಿದೆ. ೨-೨ (ಕಖ) ಭುಜಯುಗದೊಳಂಗದದಂತೆ; (ಗ) ಭುಜಯುಗದಂತೆ. ೩-೩ (ಕಖಗ) ಪ್ರತಿಗಳಲ್ಲಿ **ಸಪ್ತಗಣಗಳೆಂದು** ಒಂದು ಸೂಚನೆ. ೩ನೆಯ ಚರಣದಲ್ಲಿ (ಕಖಗ) ಪ್ರತಿಗಳ ಮೇರೆಗೆ ಗಣವಿಭಾಗವಾಗಿರುವದರಿಂದ ಅಲ್ಲಿ **ಸಪ್ತಗಣ**ಗಳೆಂದು ಅವರು ಒಪ್ಪುವದಿಲ್ಲ. "ಕುಚ, ಅಥವಾ ಸಮು" ಎಂಬ ಪದಗಳಲ್ಲಿ ಒಂದನ್ನು ಲೋಪಿಸಿದರೆ ಚರಣವು ಸರಿಯಾಗುತ್ತದೆ. ಆ ಪದವು ಪ್ರಕ್ಷಿಪ್ತವಾಗಿರಬಹುದು. ೪-೪ (ಕಖ) ರ್ದಮುಮ; (ಗ) ರ್ದಮುವು. ೫-೫ 'ತಳೆವಂದದೊಳೆ' ಎಂಬ ಪದಕ್ಕೆ 'ಪರಿಹರಿಸು' ಎಂಬ ಪದವು ಸಮನ್ವಯ ವಾಗುವದಿಲ್ಲ. 'ಪರಿಧರಿಸು' ಎಂದಿರಬಹುದೋ? ೬-೬ (ಗ) ದೇಸೆಯನು. ೭-೭ (ಕಖ) ತಳೆದು; (ಗ) ತಳೆದು.

ಜಗದಧೀಶ್ವರ ನಿಮ್ಮ ಭುಜದೊಳ್ ।
ಬಗೆ ಮಿಗಲು ಭೂರಮಣಿ ನಿಂದಳು ।
ವಿಗಳಿತಶ್ರಮಮಾದುವವು [೧]ಪರಿಹರಿಪೆ[೧]ನಾನೆನ್ನಂ ॥ ೨೩ ॥
ಅಂಬುಜಪ್ರಿಯನಾತ್ಮಕರದಿಂ ।
ದಂಬರಮನುರೆ ಬೆಳಗುವಂತಿರ- ।
ಳುಂಬಮಾಗಿರೆ ಬೆಳಗಲಾರ್ಪವೆ ಕೀಟಕದ್ಯೋತಿ ॥
ಅಂಬುನಿಧಿಯನಗಸ್ತ್ಯನೀಂಟಿದ- ।
ನೆಂಬ ಬಗೆಯಿಂದುಳಿದ ಮನುಜಕ- ।
ದಂಬಮೀಂಟಲು ನೆಱೆವುದೇ ಜಗದೀಶ [೨]ನೆಮ್ಮಳವೆ ॥ ೨೪ ॥
ತಮಮನಿನನಲೆವಂದದಿಂ ದು- ।
ರ್ದಮವಿರೋಧಿನೃಪಾಲಕೋಪದ ।
ತಮಮನಲೆ ನಿಜನಿಶಿತಬಾಣ[೩]ಕಲಾಪ[೩]ವಲ್ಲದವು ॥
ಸಮರ[೪]ಬಾಲಕರೆಮ್ಮ[೪]ಶಸ್ತ್ರದ ।
ಸಮುದಯಂಗಳ್ಕಾಯಲಾರ್ಪವೆ ।
ಎಮಗೆ ಬೆಸಸುವ ಕಾರ್ಯ[೫]ಮತ್ತಿದವಾರ್ಯ[೫]ಶೌರ್ಯಕೃತಂ ॥ ೨೫ ॥
ಎನೆ ಮಗನ ವಿನಯಕ್ಕೆ ನರಪತಿ ।
[೬]ಮನದೊ[ಳಂ][೬] ತಾಂ ಮೆಚ್ಚಿ ಮತ್ತಂ- ।
ದನುನಯದಿನಿಂತೆಂದನಂತೆನಲಾಗ[೭]ದೆವ್ಮಾಣೆ[೭] ॥
ಮನುಕುಲಕ್ಕಿದು ಪಾಳಿ ನಿನಗಂ ।
ಜನಕವಚನಂ ಮೀಱಲಕ್ಕುಮೆ ।
ಜನನಯನಕೈರವವನಪ್ರಿಯಸೋಮ [೮]ಪೇೞ್ದ್ರಾಮಾ[೮] ॥ ೨೬ ॥
ಅಂತು ರಾಮಂ ರಾಜ್ಯದೊಳ್ನಿಲು -।
ವಂತು ಮಾಡಲು ದಶರಥಂ ಘನ- ।
ಸಂತಸದೆ ಕರಕಮಲಮುಕುಳಿತನಾಗೆ ತಾಂ ಭರತಂ ॥
ಅಂತರಂಗದೊಳೆನಗೆ ವೈರಾ- ।
ಗ್ಯಂ ತುಳುಂ[೯]ಕಾಡುತ್ತಮಿರೆ[೯] ಭಯ- ।
ದಿಂ ತ್ವರಿತ ಬಿನ್ನವಿಸದಿರ್ದೆಂ ಬರ್ಪೆ ನಿಮ್ಮೊಡನೆ ॥ ೨೭ ॥

---

೧-೧ (ಗ)ಪರಿಹರಿಸೆ ೨(ಗ) ನೆ. ೩-೩ (ಗ)ಕಜ್ರಳಾಪ. ೪-೪ (ಗ) ಜಾಲಿಕರೆಮ್ಮ. ೫-೫ (ಕಖ) ಮತ್ತಿದದಾರ್ಯ. ೬-೬ (ಕಖ) ಮನದೊಳೆ; (ಗ) ಮನದೊಳೆಂ; "ಮನದೊಳಗೆ" ಎಂಬುದೊಂದು ಸೂಚನೆ. ೭-೭ (ಕಖ) ದೆಂಮಾಣೆ; (ಗ) ದೆ ಮಾಣೆ. "ದಾಂ ಮಾಣೆ" ಎಂಬುದೊಂದು ಸೂಚನೆ. ೮-೮ (ಕಖ) ಪೇೞ್ದಿದನು. ೯-೯ (ಗ) ಕಾಡುಮುತ್ತಮಿರೆ.

ನಳಿನದಳಗತಸಲಿಲ [ [೧]ತೆಱದಿಂ ।
ಚಳಮುಮಾಯುಂ ಯೌವನ ][೧]ಶ್ರೀ- ।
ಬಲವಿಭವಮೆಂದಱಿದು ಬಿನ್ನವಿಸಲ್ಕೆಡೆದೆನಂಜಿ[೨] ॥
ಬಳವದಂಗಜಗಜದ ದಂತವ ।
ಕಿಳುವವೊಲ್ದು ಮೋಹಲತೆಯಂ ।
ಕಿಳುವೆನಾಂ ನಿಮ್ಮೊಡನೆ ತಳೆವೆಂ ಪರಮುಚಿತ್ಸುಖಮಂ ॥ ೨೮ ॥

ಒಂದು ನಿರವಧಿದುಃಖದಾಯಕ- ।
ವೊಂದು ನಿರುಪಮಸೌಖ್ಯದಾಯಕ- ।
ವೊಂದು ದೋಷವಿಧಾಯಿಯೊಂದತಿ ಸದ್ಗುಣವಿಧಾಯಿ ॥
ಒಂದು ಸಂತೋಷೈಕಸಾಧನ- ।
ವೊಂದು ಶಾಂತರಸೈಕಸಾಧನ- ।
ವೊಂದುವೀನೃಪಪದವಿಯುಂ ಮುನಿಪದವಿಯುಂ ಸರಿಯೆ ॥ ೨೯ ॥

ಭರದೆ ರಾಮಂಗಿತ್ತು ರಾಜ್ಯಮ- ॥
ನಿರದೆ ದಶರಥನುಂ ಭರತನುಂ ।
[೩]ಪರಮದೀಕ್ಷೆಯ[೩] ಕೈಕೊಳಲ್ಕುದ್ಯುಕ್ತರೆಂದಾಗ ॥
ತ್ವರಿತದಿಂದಂ ಪೋಗಿಯೊರ್ವಳು ।
ತರುಣಿ ಕೈಕೆಗೆ ಪೇಟ್ದಿಳಿತ್ತಲು ।
ಶರದನಿನದಕ್ಕಗಿವ ಹಂಸೆಯೊಲಾಗಿಸಿದ[೪]ಳಾಕೆಯನು[೪] ॥ ೩೦ ॥

ತಳೆಯೆ ದಶರಥನೃಪತಿ ದೀಕ್ಷೆಯ- ।
ನಿಳೆಗಧೀಶಂ ರಾಮನಕ್ಕುಂ ।
ಬಳಿಕ [೫]ಕಿಂಕರಭಾವಮೆನ್ನೊ[೫]ಳು ಸಮನಿಸುವುದೆಂದು ॥
ತಳೆದಪಂ ತಪಮಂ ಭರತನೆಂ ।
ದಳವಳಿದು ಕಳವಳಿದು ಮೂರ್ಛೆಯ ।
ತಳೆದು [೬]ಮತ್ತೆಚ್ಚತ್ತು ಚಿಂತಿಸಿ[ ಯ ]ಳುತಮಿರೆ[೬] ಕೈಕೆ ॥ ೩೧ ॥

---

೧-೧ ( ಕಖ ) ಸಂಚಯಲಮುಮುಮಾಯುರ್ಯವ್ವನ; ( ಗ ) ಸಂಚಲಮಯಮುಮಾಯು ಯವ್ವನ. ೨-೨ ( ಗ ) ಸಲ್ಸೆಡೆವೆನೆಂಬಿ. ೩-೩ ( ಕಖ ) ಪರಮದೀಕ್ಷೆಯನೆ. ೪-೪ ( ಕಖಗ ) ‘ ಳಾಕೆಯನು ’ ಎಂಬ ಪಾಠದಿಂದ ಸಪ್ತಗಣಗಳಾಗುತ್ತವೆ. ಅದಕ್ಕೆ ಬದಲಾಗಿ ‘ ಳಾಗ ’ ಎಂದು ಇಟ್ಟುಕೊಂಡರೆ ಛಂದೋನಿಯಮಕ್ಕೆ ಸರಿ ಹೋಗುತ್ತದೆ. ೫-೫ ( ಗ ) ಕಿನ್ನರಭಾವ ಮೆಯ್ಯೊಳು. ೬-೬ ( ಕಖ ) ಮತ್ತೆಚ್ಚತ್ತು ಚಿಂತಿಸಿದಳಳುತಮಿರೆ; ( ಗ ) ಮೆಚ್ಚತ್ತು ಚಿಂತಿಸಿದಳುತಮಿರೆ.

ತನಯನಿನಿಯನ ಕೂಡೆ ಪೋದಂ- |
ದೆನಗೆ ಪೆಱರಾರ್ಶರಣು [೧]ಸತಿಯರು |
[ ಅ ]ನುಚಿ[೧]ತೋಕ್ತಿಗಳಿಂದೆ ಹಂಗಿಸದಿರ್ಪರೇ ಮುನಿಸಿಂ ||
ವಿನಯಮಂ [೨]ಮಾಡುವ[೨]ರೆ ಬಳಿಕಂ |
ನೆನೆವರೇ ತತ್ಪುತ್ರರೆನ್ನಂ ।
ಜನನಿಯೆಂಬರೆ ಬಗೆವರೇ ಬೆಸಕೆಯ್ವರೇ ಪೆಱರು || ೩೨ ||

ಎನುತ ಚಿಂತಿಸುತಿರ್ದ್ದ ಭೋಂಕನೆ |
ನೆನೆದಳಿನಿಯಂ ತನಗೆ ಕೊಟ್ಟಂ- |
ದಿನ ಬಯಕೆಗೊಟ್ಟಿರ್ದ್ದ ಮೆಚ್ಚಂ ನಿಚ್ಚತಂ ನಲಿದು ||
ಮನದೊಳಗೆ ಗುಡಿಗಟ್ಟಿ ದಶರಥ- |
ಜನಪನಿರ್ದ್ದಾಸ್ಥಾನಮಂ ಮೋ- |
ಹನಕಳಿಕೆ [೩]ಪುಗುವಂ[೩]ತೆ ಪೊಕ್ಕಳು ಕುಟಿಲಕುಂತಳೆಯು || ೩೩ ||

ನೆರೆದ ಸಭೆಗುದ್ವೇಗ[೪]ಭರಮುಂ[೪] |
ಧರಣಿಪತಿಯಭಿಮತಕೆ ವಿಘ್ನಂ |
ಭರತಶತ್ರುಘ್ನರಿಗನಿಷ್ಟಂ ರಾಘವಂಗಿಷ್ಟಂ
ಗುರುಜನಕ್ಕದವಟಿಲು ಬರ್ಪಂ- ।
ತಿರೆ [೫]ಬಗೆಯುದಪಕೀರ್ತಿ[೫]ಯುಂ ಕುಲ- |
ಪರಿಭವಮುಮಂ ನೆನೆಯದೆಯ್ತಂದಳ್ಭರದೆ ಕೈಕೆ || ೩೪ ||

ಪರಿಭವಂ ತನಗೆಂದು ನೆನೆಯದೆ ।
ಗುರುಜನಂಗಳ್ಗಳುಕಿ ನಿಲ್ಲದೆ |
ನೆರೆದ ಸಭೆ ನಿಂದಿಸುವುದೆನ್ನದೆ ದುರ್ಗತಿಗಗಿಯದೆ ||
ಧರಣಿಪತಿಗಿಂ[೬]ತೆಂದಳೆನಗಾ- ।
ದರದೆ ದೇವಕೊರ್ಟ್ಟ ಮೆಚ್ಚಂ- |
ಕರುಣಿಸುವುದೆಂದೆನಲು ದಶರಥನೆಂದನಿಂತೆಂದು || ೩೫ ||

---

೧-೧ ( ಕಖ ) ಸತಿಯರ । ರನುಚಿತೊಕ್ತಿ; ( ಗ ) ಸತಿಯರನುಚಿತೋಕ್ತಿ. ೨-೨ ( ಕಖ ) ಮಾಡುವಂ. ೩-೩ ( ಕಖ ) ಪೊಗುವಂತೆ. ೪-೪ ( ಕಖ ) ಭರಮುಂ. ೫-೫ ( ಗ ) ಬಗೆದಪಕೀರ್ತಿಂ ೬. ( ಗ ) ದೆ.

ನುಡಿದೆರಡ ನುಡಿದಂದು ನಗುಗುಂ ।
ಪೊಡವಿ ನಿನ್ನಯ ಮೆಚ್ಚನಂಜದೆ ।
ತಡೆಯದೀಗಳೆ ಬೇಡಿಕೊಳ್ಳೊದಳುಂಟೆ ಮನುಕುಲಕೆ ॥
ನುಡಿಯದಿರ್ದೀಕ್ಷ್ವಾ[೧]ವಿಘಾತವ[೧]- ।
ನೊಡರಿಸುವ ನುಡಿಯಂ ನುಡಿದೊಡಂ ।
ಕುಡೆನದೊಂದಂ ಕೊಟ್ಟೆನುಳಿದುದನೆಯ್ದ ಶಶಿವದನೆ ॥ ೩೬ ॥
ನಿರವಿಪುದು ಸಾಮ್ರಾಜ್ಯಪದವಂ ।
ಭರತನೊಳು ಪದಿನಾಲ್ಕು ವರುಷಂ[೨] ।
ಧರಣಿಪಾಲಕನೆಂಬುದಂ ದಶರಥನದಂ ಕೇಳ್ದು ॥
ಉರಿಯನಾಲಿಂಗಿಸಿದ ವ್ರೊಲ್ನಂ- ।
ಜುರುಳಿಯಂ ಸೇವಿಸಿದ ವ್ರೊ[೩]ಲ್ನಿ- ।
ಷ್ಠುರತರಂ ತನಗಾಗೆ ಮಲುಮಲ ಮಱುಗಿದಂ ನುಡಿಗೆ[೩] ॥ ೩೭ ॥
ಎರಡ ನುಡಿದಡೆ ಮನುಕುಲಕ್ಕತಿ ।
ಪರಿಭವಂ ಪುಸಿ ನುಡಿದನೆಂಬರ್ ।
ಧರೆ [[೪]ಪೞಿಗು][೪] ವಸುಗತಿಗಿಳಿಗುಮುನ್ನತಿಗೆ ಕೇಡಕ್ಕುಂ ॥
ಪಿರಿಯನಿ[೫]ರೆ ಕಿಱಿಯಂಗೆ ಕೊಟ್ಟಡೆ ।
ಸ್ಮರವಶಂ ಕಡುಮೋಹಿಯೆಂಬ[೬]- ।
ರ್ಪಿರಿದು[೬] ಸಿಕ್ಕಿದೆನೆಂದು [[೭]ಚಿಂತಿಸುತಿರಲು][೭] ದಶರಥನು ॥ ೩೮ ॥
ಎನಗನಿಷ್ಟಂ[೯] ಪತಿಗ[ವಿ[೮]]ನಯಂ ।
ಜನಕತೀವ ವಿ[ಷಾ]ದವ[ನ[೧೦]]ಯಂ ।
ಮನುಕುಲಕ್ಕೆ ದುರಂತ-ದುರ್ಗತಿ ತನಗೆ ಭಾವಿಸದೆ ॥
ಜನನಿ ನುಡಿದಳಿನುತ್ತ ಲಜ್ಜಾ- ।
ವನತಮಸ್ತಕನಾಗಿ ಭರತಂ ।
ಮುನಿದು ತಾಯಿಗೆ ನೆಱೆಯ[ದೇ[೧೧]] ಕೀಲಿಸಿದವೋಲಿರಲು ॥ ೩೯ ॥

---

೧-೧ (ಕಖ) ವಿಹಿತವ. ೨ (ಕಖಗ) ಮ. ೩-೩ (ಕಖ) ವ್ರೊಲ್ । ಭರದೆ ತನ್ನೊಳು ಚಿಂತಿಸುತ್ತಂ......ದೊಳು ನೆನೆದಂ ॥ ೪-೪ (ಕಖಗ) ಪಳಿಗು. ೫ (ಗ) ಲೆ. ೬-೬ (ಗ, ಬಿ । ಪ್ಪಿರಿದು. ೭-೭ (ಕಖಗ) ಚಿಂತಿಸಿ ಸುಮ್ಮನಿರೆ. ಹೀಗೆಯೇ ಇಟ್ಟರೆ ಸಪ್ತಗಣಗಳು. ೮ (ಕಖ) ಗ್ರಂಥಪಾತ; (ಗ) ನು. ೯ (ಕಖಗ) ವಾ. ೧೦ (ಕಖಗ) ನೆ. ೧೧ (ಕಖಗ) ಲಾಬ್ರಿದೆ. ಇದ್ದಂತೆ ಇಟ್ಟುಕೊಂಡರೆ ಸಪ್ತಗಣಗಳು.

ಶಠೆಯರತಿವಂಚಕಿಯರಘಕ- |
ರ್ಮಠೆಯರತಿಪಾಪಿಗಳು ಲೋಕದ |
[1][ವಠರೆಯಘಾರ್ತಕಿಯರಂಜರ್ನಂಜೆ[1]]ನುರುಳಿಯರು ||
ಕಠಿನೆಯರ್ ಕುಲಟೆಯರು ವಾಚಕ- |
ಪಠನಶೀಲೆಯರಾತ್ಮವಂಶೋ- |
ಲ್ಲುಠನಕೃತಕಿಯರೆಂದರೆಲ್ಲ[ರ್[2]] ಸತಿಯರೆಲ್ಲರುಮಂ || ೪೦ ||

ಖೇದಮಂ ಭರತಂಗೆ ಘನನಿ- |
ರ್ವೇದಮಂ ಜನಪತಿಗೆ ಜನಕೆ ವಿ- |
ಷಾದಮಂ ಮನುಕುಲಕತೀವಪ್ರಮಾದಮನಱಿಯದೆ ||
ಮೇದಿನಿಯನಿಂತೇಕೆ ಬೇಡಿದ- |
ಳಾದಳೇಕತಿಮರುಳುಮದನೋ- |
ನ್ಮಾದವೋ ಹಂ ಮುಂದುಗಾಣಿಸದೆಂಬ ನುಡಿ ತೊದಳೊ[3] || ೪೧ ||

ನುಡಿಯೆರಡು ತನಗಕ್ಕುವೆಂದೀ- |
ಪೊಡವಿಯಂ ದಶರಥನೃಪಾಲಂ |
ಕುಡು[4]ಗೆ ಕೊಟ್ಟಡಮೇನೊ ಲಕ್ಷ್ಮ[5]ಣನೀವನೇ ಸಲಲು[5] ||
ಕಡುಗುವರಿಗಳ ಬೆನ್ನ ಬಾರಂ |
ಬಿಡಿಸುವಡೆ ರಾಘವನೆ ಬಿಡಿಸುಗು |
ಬಿಡಿಸಲಾರ್ಕುಮೆ ಭರತಗಿರತನ ಬಿಲ್ಲುಮಂಬುಗಳು || ೪೨ ||

[6]ಏನುತ ಕೈಕೆಯನೆಲ್ಲ ನಿಂದಿಸಿ[6] |
ತನತನಗೆ ನುಡಿಯುತ್ತಮೆಲ್ಲಂ |
ಮನಕೆ ಬಂದಂದದಿನೆನುತ್ತಿರೆ ನೆರೆದ ಪರಿಜನವು ||
ವಿನಯವಿನಮಿತಕರಕಮಲನಂ- |
ದನುನಯದಿನಿಂತೆಂದನಿಂತೀ- |
ಮನುಕುಲದೊಳೆರಡುಂಟೆ ನುಡಿ ಕುಡಬೇಕು ದೇವೆಂದಂ || ೪೩ ||

---

೧-೧ (ಕಖ) ವಠೆಯಘಾರ್ತಕಿಯರಂಜರ್ನಂಜೆ; (ಗ) ವಠಿರೆಯಪಾರ್ತಕಿಯರನ್ನಂಜೆ. ೨-೨(ಕಖಗ) ಂ. ೩ (ಗ) ಳೇ. ೪ (ಕಖ) ವೆ. ೫-೫ (ಗ) ನಿವನೆ ಸಲು. ೬-೬ (ಖ) ನುತಕೈಕೆಯ ನೆಲ್ಲರ್ನಿಂದಿಸೆ.

ಜನಕನಚಲಿತವಚನನೆನಿಕುಂ |
ಜನನಿಯಿಷ್ಟಂ ಸಂದುದಕ್ಕುಂ |
ಮನುಕುಲಕ್ಷಿತಿಪತಿಯಶೋಲತೆ ಪರ್ವುಗುಂ ಜಗಮಂ ||
ಅನುಜನಾಳ್ಗುಂ ರಾಜ್ಯಪದಮಂ |
ಮನದಭಿಮತಂ ಕೈಗೆ[೧] ಸಾರ್ದುದು |
ಜನಪೊಗಳೆ ಸಾಮ್ರಾಜ್ಯಪಟ್ಟಂ ನಿಲ್ಕೆ ಭರತನೊ[೨]ಳು || ೪೪ ||

ಮಗನೆನಿಪವಂ ಮಾತೃಪಿತೃಪದ- |
ಯುಗಳಭಕ್ತನಿ[ಹ[೩]]ತ್ರಿಗೆ ಪರ- |
ತ್ರಿಗೆ ಹಿತವ ಬಯಸುವನದಿಲ್ಲದವಂ ಕುಪುತ್ರಕನು||
ಜಗದಧೀಶನ ನನ್ನಿ ನಿಲ್ಕುಂ |
ಬಗೆದು ನೋಡುವಡನುಜ[ನ[೪]ಕ್ಕಮಿ- |
ಳಿಗೆ ರಮಣನಾಂ[೪]] ಕುಡವೆ[೫]ನಿನ್ನೆಂದು[೫] ಪುಳಕಿತನಾದಂ || ೪೫ ||

ಪಿರಿಯನಿರೆ ಕಿಱಿಯಂಗೆ ಕೊಟ್ಟಡೆ |
ಧರೆ ಪೞಿಗುಮೆಂಬೇ[೬]ವದಿಂದಂ[೬] |
ಧರಣಿಪತಿ ಕುಡದುಸಿರದಿರ್ದಂ ಕುಡುವೆ ನಾನೆಂದು ||
ಕರಯುಗಂಗಳ ಮುಗಿದು ಕೈಕೆ[ ಗೆ[೭] ]
ದ[೮]ರಹಸಿತವದನಾರವಿಂದಂ |
ಪಿರಿದು ರಾಗದೆ ಪುಳಕಮಂ ತಳೆದೆಂದನಿಂತೆಂದು || ೪೬ ||

ಎನಗಿದಂ ಬೆಸಸಿದೊಡೆ ಸಾಲದೆ |
ಜನಪತಿಗೆ ಪೇೞ್ವಂತಿದಾವ ಗ- |
ಹನಮಿದೆಮ್ಮೊಡವುಟ್ಟಿದಱೊಳೆಡೆಗಟ್ಟು ಪೆಱತುಂಟೆ ||
ಎನಗೆ ಪಟ್ಟಂಗಟ್ಟಿದಡೆಯು- |
ನ್ನನುಜನಲ್ಲವೆ ರಾಜ್ಯದೊಡೆಯಂ |
ಜನನಿ ಕೊಟ್ಟಿಂ ನಂಬು ನು[೯]ಡಿದಳುಪಿದಡೆ [ ಪಿತ ]ನಾ[೯]ಣೆ || ೪೭ ||

೧ (ಗ) ಕೆ. ೨ (ಗ) ದೊ. ೩ (ಕಖಗ) ರ. ೪-೪ (ಕಖ) ನಿಳೆಗೆ ರಮಣನೆನಿಕುಂ; (ಗ) ನಿಳೆಗೆ ರಮಣಗೆ ನಿನಿಕುಂ ೫-೫ (ಕಖ)ನಾನಿನ್ನೆಂದು; (ಗ) ನು ನಿನ್ನೆಂದು ೬-೬ (ಗ) ಬ ನೆವದಿಂದಂ. ೭ (ಕಖಗ) ಯು. ೮ (ಗ) ಧ. ೯-೯ (ಕಖ) ನುಡಿದಳುಪಿದಡೆ ದಶರಥನಾಣೆ; "ದಶರಥ" ಎಂಬ ಪದವನ್ನಿಟ್ಟುಕೊಂಡರೆ ಸಪ್ತಗಣಗಳು. (ಗ) ನುಡಿದಳಿಪಿದೊಡೆ ದಶರಥನಾಣೆ.

ತನಗೆ ದಶರಥನೃಪತಿ ರಾಜ್ಯಮ- |
ನನುನಯದೆ ದಯೆಗೆಯ್ವುತಿರೆ ರಾ- |
ಮನ ಮೊಗಂ ಕೊರಗಿರ್ದುದೀಗಳು ಕೈಕೆ ಬೇಡಿದಡೆ ||
ಅನುಜನಾಳ್ಗಂ ಧರೆಯನೆಂಬೀ- |
ಮನದ ಹರುಷದಿನಲರ್ದುದೆಂದಡೆ |
ಜನವಿನುತುದಾತ್ತ[೧]ರಾಘವನಲ್ಲದರ್ಪೆ[೧]ರರೊಳರೆ || ೪೮ ||

ಮುದದೆ ಕೈಕೆಯ ಬಗೆದ ಬಗೆಯಂ |
[೨]ಪದುಳವಿಟ್ಟು[೨] ಬಳಿಕ್ಕೆ ತಂದೆಯ |
ವದನಕಮಲವನತಿಹರುಷದಿಂ ನೋಡಿ ಕೈಮುಗಿದು ||
ತೊದಳು ದೇವರಿಗುಂಟೆ ರಾಜ್ಯಾ- |
ಭ್ಯುದಯಮಿದು ಪೆಱಗಾಯ್ತು ಸಂತಸ- |
[೩]ಮೊದವೆ[೩] ದಯೆಗೆಯ್ವುದು ಸಹೋದರರ್ಗೆ*ರಿಗಾದೊ[[೪] ಡದೇಂ [೪]] || ೪೯ ||

[[೫] ಎನಿತು ] [೫]ದೀಕ್ಷಾದಿಷ್ಟಮಲ್ಲದು- |
ದನಿತುಮಂ ಬೇಡಿತ್ತೆನೆಂದಡೆ |
ಮನದ ಭಯದಿಂ ನಿಮ್ಮ ನಿಲಿಸದೆ ಭಯಚಕಿತಚಿತ್ತೆ ||
ತನುಜಭರತನ ನಿಲಿಸಲೆಂದೀ- |
ವನಧಿಪರಿವೃತ-ಧರೆಯ ಬೇಡಿದ- |
ಳೆನಗನಿಷ್ಟವ ದುಷ್ಟತನದಿಂ ಮುನಿದು ಬೇಡಿದಳೇ || ೫೦ ||

ದೀಕ್ಷೆಯುಂ ನಿಮ್ಮೊಡನೆ ತಳೆದಡೆ |
ಮೋಕ್ಷಮಕ್ಕುಂ ನಿಜತನೂಭವ- |
ನಕ್ಷಯಾನಂದೈಕ[೬]ಸುಖಲಾಭ-ರತನ[೬]ೀಭರತಂ ||
ಈಕ್ಷಿತಿಯ ನೆವದಿಂದೆ [೭]ದೇವಿಯ[೭]- |
ಪೇಕ್ಷಿಸಿದಳೀತನನೆ ನಿಲಿಸಲು |
ರಕ್ಷಿಸಿದಳೆಮ್ಮಂ ಸಹೋದರರ್ಗುಂಟೆ* ಮತ್ಸರವು || ೫೧ ||

---

೧-೧ (ಗ) ರಾಘವರ್ಪೆಱ. ೨-೨ (ಗ) ಪದುಳವಿಟ್ಟ. ೩-೩ (ಕಖ) ಮುದಮೊದವೆ. (ಗ) ಮೊದವೆ. ೪-೪ (ಕಖ) ಡೇನೋ. (ಗ) ಡೆನೂ. ೫-೫ (ಕಖ) ಎಂನ (ಗ) ಎನ್ನ ೬-೬ (ಕಖ) ಸುಖವು ಭರತ. ೭-೭ (ಕಖ) ದೇವಿಯು.

ಪತಿವಿಯೋಗಂ ಸುತವಿಯೋಗಂ ।
ಮೃತಿಯ ಮಾಟ್ಕುಂ ದೇವಿ ಜನನಿಗೆ ।
[1]ಗತಿವಿನಾಶಂ[1] ನಾನಿದಂ ಕೇಳ್ದು ಸಿರದಿರ್ದಂದು ॥
ವಿತರಿಪುದು ಸಾಮ್ರಾಜ್ಯಪದಮಂ ।
ಕ್ಷಿತಿಗಧೀಶಂ ಭರತನಾಗಲಿ ।
ಮತಿಮಿದೆನಗಂ ಕೊಟ್ಟೆನೊಲವಿಂ ದೇವ ನಿಮ್ಮಾಣೆ ॥ ೫೨ ॥

ಎನ್ನ ತಮ್ಮಂ ಧರೆಯನಾಳ್ವ್ಗಂ ।
ನನ್ನಿ ನಿಮ್ಮದು ನಿಲ್ಕುನಮಲಗು- ।
ಹೋನ್ನತಿಯುಮಿಕ್ಷ್ವಾಕುಕುಲಮಂ ಪರ್ವೆ ಕುಡಿ ನಿಮಿಗಿರ್ಪಂ ॥
ಮನ್ನಣೆಯ ನಂಬಿಕೆಯುಮೆಯ್ದುಗು- ।
ಮಿನ್ನದಕೆ ಮೇಲುಂಟೆ ಸಂತಸ- ।
ವೆನ್ನ ಮಾತಂ ಸಲಿಪುದೆಂದನುದಾತ್ತರಾಘವನು ॥ ೫೩ ॥

ಬೆಳಗುಮೇ ಧರೆ ಮಳೆ ಕೊಳುಗುಮೇ ।
ತಳೆಯನೇ ರವಿ [2]ಶೀತಳತೆಯಂ[2] ।
ತೊಳಪ ಚಂದ್ರಿಕೆ ಬಿಸಿಲ ತೆಱದಿಂ ಸುಡದೆ ಮೇದಿನಿಯಂ ॥
ಜಳಧಿ ಮರ್ಯಾದೆಯನೆ ಮೀಱದೆ ।
ಕುಲನಗಂ ಧರಿಯಿಸದೆ ಪೋಗದೆ ।
ಇಳೆಗಧೀಶ್ವರ ಮನುಕುಲದೊಳಿರ್ದರಡು ನುಡಿದಂದು ॥ ೫೪ ॥

[3][ ತನತು ][3] ಧೀರೋದಾತ್ತವೃತ್ತಿಗೆ ।
ಮನದ ಹರುಷಂ ಮೀಱೆ ದಶರಥ- ।
ನನುನಯದೆ ತಲೆದೂಗಿದಂ ತಲೆದೂಗೆ ಸಭೆಯೆಯ್ದೆ ॥
ಕನಕಮಕುಟಾನರ್ಘಮಣಿಗಣ- ।
ಘನಮಯೂಖಂ ಶಕ್ರಚಾಪವ- ।
ನನುಕರಿಸೆ ನುಡಿದಂ [4][ ಗಭೀರೋದಾರ ][4]ಸೂಕ್ತಿಗಳಂ ॥ ೫೫ ॥

---

೧-೧ (ಕಗ) ಗತಿವಿನಾಶಂ. ೨-೨ (ಗ) ಸುತಳತೆಯು. ೩-೩ (ಕಖಗ) ಕನ್ನ. ೪-೪ (ಕಖಗ) ಗಂಭೀರೋದಾರ.

ಪರಮತನುಗವುಳಿನಗುಣಂಗೀ- |
ಪರಮಲಕ್ಷ್ಮೀವಲ್ಲಭಂಗೀ- |
ಧರಣಿಯಿದು ಪರಮಾಣುಮಾತ್ರಂ ಗಣ್ಯಮೇ ನಿಮಗೆ ||
ಎರಡ ನುಡಿವುದು ಕಾಳಗಕ್ಕೋ- |
ಸರಿಸುವುದು ಬೇಡಿದುದನೀಯದು- |
ದರಿಗೆ ಕಪ್ಪವನೀವುದೆಂಬುದು ಮನುಕುಲದೊಳುಂಟೆ || ೫೬ ||

ಎನೆ ಭರತನಿಂತೆಂದನಾಗಳು |
ವಿನಯವಿನಮಿತಮಸ್ತಕಂ ದೇ- |
ವೆನಗಿದಂ ದಯೆಗೆಯ್ವುದುಚಿತಮೆ ಹೇಯಮೆನಿಸುವುದಂ[೧] ||
ಅನುಜನಗ್ರಜಪದಮನೆಂದುಂ |
ಮನದೊಳೀಂ ನೆನೆವುದು ದುರಿತಮುಂ |
ಜನಕ ನೀವೊಲ್ಲದುದುಪಾಯಮೆ[೨] ಬಿಸುಟ್ಟಳಿಪುವೆನೆ || ೫೭ ||

ಭರತನೆಂದುದ ಮೆಚ್ಚಿ ದಶರಥ- |
ಧರಣಿಪಾಲಂ ತನುಜ ನಿನಗವ- |
ಸರ[೩]ಮಿದಲ್ತೆದೆಗೊಳ್ಳು[೩] ರಾಘವವಚನಮಂ ಮುದದಿಂ ||
ಭರದೊಳಂ ಜಿನದೀಕ್ಷೆ ಮನುಕುಲ- |
ದರಸು[೪][ಗಳಿಗೆಲ್ಲರ್ಗ]೪ ವಿಧಿ[೫]ಯಂ[೫] |
ತ್ವರಿತದಿಂದಂ ಮಾಡಲಕ್ಕುಮೆ ಬಗೆದು ಬಗೆದಂತೆ || ೫೮ ||

ಆದಕೆ ರಾಘವನಾಗಳಿಂತೆಂ |
ದೊದವೆ ರೋಮಾಂಚಂ ತನುವಿನೊ- |
ಳ್ಮುದದೆ ಸಭೆಯೊಳಗಿರ್ದರೆಲ್ಲ[೬][ರ್ ತಮತಮಗೆ]೬ ಹೊಗಳೆ ||
ಕೊದಳು ತಂದೆಗೆ ತಾಯ ಚಿತ್ತ- |
ಕ್ಕದವಟಲು ಬರ್ಪಂತೆ ನೀಂ ನೆಗ- |
ಟ್ವುದೆ ನುಡಿದಡೆನ್ನಾಣೆಯೆಂದಂ ಭರತನಂ ಜಡಿದು ||೫೯||

೧ (ಗ) ದುಂ. ೨ (ಕಖ) ವೆಂ. ೩-೩ (ಗ) ಮಿದಲ್ತೆಗೊಳ್ಳು. ೪-೪ (ಕಖಗ) ಗಳೆಲ್ಲಂ ೫-೫ (ಗ) ವಿಧೇಯಂ. ೬-೬ (ಕಖಗ) ೦ ತನತನಗೆ.

ಅಂತು ಭರತನನಾಗ ರಾಮಮಂ |
[೧]ಸಂತಯಿಸಿ[೧] ವಿಸ್ಮಯದಿನೆಲ್ಲಮ- |
ನಂತಸಾಮಂತಕ್ಷಿತೀಶರ್ ತಮತಮಗೆ ಭರದಿಂ ||
ಅಂತು ನುಡಿದರು ಹೊನ್ನೆರೆಗೆ ಮರ- |
ಸುಂ ತಳೆಗುವೆಂನೆ [೨]ಬೀಟಿಲಂ[೨] ಜನ- |
ಕಂ ತನಗೆ ಕೊ[ ಟ್ಟ ][a] ಳೆಯನಿಂತಿತ್ತವರು ಪೆಱರುಂಟೇ || ೬೦ ||

ನೃಪರನೇಕರ್ ಪೂರ್ವದೊಳ್[೩]- |
ಷ್ಕೃಪರು[೩] ಕಾದಿದರೋಡಿದರ್ನಿ- |
[ [೪]ಷ್ಕೃಪರು ][೪] ತಮ್ಮಂದಿರನೆ ಕೊಂದರ್ಕೊಲಿಸಿದರ್ಪೆಱರಿಂ ||
ಅಪರಿಮಿತ ಹರುಷದೊಳು ತಂದೆಯ |
ವಿಪುಳಗುಣಮಂ ಮೆಱೆಯಲೆಂದಾ- |
ಕೃಪಣರಲ್ಲದೆ ಮೇದಿನಿಯನನುಜರ್ಗೆ ಕೊಟ್ಟವರು || ೬೧ ||

ಇಂದು [೫]ನಾಳ್ಪೈಗೀಗ[೫]ಳೇ ಮಾ- |
[ ಣಿಂ ][೬]ದು [೭]ಭಾಗಿಲ್ಲೊಚ್ಚಿ[೭] [೮]ಬೆರಕಾ[೮]
ಳ್ಪಂದು [೯]ಕೊಟ್ಟಹೆ[೯]ನೇಕೆಯೋ ಕಾಡಿಹರೆ ಬೀಳು [೧೦]ಕೆಡೆ[೧೦] ||
ಎಂದು ಬಯ್ದುರೆ ನುಡಿದು ಕಾಣಿಯ- |
ನೊಂದು ಕುಡರನುಜರ್ಗೆ ಕೆಲಬ- |
ರ್ತಂದೆಯಂ ಮೆಱೆಯಲ್ಕೆ[೧೧][ ಧಾತ್ರಿಯ ಕೊಟ್ಟರಾರೆನುತ ][೧೧] || ೬೨ ||

ನೆಲನ ದಂಡಿಸಿ ಗೋತ್ರವಧೆಗೆ- |
ಯ್ದಲಸದತಿ ಪಾತಕಕೆ ಸುಜನರು[೧೨] |
ನಲಿದು ವಸ್ತುವ ಗಳಿಸಿ ಹೊಲ್ದದನೊಂದು ಠಾವಿನಲಿ ||
ಕೆಲವು ದಿನದಿಂ ಮೇಲೆ ಸತ್ತಾ- |
ನೆಲಸಿದಾರ್ತಧ್ಯಾನ ಫಲದಿಂ |
ಕೆಲರು ಹೆಬ್ಬಾವಾದರಿಂತಾರಿತ್ತರುರ್ವರೆಯುಂ || ೬೩ ||

---

೧-೧ ( ಗ ) ಸಂತೈಸಿ. ೨-೨ ( ಕಖ ) ಬೀಳಲಂ; ( ಗ ) ಬೀಳಿಲಂ. ೨ (a) ( ಕಖಗ ) ಟ್ಟುದನಿ. ಇದನ್ನು ಹಾಗೆಯೇ ಇಟ್ಟರೆ ಸಪ್ತಗಣಗಳು. ೩-೩ ( ಗ ) ನಿವಕೃಪರು. ೪-೪ ( ಕಖಗ ) ಸ್ತ್ರಿಪರು. ೫-೫ ( ಗ ) ನಾಳ್ಪೈನೀಗ. ೬ ( ಕಖ ) ಣ್ದಂ; ( ಗ ) ಣ್ದಂ. ೭-೭ ( ಗ ) ಬಾಸಿರಲ್ಲೊಚ್ಚಿ. ೮-೮ ( ಕಖ ) ಬೆರಕಂ. ೯-೯ ( ಗ ) ಕೆಟ್ಟಹೆ. ೧೦-೧೦ ( ಗ ) ಕಡೆ. ೧೧-೧೧ ( ಕಖಗ ) ಧಾತ್ರಿಯನಿಂತು ಕೊಟ್ಟವರೊಳಾರೆನುತ. ೧೨ ( ಗ ) ರ.

ಎಂದು ರಾಮನನೆಯ್ದಿ ತಮತಮ- ।
ಗೊಂದೆ ಕೊರಲೊಳ್ನಿರೆದ ಭೂಭುಜ- |
ವೃಂದವೆಲ್ಲಂ ಹರುಷಭರದಿಂ ಹೊಗಳುತಿರ್ಪುದುಮಂ ।
ಅಂದು ಭರತಂ [ರಾಮ]ರಾಜ್ಯದೊ- ।
[1]ಳ್ನಿಂದುದುಮನಿ[1]ಕ್ಷಿಸಿ [[2]ಮನದೆ][2] ತಾಂ |
ನೊಂದು ಕಟ್ಟುಂ ಕಡಿದು ಲಕ್ಷ್ಮಣದೇವನತಿ ಕಡುಪಿಂ || ೬೪ ||

ಪುರ್ವೆರಡು ಗಂಟಿಕ್ಕಿ ಕಿಸುಸೆರೆ- ।
ಯುರ್ವೆ ನಯನಂಗಳೊಳು ತುಟಿಯುಮ- |
ಗುರ್ವಿಸುತ್ತಂ ಕೆತ್ತೆ ಕಡು ಬೆಮರುಣ್ಕೆ ಕದಪಿನೊಳು ॥
ಮಿರ್ವು (?) ನೊಸಲೊಳ್ಕಂತುವಿಂದಂ |
ಪರ್ವೆ ಕೋಪದೆ ಘುಡುಘುಡಿನುತಂ |
ಸರ್ವಲೋಕವನೊರಸಿ ಮುಕ್ಕು[3]ವಪೋಲು ಲಕ್ಷ್ಮ[3]ಣ[ನು] || ೬೫ ||

ನೀಲಗಿರಿಕಂದರದ ವಿದ್ಯು- ।
[4]ನ್ಮಾಲೆಯುಂ[4]ದಶನಾಂಶು ನಗೆ ಕಡೆ- ।
ಗಾಲದಂಬುದದಂತೆ ಗರ್ಜಿಸಿ[5] ನುಡಿದನಿಂತೆಂದು ॥
ಲೀಲೆಯಿಂ ತಂದೆಯ ನುಡಿದುದಂ ।
ಪಾಲಿಸಲ್ಬಡೆದಿತ್ತನೆಂಬರೆ ।
ಬೇಳುಮಾಡಿದರೆಂಬರಲ್ಲದೆ ರಾಮನಂ ಖಳರು || ೬೬ ||

ಒಸೆದು ತಂದೆಯ ನನ್ನಿಯಂ ಪಾ- |
ಲಿಸಲು ರಾಮಂ ಕೊಟ್ಟನೆಂಬರೆ |
ರಸೆಯ ನಮಗಧಿನಾಥನಿತ್ತಂ ರಾಮನಿರಲೆಂದು ॥
ಬೆಸವರಲ್ಲದೆ ದುರ್ಜನರ್ಸ- ।
ತಸದೆ ನಿನ್ನಂ ಕೀರ್ತಿಸುವರೇ |
ಹೊಸತು ಮಾಡುವೆನೆಂದು [6]ಮಣಿಪೀಠಮನೆ ಹೊಯ್ದ್ದರ್ದ[6] || ೬೭ ||

---

೧-೧ (ಗ) ಳ್ನಿಂದುದು ನಿರೀಕ್ಷಿಸಿ. ೨-೨ (ಕಖಗ) ಮನದೊಳೆ. ೩ (ಗ) ಪ. ೩ (ಘ) (ಕಖಗ) ನಿರ್ದು. ಇದನ್ನು ಹಾಗೆಯೇ ಇಟ್ಟರೆ ಸಪ್ತಗಣಗಳು. ೪-೪ (ಕಖ) ನ್ಮಾಲೆ. ೫ (ಕಖ) ಸೆ. ೬-೬ (ಕಖ) ಮಣಿಪೀಠ ಹೊಯ್ದ್ದರ್ದಂ.

ಎಂದು ಲಕ್ಷ್ಮಣನೇಳೆ ಕಡೆಗ- ।
ಣ್ಣಿಂದವೇ[1] ರಾಮಂ ವಿಲೋಕಿಸೆ ।
ನಿಂದು ಮುನ್ನಿನ ತೆಱದಿನಿರ್ದಂ ಭಯಚಕಿತಚಿತ್ತಂ ॥
ತಂದೆಯಂ[2] ರಾಘವನಿರದೆ ಮುದ- ।
ದಿಂದ ಬೀಳ್ಕೊಳಲೆಂದು ಸಲೆ ತಱು- ।
ಸಂದು ಕೈಮುಗಿದೆಂದನಾಗಳ್ದಶರಥನೃಪತಿಗೆ ॥ ೬೮ ॥

ದೇವ ನಿಮ್ಮಾಜ್ಞೆಯೊಳೆ ಪೋಪೆಂ ।
ಭೂವಳಯಮಂ ಕೀರ್ತಿ-ಚಂದ್ರಿಕೆ- ।
ಯಾವರಿಸೆ ದಿಗ್ವಿಜಯಮಂ ಪದಿನಾಲ್ಕು ವರುಷಮುಮಂ ॥
ಆವನೆಡರಿದನಾತನಂ ಯಮ- ।
ನಾವಸಥಮಂ ಪುಗಿಸುವೆಂ ಭರ- ।
ತಾವನಿಗೆ ನಿಷ್ಕಂಟಕಂ ಮಾಡುವೆ[3][ನು][3] ಬೀಳ್ಕೊಂಡು ॥ ೬೯ ॥

ಇಲ್ಲಿ ನಾನಿರ್ದಂದು ಪರಿಜನ- ।
ಮೆಲ್ಲಮೆನ್ನಂ ಪಿಡಿಗು ಪಿಡಿದಡೆ ।
ಸಲ್ಲಲಿತಸತ್ಯಕ್ಕೆ ಹಾನಿಯು[4] ಸಮನಿಸುಗು[4] ತಡೆಯಂ ॥
ನಿಲ್ಲೆ ನಾಂ ನಿಜಕೀರ್ತಿವಲ್ಲರಿ- ।
ಯೆಲ್ಲ ದೆಸೆಯಂ ಪರ್ವೆ ಪೋಪೆಂ ।
[5][ಬಿಲ್ಲುಮೆನಗೆ][5] ಸಹಾಯವೆಂದೆರ್ದಂ[6] ನಿಜಾಸನದಿಂ ॥ ೭೦ ॥

ಜನಪತಿಯ ಕೆಂದಳದ ರುಚಿಯುಂ ।
ಘನನಖದ್ಯುತಿಮಂಜರಿಗಳುಂ ।
ವಿನಯವಿನಮಿತನಾದ ಬಲನ ಲಲಾಟಪಟ್ಟದೊಳು ॥
ವಿನುತಕುಂಕುಮತಿಲಕಮಂ ಸಾ- ।
ವನಸಿತಾಕ್ಷತೆಗಳುಮನಾಗ- ।
ಳ್ನೆನೆಯಿಸುತ್ತಿರೆ ತಂದೆಯಂ ಬೀಳ್ಕೊಂಡು ಪೊಱಮಟ್ಟಂ ॥ ೭೧ ॥

---

೧-೧ (ಗ) ಣ್ಣಂದ. ೨-೨ (ಗ) ತಂದೆಯಿಂ. ೩-೩ (ಗ) ಮಾಡುವೆನೆ. (ಕಖ) ಮಾಡುವೆನೆನುತ. ಇದನ್ನು ಹಾಗೆಯೇ ಇಟ್ಟರೆ ಸಪ್ತಗಣಗಳು. ೪-೪ (ಗ) ಸಮನಿಸು. ೫-೫ (ಕಖಗ) ಬಿಲ್ಲೆನಗೆ. ೬-೬ (ಕಖ) ಸಹಾಯವೆಂದಿದಂ.

ಇನನ ಬಳಿ ಸಲುತಿರ್ಪ ತೇಜಂ|
ತನುವಿನೊಳೆ ಸಲುತಿರ್ಪ ನೆಳಲೆಂ-|
ದೆನೆ ಜನಂ ಲಕ್ಷ್ಮಣಕುಮಾರಂ ರಾಘವನ ಬಳಿಯಂ||
ಜನಕನಂ ಬೀಳ್ಕೊಂಡು ನಡೆದಂ|
ತನತನಗೆ ಕಣ್ಬಸಿಯ ತೀವಿ-|
ತ್ರಸಿತು ಸಭೆಯುಂ ನೋಡುತಿರೆ ದಶರಥನೃಪನ ಮುಖಮಂ || ೭೨ ||

ಒಡನೊಡನೆ ದಶರಥನ ಕಣ್ಗಳು|
ನಡೆದುವವರೊಡನೊಡನೆ ಮನಮುಂ|
ನಡೆದುದವರೊಡನೊಡನೆ ಸುಯ್ಯುಂ ನಡೆದುದಂತವರ ||
ಒಡನೊಡನೆ ದಶಪ್ರಾಣವೆಲ್ಲಂ|
ನಡೆದುದವರೊಡನೆಂಬ ತೆಱದಿಂ|
ಪೊಡವಿಯೊಡೆಯಂ ಮೂರ್ಛೆಯೋದಂ ಸುತರಿಗಭಿಮುಖ[ನು] || ೭೩ ||

ಕಾಲ ತಳ ತಂಪಾಗೆಯುಂ ಕ-|
ಣ್ಣಾಲಿಗಳ್ಬೆಂಡೇಳೆಯುಂ ಮೆ-|
ಯ್ಯೊಲಿಸಿದ ಪೋಲಿರಲುಮೆರ್ದೆ ನಿಸ್ಪಂದವಾಗಿರೆಯುಂ ||
ಆಲಿಗೋಡೆಯುಮಾವಯವಂಗ-|
ಳ್ಳಾಲಗೆಯೊಳಿರ್ಪಲರದಿರೆಯುಂ|
ಲೀಲೆಯಿಂ ಯೋಗಿಗಳು ಯೋಗದೊಳಿರ್ಪಪೋಲಿರಲು || ೭೪ ||

ಭರತನುಂ ನೃಪನೊಡನೆ ಮೂರ್ಛಾ-|
ಪರವಶಂ ತಾನಾಗೆ ಕೈಕೆಯ-|
ನಿರದೆ ತಮತಮಗೆಯ್ದೆ ಮನಬಂದಂತೆ ನುಡಿಯುತಿರೆ ||
ಪಿರಿದು ದುಃಖದಿ ಕಣ್ಣನೀರುಂ|
ಬರಿವೊನಲೊಳಂತಾಕೆ ನಿಲ್ಲದೆ|
ಭರದಿ ಮೂಡುತ ಮುಳುಗುತಂ ತನ್ನರಮನೆಗೆ ಪೋಗೆ || ೭೫ ||

೧-೧ (ಕಖ) ಇನಬಳಿ. ೨-೨ (ಕಖ) ತನುವೆ ಮೊಳೆ. ೩-೩ (ಗ) ಬಳಿಯ. ೪ (ಕಖಗ) ಮಾಗಿ. ಇದನ್ನು ಹಾಗೆಯೇ ಇರಿಸಿದರೆ ಸಪ್ತಗಣಗಳು. ೫-೫ (ಗ) ಭರತನಂ. ೬-೬ (ಗ) ಬಂದದಿಂ ನೊಂದು. ೭-೭ (ಗ) ತನ್ನವರವರ-ಮನೆಗೆ.

ಇಂದುಕಾಂತದ್ರವಮುಮಂ ಹರಿ- |
ಚಂದನದ ಹಿಮರಸಮನುತ್ಪಲ- |
[ ಕಂದ[೧] ]ಮಂ [೨]ಪನ್ನೀರಧಾರೆಯುಮಂ[೨] ಮೃಣಾಳಿಕೆಯಂ ||
ತಂದು ತಮತಮಗೆಯ್ದೆ ಭೂಭುಜ- |
ವೃಂದಮೆಲ್ಲಂ ಭಯತರಂಗಿತ- |
[೩]ರಂದು [೩]ಶೀತಲಕ್ರಿಯೆಯನವರಿಗೆ ಮಾಡುತಿರಲಿತ್ತ || ೨೬ ||

ತರಣಿಯುಂ [೪]ಶಶಿಯಿಲ್ಲದಂಬರ |
[೪]ಕರಿಗಳಿಲ್ಲದ ದಿಕ್ಕು ಕಾಂಚನ- |
ಧರಣಿಧರನಿಲ್ಲದ ನೆಲಂ ಮಣಿಯಿಲ್ಲದಂಬೋಧಿ ||
ಸರಸಿರುಹಮಿಲ್ಲದ ಕೊಳಂ ಬಂ- |
ಧುರತೆಯಿಲ್ಲದ ರಾಜ್ಯಪದದಂ- |
ತಿರೆ ಬಲಾಚ್ಯುತರಿಲ್ಲದಿರೆ ಸಭೆ ಖಿನ್ನಮಾಯ್ತಾಗ || ೨೭ ||

ಇಂತಿದಂ [೫]ಕೇಳಿದ [೫]ಸುಮಿತ್ರೆ ಕ- |
ರಂ ತ್ವರಿತದಿಂ ವಾರ್ತೆಯಂ ಮೊದ- |
ಲಿಂ ತುದಿವರಂ ತಿಳಿಯಲಪರಾಜಿತೆಗೆ ಬಂದಱಿಪೆ ||
ಅಂತೊರೆದುದಕೆ [೬]ಕೈಕೆಯುಳಿಪಲ್[೬] |
ಚಿಂತಿಸಂ ಕುಡುವುದಕೆ ರಾಮಂ |
ಸಂತಸದಿನನುಭವಿಸುವೊಂ ಬಂದುದನು ನಾವೆನುತ || ೨೮ ||

ಅಂತವರ್ತಮ್ಮೊಳು ನುಡಿದು ಸಲೆ |
ಚಿಂತಿಸುತ್ತಿರೆ ಬಳನುಮಚ್ಯುತ- |
ನುಂ ತಡೆಯದವರರಮನೆಗೆ ಮುದದಿಂದಮೊಯ್ತಂದು ||
ಸಂತಸದೆ ಜನನಿಯರಿಗೆಱಗಿಯು- |
ನಂತಪರಕೆಯನಾಂತು[೭] ಕುಳ್ಳಿರ- |
[೭]ಲಿಂತಿದೆಲ್ಲವನಱಿಪೆ[ [೮]ಯಪರಾಜಿತೆಗೆ ಲಕ್ಷ್ಮಣನು[೮] ] || ೨೯ ||

---

೧ (ಕಖಗ) ಖಂಡ. ೨-೨ ( ಗ ) ತನ್ನೀರದಾಲೆಯುಮಂ. ೩-೩ (ಗ) ರಂಗ. ೪-೪ (ಕಖಗ) ಶಶಿಯಿಲ್ಲದಂಬರದಿ | ಕ್ಕರಿ. ೫-೫ ( ಗ ) ಕೇಳಿದು. ೬-೬ ( ಗ ) ಕೈಕೆಯುಳಿಪರ್ ೭-೭ ( ಗ ) ಕುಳಿರಲಿಂತಿ. ೮-೮ ( ಕಖಗ ) ಲಕ್ಷ್ಮಣದೇವನಪರಾಜಿತೆಗೆ. ಇದನ್ನು ಹಾಗೆಯೇ ಇರಿಸಿದರೆ ಸಪ್ತಗಣಗಳು.

ಆಗಳಂತಳವಳಿದು ಮೂರ್ಛಾ- ।
ವೇಗಮಂ ಕೌಸಲ್ಯೆ ತಳೆದಿಂ- ।
ತಾಗಿ ಕಿಱಿದಾನುಂ ಬೆರಕನಿದೊರ್ಗ್ಯ್ಯನೆಚ್ಚತ್ತು ॥
ಮಾಗಿಯಂದಿನ ಕೋಗಿಲೆಯ ಪೊ- ।
ಲ್ಮೊಗುವಟ್ಟಂತಿರ್ದು ರಾಘವ ।
ಭಾಗಿತನವಂ ಗೆಲುವರಿಗೆ ಮಾಡುವರೆ ನೀಂ ಮಗನೆ ॥ ೮೦ ॥

ಮುನ್ನಮೇ ತಾಯ್ತಂದೆಯರು ಯಮ- ।
ಸನ್ನಿಧಿಯನೆಯ್ದಿದರಿನಿಯನು- ।
ತ್ಪನ್ನವೈರಾಗ್ಯಂ ತಪೋವನಗಮನಕುದ್ಯುಕ್ತಂ ॥
ಇನ್ನೆನಗೆ ಶರಣಾರು ತಂದೆಯ- ।
ನನ್ನಿಗೆಂದಡವಿಯನು ನೀಂ ಪುಗೆ ।
ಮನ್ನಿಸುವರಾರ್ಬಗೆವರಾತರ್ಯೆಂಬರೆನಗಾರು ॥ ೮೧ ॥

ಕ್ರೂರಮೃಗದಿಂ ಕ್ರೂರಖಗದಿಂ ।
ಕ್ರೂರಫಲದಿಂ ಕ್ರೂರಜಲದಿಂ ।
ಕ್ರೂರಗುಹೆ[ಯಿಂ] ಕ್ರೂರರವದಿಂ ಕ್ರೂರವನಚರರಿಂ ॥
ಕ್ರೂರನದದಿಂ ಕ್ರೂರನದಿಯಿಂ ।
ಕ್ರೂರಗಿರಿಯಿಂ ಕ್ರೂರದರಿಯಿಂ ।
ಕ್ರೂರತರಮಾದಡವಿಯಂ ಪುಗಲೆಂತು ಸೈರಿಪೆನು ॥ ೮೨ ॥

ಊರಮನೀವಮುಡಿಯನೀವ- ।
ರ್ಬೇರಲನೀವರ್ಕುರುಳನೀವ- ।
ರ್ಸಿರಿದು ವಸ್ತುವನೀವರೀವರ್ವಳಿತವರ್ತನೆಯಂ ॥
ಧರೆಯನೀವರೆ ಪೆಂಡಿರೆರೆದಡೆ ।
ಪಿರಿಯನಿರೆ ಕಿಱಿಯಂಗೆ ನೋಡಿರೆ ।
ಮರುಳುಗೊಂಡನೆ ನೃಪತಿ ಕಾಣ್ಬರೆ ಕಾಮುಗರ [ಹೊಡೆದು] ॥ ೮೩ ॥

---

೧-೧ (ಕಖ) ತಾಗೆ. ೨-೨ (ಗ) ಮಾಡುವರಿಗೆ ನಿಮ್ಮಗನೆ. ೩-೩ (ಕಖ) ಕ್ರೂರಗುಹೆಯಂ; (ಗ) ಕ್ರೂರಹಗೆಯಂ. ೪-೪ (ಗ) ಪುರನು. ೫-೫ (ಕಖಗ) ಹೊಡೆದವರು. ಇದ್ದಂತೆ. ಇಟ್ಟುಕೊಂಡರೆ ಸಪ್ತಗಣಗಳು.

ಇರದೆ ಪದಿನಾಲ್ಕುಂ ಜಗಕ್ಕಾ- |
ವರಿಸೆ ತನ್ನಪಕೀರ್ತಿ ತೂರ್ಯ- |
ಸ್ವರವದಂ ಬಗೆಯದೆ ಧರೆಯನಾಕ್ಕೈಕೆ ಬೇಡಿದುದಂ ||
ಭರತನದಕೆದೆಗೊಂಡು ಪರಿಯುತ |
ಮುಳಿಸಿರದೆ ಶತ್ರುಘ್ನ ನಿಲ್ವುದು |
ನಿರುತಮುಱಿಪರೆ ಕುಟಿಲರೆಂಬುದನಿವರು ಮೂವರುಮಂ || ೮೪ ||

ಮಗನೆ ನೀಂ ಕಿಸುಗಣ್ಚಿ ನೋಡಿದ- |
ಡಗಿದು ನಿಂದಂ ನೋಡದಿರ್ದಡೆ |
ಬಗೆವನೇ ಲಕ್ಷ್ಮಣಕುಮಾರಂ ಭರತಗಿರತನನು ||
ನೆಗೆದ ಕಡೆಗಾಲದ ಮುಗಿಲವೊ- |
ಲ್ಮಿಗೆ ಗಜರಿ ಗರ್ಜಿಸಿ ಧರಿತ್ರಿಯೊ- |
ಳೊಗೆವ ಸಿಡಿಲೆಂಬಂತೆ ಪೊಯ್ಯನೆ ತನ್ನ ಗದ್ದುಗೆಯಂ || ೮೫ ||

ಪರಿಜನಂ ಪುರಜನಮುಮಂತಃ- |
ಪುರಜನಂ ಗುರುಜನಮುಮೆಲ್ಲಂ |
ನೆರೆದುಮಿರ್ದುಂ ಮಂತ್ರಿಮಂಡಳಿಕರು ಪಸಾಯಿತರು ||
ಪಿರಿಯನಿರೆ ಕಿಱಿಯಂಗೆ ಧಾತ್ರಿಯ- |
ನೆರೆವುದನುಚಿತಮೆಂದು ಪೇೞದೆ |
ಗರಹೊಡೆದವೋಲಿರ್ದರಲ್ಲ[ವೆ]ಕೈಕೆ ಕೃತಕ[ವ] ಬಯ[ಸೆ] || ೮೬ ||

ನಾಡನೊಲ್ಲದೆ ಬೀಡನೊಲ್ಲದೆ |
ನೋಡದೆಲ್ಲಂ ಬಂಧುವರ್ಗಂ |
ನಾಡನಂತಃಪುರದ ಸಿಂಗಾರದೊಳು ನಲಿನಲಿದು ||
ಕಾಡ ನೀಂ ಪುಗಲಾನದೆಂತೆಲೆ |
ನೋಡಿ ನಿಲುವೆಂ ನಿಲ್ಲೆನೆಂದೀ- |
ಡಾಡಿ ಮೆಯ್ಯಂ ಶೋಕಮಂ ತಾಳ್ದಿದಳು ಕೌಸಲ್ಯೆ || ೮೭ ||

---

೧-೧ (ಗ) ಭರತನದಕೆಗೊಂಡು. ೨-೨ ರಳ ಪ್ರಾಸದ ಪದ್ಯಗಳು ಪಂಪಭಾರತದಲ್ಲಿವೆ. ಆಶ್ವಾಸ ೬ ಪದ್ಯ ೪೨. (ಗ) ಮುಳಿರದೆ. ೩-೩ (ಗ) ಭರತಗಿರತನು. ೪-೪ (ಗ) ನೆರೆದುದಿರ್ದುಂ. ೫. (ಕಖಗ) "ದೆ" ೬. (ಕಖಗ) "ದ" ೭. (ಕಖಗ) "ಕೆ" ೮. ಈ ಚರಣದಲ್ಲಿ ಮಾತ್ರೆಗಳು ಹೆಚ್ಚಾಗಿ ಸಪ್ತಗಣಗಳಾಗಿವೆ; ಇದನ್ನು "ಗರ ಹೊಡೆದ ವೋಲಿರ್ದರಾ ಕೈಕೆ ಕೃತಕನ ಬಯಸೆ" ಎಂದು ತಿದ್ದಬಹುದು. ೯-೯ (ಗ) ನೋಡದೆಲ್ಲಾ. ೧೦-೧೦ (ಕಖ) ನಾಡದ.

ನೆಲನುಮಂ ಸಪ್ತಾಂಗಪದವುಂ |
ಬಲವುಮಂ ಭಂಡಾರವುಂ ಕುಲ-|
ಲಲನೆಯರುಮಂ ತಾಯಿಯಂ ಬಾಂಧವರುಮಂ ಬಿಟ್ಟು ||
ಮಲೆಯ ನೀಂ ಪುಗಲೆಂತು ಸೈರಿಸಿ |
ನಿಲುವೆ ನಾಂ ನಿನ್ನೊಡನೆ ಬರ್ಪೆಂ- |
ಮಲಮಲಂ ಮಱುಗಿಸದೆ ಹಿಂದಿರಿಸದಿರು ನೀನೆನ್ನಂ || ೮೮ ||

ಎನುತ ಶೋಕಂಗೆಯ್ವ ತಾಯಿಗೆ |
ವಿನಯವಿನಮಿತನಾಗಿ ಲಕ್ಷ್ಮಣ- |
ನನುನಯದಿನಿಂತೆಂದನಾಗಳು ತೊಡೆದು ಕಣ್ಣೀರಂ ||
ಮನುಕುಲದೊಳಿಂತಧಿಕರುಂಟೇ |
ಘನತರರು ಕಾರ್ಯಾನ್ವಿತಮ್ಮ- |
ನ್ನಿನ ನೃಪಾಲಕರೊಳಗೆ ಶೌಚಮೆ ರಾಘವನ ಗುಣವು || ೮೯ ||

ಚರಮದೇಹಂ ಬಾಧೆಬಡುವನೆ |
ಅರಿಗಳುಂಟೇ ಬಾಹುಬಳ[ಗೆ] ಸು- |
ಚರಿತನಾರ್ತಮನೆಯ್ದುವನೆ ನೋವುಂಟೆ ನಿರುಜಂಗೆ ||
ದೊರೆಕೊಳುಗುಮೆ ವಿಷಾದಮಿಂತಿರೆ |
[ಎರಡು] ಬಗೆಯದುದಾರಮೂರ್ತಿಗೆ |
ಶರಧಿಗಂಭೀರಂಗೆ ರಾಮಂಗುಮ್ಮಳಿಸಲೇಕೆ || ೯೦ ||

ಕೆಲವು ದಿನದೊಳು ಕೆಲಬಲದ ಭುಜ- |
ಬಲಮಹೋದ್ಧತರಪ್ಪ ಭೂಪರ |
ನಲಿದವರ ಸಪ್ತಾಂಗಮಂ ಕೊಂಡಲ್ಲಿಗೆಯೆ [ನಿ]ಮ್ಮಂ ||
ಸಲೆ ತರಿಸದಿರ್ಪನೆಯದಕ್ಕು- |
ಮ್ಮಳವದೇವುದು ನಿಮಗೆ ಮುದಮಂ |
ತಳೆದು ಸುಖದಿಂದಿರ್ಪುದಂಬಿಕೆ ಬಲಯುತಂಗರಿದುಂಟೆ || ೯೧ ||

೧-೧ (ಗ) ತಾಯ್ವುಮಂ. ೨-೨ (ಗ) ಮಲುಮಲಂ. ೩-೩ (ಗ) ಸಾಚ್ಯಮೆ. ೪-೪ (ಕಖ) ಬಾಹಾಬಳಸುಸು; (ಗ) ಬಾಹುಬಲಸು. ೫-೫ (ಗ) ಚರಿತನಾರ್ಥವ. ೬-೬ ಈ ಚರಣದಲ್ಲಿ ಹೆಚ್ಚು ಮಾತ್ರೆಗಳಿದ್ದು ಸಪ್ತಗಣಗಳಿವೆ; ಇದನ್ನು " ತಳೆದು ಸುಖದಿಂದಿರ್ಪುದಂಬಿಕೆ ಬಲಯುತಂಗರಿದೆ" ಎಂದು ತಿದ್ದಬಹುದು.

ದೇವಿ, ನಿಮ್ಮಯ ಪಾದಪದ್ಮದ ।
[೧]ಸೇವೆಗಿಲ್ಲಿ[೧] ಜನನಿ ಸುಮಿತ್ರಾ- ।
ದೇವಿಯಿರ್ದಳ್ಭರತ[೨]ನೆಮ್ಮಿಂ[೨] ನಿಮಗೆ ಕಡುಭಕ್ತಂ ॥
ದೇವರಾಘವಚರಣಕಮಲದ ।
ಸೇವೆಗಾನಿ[[೩]ರ್ಪೆಂ[೩]] ತದನುಗನ- ।
ತೀವ ಹರುಷದಿ ಲೀಲೆಯಿಂ ಬೀಳ್ಕೊಟ್ಟು ಕಳುಹುವುದು ॥ ೯೨ ॥

ಎನೆ ತಿಳಿದು ಕೌಸಲ್ಯೆ ತನಯನ ।
ವಿನಯಮಂ ನಯಮಂ ಮನದೆಗೊಂ- ।
ಡನುನಯದಿನಿಂತೆಂದಳವನಿಜೆ[೪]ವೇರಸು[೪] ಪೋಗದೊಡೆ ॥
ಅನುಚಿತಂ ಕೊಂಡೊಯ್ಯಬೇಕೆನೆ ।
ಘನತರಾನಂದದೊಳೆ ರಾಮಂ ।
[೫]ಜನನಿಯೆಂದುದನಾಗಳೆದೆಗೊಂಡತಿ[೫]ಮುದದಿ ಬೀಳ್ಕೊಂಡಂ ॥ ೯೩ ॥

[೬]ಓಸರಿಸದಿರ್ಪಳಲ್ದೆ[೬]ನೆಂದಾ- ।
ಯಾಸಮಾಯ್ತೆನಗೆನ್ನದಿರು ಶಯ-
ನಾಶನಾದಿಗ[೭]ಳೊಳಗೆಯೆಯ್ದೆ[೭] ಪ್ರಯತ್ನಪರನಾಗು ॥
ಆಸುರದ ಮಳೆಬಿಸಿಲುಚಳಿಗಂ ।
ಸಾಸಿಗಂ ನೀನಾಗಿ ಸೇದೆಯ- ।
ನೀಸಹಜ-ಸುಕುಮಾರೆ ಸೀತೆಗೆ ಮಾಡಲೀಯದಿರು ॥ ೯೪ ॥

ಎಂದು ಲ[೮]ಕ್ಷ್ಮಣದೇವರಂ[೮] ಮುದ- ।
ದಿಂದ ಬೀಳ್ಕೊಟ್ಟಳು ಸುಮಿತ್ರೆ ಮು-
ಕುಂದನುಂ ರಾಘವನುಮವನಿಜೆ ಸಹಿತ ಭರವಶದಿಂ ॥
[೯]ಅಂದು[೯] ಜನನಿಯರಿರ್ವರುಂ ನಲ- ।
ವಿಂದ ಪರಸಿದ ಪರಕೆಗಳನಾ- ।
ನಂದದಿಂ ತಳೆದರಮನೆಯ ಪೊಜಿಮಟ್ಟು ಬರುತಿರಲು ॥ ೯೫ ॥

---

೧-೧ ( ಕಖ ) ಸೇವೆಗಲ್ಲಿ. ೨-೨ ( ಕಖ ) ನೆಮ್ಮಂದ. ೩-೩ ( ಕಖಗ ) ರ್ದೆಂ. ೪-೪ ( ಗ ) ವೇರು. ೫-೫ ( ಗ ) ಜನನಿಯೆಂದುದನಾಗಳೆ ಕೊಂಡತಿ. ಈ ಚರಣದಲ್ಲಿ ಮಾತ್ರೆಗಳು ಹೆಚ್ಚಾಗಿ ಸಪ್ತಗಣಗಳಾಗಿವೆ; ಇದನ್ನು " ಜನನಿಯೆಂಬುವುದನೆದೆಗೊಂಡತಿಮುದದಿ ಬೀಳ್ಕೊಂಡಂ " ಎಂದು ತಿದ್ದಬಹುದು. ೬-೬ ( ಗ, ಓಸರಿಸದಿರ್ಪಳಲ್ದೆ. ೭-೭ ( ಗ ) ಳೊಳಗೆಯ್ದು. ೮-೮ ( ಕಖ ) ದೇವರುಂ. ೯-೯ ( ಗ ) ಅಂಬು.

ತನತನಗೆ ನೆರೆದೆಯ್ದೆ ಚೋದ್ಯಂ |
ಜನಿಯಿಸುತ್ತಿರೆ ಭೀತಿಯಿಂ ಪುರ- |
[೧]ಜನಮುದೆ[೧]ಲ್ಲಂ ರಾಮಲಕ್ಷ್ಮಣಜಾನಕಿಯ ಮುಖಮಂ ||
ಘನಕುತೂಹಲ-ಪರುಷ-ಸಾಧ್ವಸ- |
[೨]ವಿಸಿತು ಭಾವಂ[೨] ಕೈಮಿಗುತ್ತಿರೆ |
ಜನಪರೆಲ್ಲಿಗೆ ನಡೆದು ಪೋಗುತ್ತಿರ್ದರೆನುತಿರಲು || ೯೬ ||

ಲಲಿತ ರಗಳೆ.[೩] ರಾಗ-ವರಾಳಿ.

ಆಗಳಂತಾಪುರದ ಜನವಧಿಕಭಯದಿಂದ
ರಾಗಕೌತುಕಸಾಧ್ವಸಾವೇಗಭರದಿಂದ
ನೋಡಿ ಜಾನಕಿರಾಮಲಕ್ಷ್ಮಣರ ವದನಮಂ
ಕೂಡೆ ದರಹಾಸಲಕ್ಷ್ಮೀಸಹಜಸದನಮಂ,
ಗಜಘಟಾವಳಿಗಳೆತ್ತಂ ಸುತ್ತಿ ಮುತ್ತಿ ಬರೆ
ವಿಜಯಮುದರದನಿ ಪೂರ್ವಾಸನದೊಳದಿರದಿರೆ,
ತಮತಮಗೆ ಚಾಮರವನಿಕ್ಕೆ ಕನ್ನೆಯರೊಲಿದು
ಸಮೆದ ಸಾಮಜಸಂತತಿ[ಯು] ಬಳಸಿ ಬರೆ ನಲಿದು,
ಹಿಮಕರನನಿಳಿಕೆಯ್ವ ಬೆಳುಗೊಡೆಯ ನೆಳಲಿನೊಳು
ಹಿಮಕರಾನನೆಯರುಂ ಯೌವನದ ಬಳಸಿನೊಳು
ಕೆಲಬರಂ ನಯನಾಂಶ್ವಮೃತದಿಂದೆ ತಣಿಸುತಂ,
ಕೆಲಬರಂ ದರಹಸಿತಚಂದ್ರಿಕೆಯಿನೊಲಿಸುತಂ,
ಕೆಲಬರಂ ಪರಿಹಾಸಕಥೆಗಳಿಂ ತಣಿಸುತಂ,
ಕೆಲಬರಂ ನಿಜಭುಜಾಟೋಪದಿಂ ಮಣಿಸುತಂ,
ಸುರಪತಿಯ ಲೀಲೆಯಂ ಮೀಱುವ ವಿನೋದದಿಂ
ಸರಸನಾಟಕಕಥಾಜನಿತಪ್ರಮೋದದಿಂ
ರಾಮಚಂದ್ರಂ ಬಾರದಿಂತೇಕೆ ಬಂದಪಂ !
ಭೂಮಿಗೆಯ್ದದವಟಲನಿಂತೇಕೆ ತಂದಪಂ !
ಶರನಿಧಿಯ ತೆರೆದುಱುಗಲಂತೆ ಬರೆ ವಾಜಿಗಳು
ಖರಕರನನಿಳಿಕೆಯ್ವ ಶಸ್ತ್ರಾಂಶುರಾಜಿಗಳು

೧-೧ (ಗ) ಜನಮುದೆಲ್ಲಿಂ. ೨-೨ (ಕ) ವಿನುತನಾಸಂ; (ಖ) ವಿಸಿತುನಾವಂ ೩. ಈ ರಗಳೆಯು (ಗ) ಪ್ರತಿಯಲ್ಲಿ ೬ ನೆಯ ಸಂಧಿಯಾಗಿದೆ.

ಕತ್ತಳನನೇಱಿ ರಾಮನ ಮುಂದೆ ತೋಱುತಂ
ಸುತ್ತಿ ನೋಡುವ ಜನಕೆ ಹರುಷಮಂ ಬೀರುತಂ
ತಾರಾಳಿ ಬಳಸಿದಂಬರವಿದೆಂಬಂತಿರಲು
ಹಾರಲತೆ ಪೇರುರದೊಳೊಲಿದು ನರ್ತಿಸುತಿರಲು
ಮುಂದೆ ಜಯಜಯವೆನುತ ವಂದಿಜನ ಪೊಗಳುತಿರೆ
ಕಂದರ್ಪಚೇಷ್ಟೆ ಸೌಂದರಿಯರ್ಗೆ ನೆಗಱುತಿರೆ
ಲಕ್ಷ್ಮೀಧರಂ ಬಾರದಿಂತೇಕೆ ಬಂದಪಂ
[[೧]ಪದ್ಮಾಕ್ಷನೀ][೧]ಜನವನಿಂತೇಕೆ ಕೊಂದಪಂ
ನೇವುರದ ರವಕೆಳಸಿ ಬಳಸೆ ಹಂಸೀಚಯಂ[೨]
ರಸನಾರಸಿತಮನಾಲಿಸುತ ಬರೆ ಸಾರಸಂ
ಕುಸುಮಶರನಂ ಮನಂಗೊಳಿಸೆ ಲೀಲಾರಸಂ
ಚಾಮರದ ಹಡಪ[ದವರ್ಗಳು] ಡವಕೆಯವರ್ಗಳುಂ
ಭೂಮಿಯುಂ ಮುಂದೆ ಮುಂದುಗ್ಘಡಿಸುವವರ್ಗಳುಂ
ಒಡನೊಡನೆ ಚೆನ್ನೆಯರು ಕನ್ನೆಯರು ಬರುತಿರಲು
ಪಡಿಯರರ್ನೆರೆದು ನೆರವಿಯು ತೊಲಗಿಸುತ್ತಿರಲು
ಮರಕತದ ಕುಟ್ಟಿಮಸ್ಥಳಿಯೊಳಗೆ ನಡೆಯುತಂ
ಗುರುಜಘನಭಾರದಿಂದಲ್ಲಲ್ಲಿ ತಡೆಯುತಂ
ಶ್ರವಣಾವತಂಸದೊಳ್ಸುಳಿವಳಿಗೆ ಬೆದಱುತಂ
ಹವಣುಗಳಿದಿರ್ದ ಲಾವಣ್ಯಮಂ ಕೆದಱುತಂ
ಮೇಳಗಾರ್ತಿಯರೊಡನೆ ಲೀಲೆಯಂ ಮೆಱೆವುತಂ
ಮೂಱುಲೋಕಕ್ಕೆ ಹರುಷಾಮೃತವ ಕಱೆವುತಂ
ಸುಳಿವ ಜಾನಕಿಯೀಗಳಿಂತೇಕೆ ಬಂದಪಳು!
ನೆಳಲಂತೆ ರಾಘವನ ಬಳಿವಳಿಯ ಸಂದಪಳು!
ಕಾರಣಮನಿದಕಱಿವರೇ ಹೇಳಿರೇಯೆಂದು
ಪೌರರೆಲ್ಲಂ ಬೆಗಡು ತಾಗಿದಂತಿರೆ ನೊಂದು
ಬಾಯಳಿದು ಬೆಂಡಾಗಿ ಕಣ್ಬನಿಯನಿಕ್ಕುತಂ|
ಶ್ರೀಯಳಿವನಱಿದು ತಮತಮಗೆಯ್ದೆ ತೇಂಕುತಂ।
ಕೆಲಕೆಲಬರೆಮಗೆ ಶರಣಾರೆಂದು ನುಡಿಯುತಂ|
ಕೆಲಕೆಲಬರೊಲಿದು ದೇವತೆಗಳಂ ಬಯ್ವುತಂ|

೧-೧ (ಕಖ) ಪದ್ಮದಳಾಕ್ಷ; (ಗ)ಪಕ್ಷ್ಮಳಾಕ್ಷಿ. ೨. ಇದರ ಮುಂದೆ ಒಂದು ಚರಣವು ಬಿಟ್ಟುಹೋದಂತೆ ತೋರುತ್ತದೆ. ೩. ಇಲ್ಲಿ 'ಳ' ಕಾರಕ್ಕೂ 'ಱ' ಕಾರಕ್ಕೂ ಪ್ರಾಸ.

ಇನ್ನಾರು ನಮಗೆಂದು ಮನ್ಯುಮಿಕ್ಕಟಲುತಂ,
ಭಿನ್ನಮಾಯ್ತೆಮ್ಮ ಮುದವೆಂದಟಲಿ ಬಟಲುತಂ,
ಇನ್ನಾರಯೋಧ್ಯೆಯಂ ಭುಜಬಲದೆ ರಕ್ಷಿಸುವ-
ರಿನ್ನಾರು ಹಗೆಗಳಂ ಬಗೆದಂತೆ ಶಿಕ್ಷಿಸುವ-
ರಿನ್ನಾರು ಕೆಲಬಲದ ನೃಪರನದಟಲೆವವರು!
ಇನ್ನಾರು ಪಾಳಿಯಿಂ ಪ್ರಜೆಯ ಪಾಲಿಸುವವರು!
ಎಂದು ಪುರಜನಮೆಯ್ದೆ ತಮತಮಗೆ ನುಡಿಯುತಂ,
*
ನೊಂದು ಬೆಂದಂತೆ ಮುಳಿದೆರ್ದೆಯುಟಲ ಪಡೆಯುತಂ,
ಕೇಳುತಂ ಕರುಣದೃಷ್ಟಿಯೊಳವರ ನೋಡುತಂ,
ಆಳೋಕನದೊಳೆ ಸಂದರ್ಪಣಂ ಮಾಡುತಂ,
ವಿಪಣಿಮಾರ್ಗಂ ಕಳಿದು ದೇವತಾವಾಸದೊಳು
ಸಫಲೀಕೃತಾಶೇಷಭವ್ಯಸಂತಾನದೊಳು
ಪುರದ ಪರಭಾಗವರಜಿನಚೈತ್ಯಗೇಹದೊಳು
ನಿರಸಿತಾಶೇಷಸಂಸಾರ[೧ಘನದಾಹದೊಳು ]೧
ಪರಿರಚಿತವಜ್ರಮಯಪರಿಧಿ[ಯಿಂ] ರುಚಿರದೊಳು,
ಸುರುಚಿರವಿವಿಧಮಂಗಳಾರ್ಚನಾಪ್ರಚುರದೊಳು
ಮೂವರುಂ ಪೊಕ್ಕು ಬಲಗೊಂಡುಚಿತಭಕ್ತಿಯಿಂ,
[೨ದೇವದೇವ ವಿನೋದಮಮುಲತರ]೨ಭಕ್ತಿಯಿಂ
ಸ್ತುತಿಶತಸಹಸ್ರದಿಂ ಸ್ತುತಿಗೆಯ್ದು ಹರುಷದಿಂ,
ನುತಪುಳಕಮಂ ಬೆಳಗೆ ಹರ್ಷಾಶ್ರುವರ್ಷದಿಂ
ಸಮುಚಿತಸ್ಥಾನದೊಳು ಪವಡಿಸಿ ವಿನೋದದಿಂ
ರಮಣೀಯಮಹಿಮನೆರ್ದಧಿಕಪ್ರಮೋದದಿಂ,
ಜಿನಚರಣಕುಸುಮಶೇಖರಿತ ಶೇಖರನಾಗಿ
ನಿರುತಗಂಧೋದಕಪವಿತ್ರಿತತನುಗಳಾಗಿ,
ಫುಲ್ಲಶರವಿಜಯನಂ ಜಿನಪನಂ ಬೀಳ್ಕೊಂಡು,
ಬಿಲ್ಲಂಬುಗಳನಾಗಳತಿಹರ್ಷದಿಂ ಕೊಂಡು,
ಪುರದ ಪಕ್ಷದ್ವಾರದಿಂ ಮುಂದೆ ಪೊಱಮಟ್ಟು,
ಧರಣೀವಿನೂತೆಯಂ ನಡುವಿಟ್ಟು ಪೊಱಮಟ್ಟು,

೧-೧ (ಕಖಗ) ಗಹನದಾಹದೊಳು. ೨-೨ (ಕಖಗ) ದೇವದೇವರ ವಿನೋದಮುಳತರ.

ತೆಂಕಮುಂತಾಗಿ ಪಯಣಂ ಪೋಗುತಿರ್ಪುದುಂ
ಭೋಂಕನಾಗಳೆ ಸಕಲ ಪುರಜನಂ ಬರ್ಪುದುಂ,
ಬಂದೆಱಗಿದವರೊಡನೆ ನಿಂದು ಮಾತಾಡುತಂ
ಹಿಂದೆ ಬರ್ಪಖಿಲಭೂಪಾಲರಂ ನೋಡುತಂ
ಎಡೆಯೆಡೆಯ ಪುರನಗರಮಂ ಲೀಲೆಯಿಂ ಕಳೆದು
ಕಡು ಗಭೀರದ ತರಂಗಿಣಿಯುಮಂ ಕಂಡೊಲಿದು
ಪುರಜನಮನೆಯ್ದ ಯಲ್ಲಿಯೆ ನಿಲಿಸವೇಳ್ಕೆಂದು
ಸರಸಗಂಭೀರೋಕ್ತಿಯಂ ನುಡಿಯುತಂ ನಿಂದು
ಇರೆ ಭರತನಲ್ಲಿಗತಿವೇಗದಿಂದೆಯ್ತಂದು
ಚರಣಾಬ್ಜನಿಕಟದೊಳ್ಬಿರ್ದು ಮೂರ್ಛೆಗೆ ಸಂದು
ಎಂತಾನುಮೆಚ್ಚತ್ತು ಶೀತಲಕ್ರಿಯೆಗಳಿಂ
ಸಂತತಂ ಸುರಿವ ನಯನಾಂಬುಪ್ಲವಂಗಳಿಂ
ಘುಡಿಘುಡಿಪ ದುಃಖದಾವಾನಲನಿದೆನೆ ನೆಗಟ್ದ*
ನಿಡುಸುಯ್ದು ಕೈಮುಗಿದು [೧]ಪೇಟಿಲ್ತಗುಳ್ದ*-[೧]
[೨]ನಿಂತೆಂದು[೨] ದಶರಥನೃಪಾಲಕನ ಕೀರ್ತಿಯಂ
ಸಂತಸದೆ ಜಿನದೀಕ್ಷೆಯಂ ತಳೆದ ವಾರ್ತೆಯಂ
ದೇವರಿತ್ತಂ ಬರಲು ದೇವರಾಗಳೆ ನಿಮ್ಮ-
ನಾವರಿಸಿ ತೆಕ್ಕೆಯಂ ಗೆಯ್ಯಲಾಱದೆ ತಮ್ಮ-
ನಾವರಿಸಿ ಶೋಕಾಗ್ನಿಮೋಹಮೂರ್ಛೆಯ ತಳೆದು
ದೇವಯೋಗದೊಳಿಂದುಪಸಮಯದೊಳು ತಿಳಿದು
ನಿರತಿಶಯವಾಗೆ ವೈರಾಗ್ಯಭಾವಂ ಬೆಳೆಯೆ
ಪರಮಪಾವನಮೆನಿಪ ಜಿನದೀಕ್ಷೆಯಂ ತಳೆಯೆ
ತಳುವಿದೆಂ ನಾನಿಲ್ಲದಿರ್ದೊಡಲ್ಲಿರೆನೆಂದು
ಲಲಿತವಿನಯದೊಳು ಬಿನ್ನವಿಸೆ ಭರತನು ಬಂದು,
ಮತ್ತಿತ್ತ ಕೌಸಲ್ಯೆ ತನಯನಂ ನೆನೆನೆನೆದು
ಚಿತ್ತಪ್ರಿಯಂ ದೀಕ್ಷೆಗೊಂಡುದಂ ನೆನೆನೆನೆದು
ಲಕ್ಷ್ಮೀಧರನ ವಿನಯವಚನಮಂ ನೆನೆನೆನೆದು
ಮನ್ಯುಮಿಕ್ಕಳವಟಿದು ತನ್ನ ಧೈರ್ಯವನುಟಿದು,

---

೧-೧ ಪೇಟಲ್ತಗುಟ್ದು. ೨-೨ (ಕ) ಇಂತೆಂದು.

ಮಗನೆ, ಮಂಗಳ[ದಾ]ಯಿನಿಯರನೊಲ್ಲದೆ ಬಿಟ್ಟು
ಮೃಗವಿರೋಧಿಗಳ ಗರ್ಜನೆಗೆಂತೊಡಂಬಟ್ಟೆ!
ಕಂದ, ಮಣಿಮಯರಾಜಮಂದಿರವನಿಱಿಕೆಯ್ದು
ನಿಂದುರಿವ ಬಿಸಿಲಿಗೆಂತಳುಕದರ್ಥಿಕನಾದೆ!
ಕುವರ, ಸಿತಚಾಮರದ ತಣ್ಣೆಲರ ನೀನುೞಿದು
ದವಧಾರಿತಪಪವನನಾಹತಿಗಳಂ ತಳೆದು,
ತನುಜ, ಬೆಳುಗೊಡೆಯ ತಣ್ಣೆಳಲನೇಕೆಯೊ ಬಗೆಯೆ!
ಘನಘೋರಗಿರಿಗುಹಾಕುಹರದೊಳಗೆಂತಗಿಯೆ!
ನಂದನ, ಸಮಸ್ತಸಾಮ್ರಾಜ್ಯಸುಖಮಂ ತೊಱೆದು
ಕಂದಮೂಲಾಶನದೊಳೆಂತು ಹಸಿವಂ ಮಱೆದೆ!
ಸುತ, ಯುವತಿಲಾವಣ್ಯರಸಮನೆಯ್ದೆ ಱಿಕೆಯ್ದು
ಅತಿವಿಷಯಜಲದೊಳೆಂತುಂ ತೃಷೆಯ ನೀಂ ಕಾಯ್ದು
ಸುತ, ದಿವ್ಯಹಂಸತಳ್ಪಸ್ಥಳಕ್ಕೆಳಸಿದೈ!
ಅತಿ ಕರ್ಕಶಾಭೀಳಶೈಲದೊಳ್ನೆಲಸಿದೈ!
ರಾಮ, ಬಂಧುಗಳಿರಲು ವಿಂಧ್ಯಮಂ ಪುಗುವಿರೈ!
ಸೀಮೆಗಳದಿರ್ದು ದುಃಖಮನೆಂತು ಬಗೆವಿರೈ!
ರಾಘವ, ಶ್ರೀಮುಖವನೆನಗೆಂದು ತೋರ್ಪೆಯೋ!
ಶ್ಲಾಘನೀಯಕ್ಕೆ ರಾಜ್ಯಕ್ಕೆಂದು ಕೂರ್ಪೆಯೋ!
ನೋಡಿದಡೆ ಬಾಡುವವನಿಜೆಯ ನಡೆಸಿದೆಯೆಂತು!
ಕಾಡೊಳಗೆ ನಿಂದು ನೆಲೆಯಾಗಿರ್ಪ ಪರಿಯೆಂತು!
ಎಂದು ಕೌಸಲ್ಯೆ ಶೋಕಾಕುಳಿತೆಯಾಗುತಿರೆ
ನೊಂದಱಿಲ್ದ ಭಯದಿಂ ಸುಮಿತ್ರೆ ಸಂತೈಸುತಿರೆ,
ಕೈಕೆಯುಂ ಕೇಳ್ದು ತನ್ನೊಳೆ ತಿಳಿದು ಕಡು ನೊಂದು
ಶೋಕರಸದಂದಹ್ಯಮಾನಮಾನಸೆ ಬಂದು,
ರಾಮನಿಲ್ಲದೆ ರಾಜ್ಯವೊಪ್ಪದೆಂಬುದ ತಿಳಿದು
ತಾ ಮುನ್ನ ಮಾಡಿದ ದುರಾಗ್ರಹವನೆಯ್ದೆ ಱಿದು,
ಬೇಗದಿಂ ಬರುತಿರಲು ರಾಮಚಂದ್ರಂ ಬಂದು
ಆಗಳುಂ ತಾಪಪುಳಕಾಂಕುರಂಗಳಿನಂದು
ತಾಯ ಚರಣಾಂಬುಜಕ್ಕೆಱಗಿ, ಘನಭಕ್ತಿಯಿಂ
ನ್ಯಾಯಪಥದಿಂ ತೊಲಗಿಸಿರ್ದಧಿಕಯುಕ್ತಿಯಿಂ-

ದಿರೆ ಕೈಕೆ ಪರಸಿ ರಾಮಂಗೆ ಕೈಮುಗಿದಿರ್ದ
ಭರತನುಂ ಭರದಿಂದ ಚರಣದೊಳ್ಬೞ್ದಿರ್ದ
ಮಗುಳೆ ಬಿಜಯಂಗೆಯ್ಯಬೇೞ್ಕಯೋಧ್ಯೆಗೆಯೆನಲು,
ಮುಗಿದ ಕೈವೆರಸು ರಾಮಂ ತಾಯಿಗಿಂತೆನಲು
ದೇವಿ, ಮನುಕುಲದೊಳಗೆ ಬಿಟ್ಟೆೞ್ಪುವವರುಂಟೆ !
ಈವ-ಕಾವಲ್ಲಿ ನುಡಿದೆರಡ ನುಡಿದವರುಂಟೆ !
ಪಿರಿದನೞಿಯೆಂ, ಬಾರೆ ನಿಮ್ಮಾಣೆ ನಾನೆಂದು
ಭರತ, ನೀ ನುಡಿದಡೆನ್ನಾಣೆ ಕಾಡದಿರೆಂದು,
ಭರತಂಗೆ ಪಟ್ಟಮಂ ಕಟ್ಟಿ, ರಾಜ್ಯವ ಕೊಟ್ಟು
ಪುರಕೆ ಪೋಗಲುವೇೞ್ದು [ [೧] ಹಿಂದಕ್ಕೆ ] [೧] ಬೀೞ್ಕೊಟ್ಟು,
ತಿಳುಹಿ ಪುರಜನಮುಮಂ ಕಳುಹಿ [ [೨] ಪರಿ ] [೨] ಜನಮುಮಂ
ನಿಲಿಸಿ ನೃಪಮಾಲೆಯಂ ತಳೆದಧಿಕಲೀಲೆಯಂ ||

೧-೧ ( ಕಖಗ ) ಬಲನ ಹಿಂದಕ್ಕೆ. ೨-೨ ( ಕಖಗ ) ಪುರ.

# ೬ನೆಯ ಸಂಧಿ.



ರಾಗ-ಮುಲಹರಿ. ತಾಳ-ಝುಂಪೆ. [ಕುಸುಮಷಟ್ಪದಿ[೧]]

ದುಷ್ಟರನು ಶಿಕ್ಷಿಸುವ |
ಶಿಷ್ಟರನು ರಕ್ಷಿಸುವ |
ಇಷ್ಟದಿಂ ರಾಮಲಕ್ಷ್ಮಣರೆಸೆದರು || ಪಲ್ಲವ ಪದ ||

ಶ್ರೀನಿಲಯನಖಿಲವಿ- |
ದ್ಯಾನಿಲಯನನುಜನುಂ |
ತಾನು [೨][ಜಗವಿನುತ][೨]ಸೀತಾದೇವಿಯುಂ ||
ಭಾನುಕುಲತಿಲಕರ- |
ತ್ಯಾನಂದದಿಂ ಪಾಯ್ದು- |
ನೂನಗಂಭೀರತಾ[೩]ರಂಗಿಣಿಯನು || ೧ ||

ಹಸಿಯ ತಾಳೆಲೆಗಳಿಂ |
ಬಿಸಿಲ ಪರಿಹರಿಸುತಂ |
ಹಸಿವನಮೃತೋಪಮಫಲಂಗಳಿಂದ ||
ರಸವದಸಿತೇಕ್ಷುರಸ- |
ವಿಸರದಿಂ ತೃಷೆಯನಾ- |
ರಿಸುತಂದು ಮೂವರುಂ ನಡೆತಂದರು || ೨ ||

ಹರಳೊತ್ತೆ ಸೆಡೆವುತಂ |
[೪]ತೆರುತಳವನೆ[೪]ಳಸುತಂ |
ಗುರುಜಘನಭಾರದಿಂ ತಡಮೆಟ್ಟುತಂ ||
ಉರುತರ ಪಯೋ[೫]ಧರದ |
ಭರದಿಂದ ಜಗುಟಿದ್ದೊಡೋ- |
ಸರಿಸುತ್ತ ಸೆಱಗನವನಿಜೆ ನಡೆದಳು || ೩ ||

---

೧. (ಕಖ) ಪ್ರತಿಗಳಲ್ಲಿ ಶರಷಟ್ಪದಿ ಎಂದಿದೆ. ೨-೨ (ಕಖ) ಜಗದ್ವಿನೂತ; (ಗ) ವಿನುತ. ೩ (ಗ) ತ. ೪-೪ (ಗ) ತರುತಳಲೆವನೆಳ. ೫-೫ (ಗ) ಧರಭಯ.

ಬೆಮರುಣ್ಕಿ ತೆನುಲತೆಗೆ
ಪವನಹತಿಯಿಂ ಕುರುಳ್ಗ- |
ಳವಯುವಂ ಕೆದಱೆ ತಿಲಕಂ ತಿರಳಲು ||
ಕುವಲಯನಯನದೊಳು- |
ದ್ಭವಿಸಿ ಕೆಂಪಾಗಳಂ- |
ತವನಿಸುತೆ ರತ್ಯಂತದಂತೆ ಬರಲು || ೪ ||

ನಡೆದು ಕೆಲವೆಡೆಯೊಳಂ |
ತಡೆದು ತಡೆದಲ್ಲಲ್ಲಿ |
ಎಡೆಯೆಡೆಯ ತರುಚಯಂಗಳ ತೋರುತ ||
ಅಡಿಗಡಿಗೆ ನಮಗಿನ್ನು |
ಬಿಡುವ ಠಾವಾವುದೆಂ- |
ದೊಡರಿಸಿದಳಬಲನವನಿಜೆ ರಾಮಗೆ || ೫ ||

ತೊಳಪ ಪಳುಕಿನ ಪಾದ- |
ಶಿಲೆಯೊಳಗೆ ನಡೆಯುತಂ- |
ದಲಘುತರಜಘನಭಾರದೆ ಬಟಲುತ ||
ಸುಲಲಿತಲತಾಂಗಿ ಕೋ- |
ಮಲೆ ಸೀತೆ ರಾಘವನ |
ಬಳಿವಳಿಯ ನೆಳಲಂತೆ ಬರುತಿರ್ದಳು || ೬ ||

ಕೆಲಕೆಲಾವೆಡೆಯ ಕೆಂ- |
ದಳಿರನೊಲವಿಂದೆ ಕೆಂ- |
ದಳಕೆ ಪಡಿಯಿಡುವಂತೆ ಲಕ್ಷ್ಮೀಧರಂ ||
ಲಲಿತತರಭಕ್ತಿಯಿಂ |
ನಲಿನಲಿದು ಪಸರಿಸುತಿ- |
ರಲು ಸೀತೆ ಮೆಲ್ಲಮೆಲ್ಲನೆ ನಡೆದಳು || ೭ ||

---

೧-೧ (ಗ) ತನುಲತೆ. ೨ (ಗ) ಱೆ. ೩-೩ (ಕಖ) ರತ್ನದಂತೆ. ೪ (ಕಖ) ಠಾ. ೫-೫ (ಗ) ರಾಮಂಗೆ. ೬ (ಕಖ) ದಿ. ೭ (ಗ) ವ.

ಎಸೆವ ಮುಖಶಶಿಸುಧಾ- |
ರಸವಿಸರಮೆಂಬಂತೆ ।
ಪಸರಿಸುವ [೧]ಚಿಮ[೧]ರ ಬಿಂದುಗಳ ತಳೆದು ॥
ನಸುಬಾಡಿದಂಗಲತೆ- |
ಯುಸದಳಂ ಸೊಗಸೆ ತ- ।
ನ್ನಸಿಯಳಂ ನೋಡುತಂ ರಾಮ ನಡೆದಂ || ೮ ||

[೨]ಹಸಿವು-ಬಟಲಿಕೆ-ತೃಷೆಯ |
ದೆಸೆಯನಱಿಯಂ ನೀರ ।
ದೆಸೆಯುಮಂ ನೆಳಲ ದೆಸೆಯಂ ನೋಡು[೨]ತ ॥
ಅಸು[೩]ಕೆದಳದಿಂ[೩]ದ ವಿರ- |
ಚಿಸುತ ಶಯನೀಯಮಂ |
ಮಿಸುಪ ಭಕ್ತಿಯೊಳು ಲಕ್ಷ್ಮಣ ನಡೆದನು || ೯ ||

ನದನದೀಗ್ರಾಮಜನ- |
ಪದ-ನಗರ-ಗಹನ-ಸಂ- |
ಮದ-ಖರಶ್ರಮಪದಂಗಳನೆ ಕಳೆದು ||
ಬುಧನುತರನೇಕಗುಣ- |
ಸದನ[೪]ರೆಯ್ದಿದರಂ[೪]ದು ।
ಮುದದಿಂದ [೫]ಪಾರಿಯಾತ್ರ[೫]ಯ ದೇಶಮಂ || ೧೦ ||

ತುಂಗಸರ್ವರ್ತುಕ ವ-|
ನಂಗಳ ಲತಾಮಂಟ- |
ಪಂಗಳ [೬]ಸರಿತ್ಸ[೬]ರೋವರಕೋಟಿಯ[೭] ॥
ರಂಗದ್ವಿಶಾಲಕೂ- ।
ಟಂಗಳ [೮]ವಿಶಾಲ[೮]ದೆ ಮ-|
ನಂಗೊಳಿಪ ಚಿತ್ರಕೂಟವ ಕಂಡರು || ೧೧ ||

---

೧-೧ (ಕಖ) ಚಿವರ. ೨-೨ (ಕಖ) ಈ ಪದ್ಯಾರ್ಧವಿಲ್ಲ. ೩-೩ (ಗ) ದಳಿರಿಂದ. ೪-೪ (ಗ) ರೆಯ್ದುರಂದು. ೫-೫ (ಗ) ಪಾರಿಯಾತ್ರಭಯ. ೬-೬ (ಕಖಗ) ಸರತ್. ೭ (ಕಖ) ಯು. ೮-೮ (ಗ) ವಿಲಾಸದೆ.

ಆಗಿರಿಯ ಶೋಭೆಯಂ |
ರಾಗದಿಂ ನೋಡುತಂ |
ಬೇಗದಿಂ ಬಲಕಿಕ್ಕಿ ಕಳೆದು ಬಂದು ||
ಶ್ರೀಗೆ ನೆಲೆಯೆನಿಸಿ ಚೆಲು- |
ವಾಗಿರ್ದ ವಟವಿಟಪಿ |
ಪೂಗಕ್ಕೆ [1]ಬಂದರಂತಾ[1]ಮೂವರು || ೧೨ ||

ಅಳವಿಗಟಿದುದ್ಯಾನ- |
[2][ ದೊಳಗಿಂದ ][2]ವೊರ್ವರುಂ |
ಜಲವನಕ್ರೀಡೆಗಳನೇಕಾಡರು ||
ಕಳವೆಗೆಯ್ವಾಮರೀ-[3]|
ಕುಳವಿಲ್ಲದೇಕಿರ್ದು-|
[4]ದಿಳೆಯಿದಿಂತೇಕೆ[4] ನಿರ್ಜನವಾಯಿತು ? || ೧೩ ||

ಕೆಲಬಲದ ನೃಪರ ಮೇ-|
ಣ್ಬಲಯುತವನೇಚರರ |
ಕುಳದಿಂದ [5]ಬಾಧೆಯಾಯ್ತಾ[5]ಗಬೇಕು ||
ನೆಲನೆಂದು ಕೃಷ್ಣಂಗೆ |
ಬಲದೇವ[6][ ನೆನ್ನು ][6]ತ್ತಿ- |
ರಲು ಬಂದ[7][ ಮಾರ್ಬಟ್ಟಿ ][7]ಯಿಂ[8]ದನೊರ್ವಂ[8] || ೧೪ ||

ಅಂತು ಬಂದಾತನ- |
ತ್ಯಂತದಿಂ [[9]ಮು] ಂದೆಱಗಿ |
ಮುಂತೆ ಭಯದಿಂ ಕೈಮುಗಿದು ನಡುಗುತಂ ||
ಭ್ರಾಂತನಾಗಿರೆ ಯಶಃ- |
ಕಾಂತಲಕ್ಷ್ಮಣದೇವ- |
ನಂತವಂಗಾಗಳಭಯವನೆ ಕೊಟ್ಟು || ೧೫ ||

---

೧-೧ (ಕಖ) ಬಂದರು ತಾ. ೨-೨ (ಕಖಗ) ವನದೊಳಗೆ. ೩ (ಕಖ) ರಿಯ. ೪-೪ (ಗ) ದಿಳಿಯದಿಂತೇಕೆ. ೫-೫ (ಕಖ) ಭಾಧೆಯಾಯಿತಾಗ. ೬-೬ (ಕಖಗ) ನೆಂದೆನು. ೭-೭ (ಕಖಗ) ಮೂರ್ವಟ್ಟ. "ಮಾರ್ಬಟ್ಟ" ಯೆಂದು ಪಂಪರಾಮಾಯಣದಲ್ಲಿದೆ. ಆ. ೭-೩೨ ವ. ೮-೮ (ಗ) ಯಿಂನೊರ್ವಂ. ೯ (ಕಖಗ) ಬ.

ಇಂತಿದಾವುದು ವಿಷಯ- ।
ವೆಂತು ಪಾೞಿಾದುದೆನ- ।
ಲಂತವಂ ವಿನಯದಿಂ ಬಿನ್ನವಿಸಿದಂ ॥
ಕಾಂತ, ಚಿತ್ತೈಸುವುದ- ।
ವಂತಿ ನಾಡಿದೞೊಳ- ।
ತ್ಯಂತ [೧]ಸೊಗಯಿಪುದುಜ್ಜಯಂತೀ[೧]ಪುರಂ ॥ ೧೬ ॥

ಆದನಾಳ್ವನತಿಬಲಂ ।
ಕದನಕರ್ಕಶನಹಿತ- ।
ಮದರದನಿಸಿಂಹ ಸಿಂಹೋದರನೃಪಂ ॥
[೨]ಅದಿರದಿಲ್ಲಿಯ[೨] ದಶಪು- ।
ರದ ವಜ್ರಕರ್ಣನಂ ।
ಪದೆದು ಮುತ್ತಿದನಾತನಿರ್ದ ಪುರಮಂ ॥ ೧೭ ॥

ಆವಜ್ರಕರ್ಣನುಂ ।
ಶ್ರಾವಕರ್ಗಲ್ಲದೆ ಪ- ।
[೩]ದಾವನತನಾಗೆ[೩]ನಾನೆಂದಿರ್ಪನಂ
ಮೂವ[೪]ಳಸಿ ಮುತ್ತಿಯುಂ ।
ಜೀವಕ್ಕೆ ತಲ್ಲಣಿಸೆ- ।
ಯಾವ ಪರಿಯಿಂದಮೆಱಗದೆಯಿರ್ದನು ॥ ೧೮ ॥

ಮುನ್ನೆನ್ನ ಕಂಡಿರ್ಪ ।
ನಿನ್ನೆನಗೆಱಗದಿರ್ಪ ।
ಬನ್ನಮೆನಗೆಂದು ಸಿಂಹೋದರನೃಪಂ ॥
ಮನ್ನಿಸದೆ [೫]ಚರಿತ[೫]ಸಂ- ।
ಪನ್ನತೆಗೆ ಮುಳಿದು ಸಮು- ।
ದೋನ್ನತಭುಜಂ ಸುತ್ತಿ ಮುತ್ತಿರ್ದಪಂ ॥ ೧೯ ॥

೧-೧ (ಕಖ) ಸೊಗಯಿಪುಜ್ಜಯನ್ತಿ. ೨-೨ (ಗ) ಅದಿರಪಿಲ್ಲಿಯ. ೩-೩ (ಗ) ದಾನತನಾಗೆ. ೪ (ಗ) ಸ. ೫-೫ (ಕಖ) ಚತುರ.

ಆ ಪುರಮುಮಿಲ್ಲಿಗೆ ಸ- ।
ಮೀಪದೊಳೆ ತೋರ್ಕುಮೀ- ।
ಭೂಪ [ನೂರಂ] ಹೊರ್ಕುಳಿಸೆ ದೇಶಮುಂ ॥
ಕಾಪುವಡೆಯದೆ ದೇವ, ।
ಪಾಪದಿಂ ಪಾಳಾಯ್ತು ।
ಪಾಪವಾವಾವ ಕೇಡಂ ಮಾಡದು ॥ ೨೦ ॥

ಎಂದು ಬೀಳ್ಕೊಂಡು ಭಯ- ।
ದಿಂದಾತ ಪೋಪುದುಂ ।
ಕುಂದಬಂಧುರಕೀರ್ತಿ ರಾಮಚಂದ್ರಂ ॥
ದುಂದುಭಿಗಭೀರರವ- ।
ದಿಂದ ದರಹಸಿತಮುಖ- ।
ನೆಂದನಿಂತೆಂದು ಲಕ್ಷ್ಮೀಧರಂಗೆ ॥ ೨೧ ॥

ಎಸೆವ ಗುಣಮಣಿಯ ರ- ।
ಕ್ಷಿಸಲೆಂದು[ಯಿ]ರ್ದನಂ ।
ಅಸಮಬಲ ಮತ್ತೆ ಸಿಂಹೋದರನೃಪಂ ॥
ಕುಸಿಯನಾತಂಗೆ ದೆಸೆ- ।
ದೆಸೆಗೆ ಪಸರಿಸೆ ಕೀರ್ತಿ ।
ವಸುಮತೀಶಂ ವಜ್ರಕರ್ಣನಿರ್ದಂ ॥ ೨೨ ॥

ಆತನನುಪೇಕ್ಷಿಸಿದ ।
ಪಾತಕಂ ತೊದಳೇನೊ ।
ಪಾತಕಕೆ ಮತ್ತೆ ಕೇಡೊಳವೆ ಬೇಱೆ ॥
ಮಾತೇನೊ ದಶಪುರ- ।
ಕ್ಕಾತುರದೆ ಪೋಪವೆಂ- ।
ದಾತುರಗುಣರ್ತಳರ್ದು ಬಂದರಲ್ಲಿಂ ॥ ೨೩ ॥

೧-೧ (ಕಖಗ) ರೀವೂರ. ೨ (ಗ) ಇ. ೩ (ಕಖ) ದ್‌ನು. ೪-೪ (ಗ) ಅನನು.
೫ (ಗ) ಕೊ.

ಅಂತು ದಶಪುರದ ಪರಿ- |
ಯಂತರ ಜಿನಾಲಯು- |
ಕ್ಕಂತನರ್ಬಂದು ಬಲಗೊಂಡು ಮುದದಿಂ ||
ಕಂತುವಿಜಯನನೊಲಿದ- |
ನಂತನುತಿಗಳಿನಂದು |
ಸಂತಸದೆ ನುತಿಗೆಯ್ದು ಪೊಡವಟ್ಟರು || ೨೪ ||

ಅಂತು ಜಿನನುತಿಯನ- |
ತ್ಯಂತ ಮುದದಿಂ ಮಾಡಿ |
ಸಂತಸದೆ ಮಂಟಪದಿ ಕುಳ್ಳಿರ್ದರು ||
ಇಂತೀಗಳಂತೆ ಗುಣ- |
ವಂತನುಪಸರ್ಗಮಂ |
[[1] ಭ್ರಾಂತನೇ [1]] ಕಳೆಯುವೇಳ್ಕೆಂದಾಗಳು || ೨೫ ||

ಅನುಜನ ಮುಖಾಂಬುಜಮು- |
ನನುನಯದೆ ರಾಘವಂ |
ಮನವೊಲಿದು ನೋಳ್ಪುದುಂ ಲಕ್ಷ್ಮೀಧರಂ ||
ವಿನಯದಿಂ ಬೀಳ್ಕೊಂಡು |
ಮುಸಿದಂತಕನ ತೆಜದೆ[2] |
ಧನುವ [3]ಹಾರದ[3] ಕಡುಪಿನಿಂ ನಡೆದನು || ೨೬ ||

[4]ಬರಲಿತ್ತ[4] ಮೂವಳಸಿ |
ಭರದಿಂದೆ ನಾಲ್ಕು ಗೋ- |
ಪುರದೊಳಂ ಲಗ್ಗೆಯಂ ಮಾಡುತಿರಲು ||
ಪರಸೇನೆ ಮುತ್ತಿರಲು |
ಹರಿ ಮಸಗಿದಬ್ಧಿಯೊಳು |
ತರಣಿಯಿರ್ಪಂತಿರ್ದುದಾ ದಶಪುರಂ || ೨೭ ||

೧-೧ (ಕಖ) ಭ್ರಾಂತೆನೆ; (ಗ) ಭ್ರಾಂತೆನೆ. ೨ (ಗ) ದಿ. ೩-೩ (ಕಖ) ಹೊರದೆ. ೪-೪ (ಗ) ಬರಲೀತ.

ಆಪುರವ ಮೂವಳಸೆ |
ಕೋಪದಿಂ ನಿಜಸೇನೆ |
ಭೂಪಾಲ ಸಿಂಹೋ[1]ದರಂ ನೋ[1]ಡುತಂ ||
ಆಪುರದೊಳರೆನೆಲೆಯೊ- |
ಳಾಪಾದಮಸ್ತಕಂ |
ವ್ಯಾಪಿಸಿರೆ ವಜ್ರಾಂಗಿ ನಿಂದಿರ್ದನು || ೨೮ ||

ಆಗ ಲಕ್ಷ್ಮೀಧರಂ |
ಪೋಗಿಯರೆನೆಲೆಗೆ ಕಡು |
ಬೇಗದಿಂ [2]ಸಿಂಹೋದರನ[2] ಕಂಡಿರೆ ||
ಶ್ರೀಗಧಿಪನ[3]ಳ್ಕೆ ತಲೆ- |
ವಾಗದೆ ಸಿಡಿಲ ವೊಲಿಂ- |
[4]ಬಾಗೆ[4] ಘುಡಿಘುಡಿಸುತಂ ನುಡಿದನಿಂತು || ೨೯ ||

ಚಾರುಮತಿ ರತ್ನತ್ರ- |
ಯಾರಾಧಕರ್ಗಲ್ಲ- |
ದಾರಿ[5]ಗುಂ ವಜ್ರಕರ್ಣಂ ಪೊಡವಡಂ ||
ಆರಯ್ಯದಿಂತಿದಂ |
ಕ್ರೂರಸಿಂಹೋದರಂ |
ಧಾರಿಣಿವಿನೂತ ಮುತ್ತಿದನೆಂಬುದಂ || ೩೦ ||

ಭರತಭೂಪತಿ ಕೇಳ್ದು |
ಕರವಮುಳಿದು ಕಳುಪಿದಂ |
[6]ಭರದಿಂದ[6]ಮವನ ತೆಗೆಯಿಸಲೆನ್ನನು ||
ಇರದೀಗಳಿಂತೆ ತೆಗೆ |
ಪಿರಿದೇನೊ ಕೊಡೆನೆಳಲೊ- |
ಳಿರಲಾಸೆಗೆಯ್ವುಡುಟಿ ಮುಳಿಸನಿಲ್ಲಿ || ೩೧ ||

---

೧-೧ (ಕಖ) ದರಂತಾ ನೋಡು. ೨-೨ (ಗ) ಸಿಂಹೋದರಂ. ೩ (ಕಖ) ಗ. ೪-೪ (ಕಖ) ಬಾಗಿ. ೫ (ಗ) ಗಂ. ೬-೬ (ಗ) ಭರದಿಂ.

ಶರದ-ನಿನದಕ್ಕೆ ಕೇ- |
ಸರಿ ಮಸಗುವಂತೆ ದು- |
ರ್ಧರಭುಜಂ ಸಿಂಹೋದರಂ[೧] ಕೋಪಿಸಿ ||
ಹಿರಿಯನಿರೆ ಕೃತಕದಿಂ |
ಧರೆಯತಾನಾಳ್ವ[೨]ದತಿ
ಪರಿಭವಂ ತನಗಾವ ಗುಣಮಿಂತಿದು || ೩೨ ||

ಅಗ್ರಜಂ ನೋಡೆ ತ- |
ನ್ನಗ್ರತೆಯನುಳಿದನಾ- |
ವ್ಯಗ್ರಲಕ್ಷ್ಮಣನಲ್ಲದಂದು ತನಗೆ ||
ನಿಗ್ರಹಾನು[೩[ಗ್ರಹಸ-]೩]
ಮಗ್ರ[೪]ತೆಯದೆತ್ತಣದು |
[೫[ವಿಗ್ರಹದಿನೆನ್ನ]೫] ತೆಗೆಯಿಸಲಿ ಪೋಗು || ೩೩ ||

ಎನೆ ಲಕ್ಷ್ಮಣಂ ಬೇಡ |
ನಿನಗಿನಿತು ಕಡುಪು ಘ- |
ಮ್ಮನೆ ತೆಗೆದು ಪೋಗೆಂದು ಜಡಿದು ನುಡಿಯೆ ||
ಮುನಿದು ಕೂರಸಿಯಿಂದ |
ವನಜಾಕ್ಷನಂ ಪೊಯ್ಯ- |
ಲನುಗೆಯ್ದನತಿಬಲಂ ಸಿಂಹೋದರಂ || ೩೪ ||

ಹರಿಗೆ ಶರಭಂ ಮುಳಿದು |
ಭರದಿಂದ ಮೇಲ್ವಾಯ್ವ |
[೬[ತೆಱದೆ]೬] [೭]ಸಿಂಹೋದರನು ಮೇಲ್ನೆಗೆಯಲು ||[೭]
ಸರಸಿಜಾಕ್ಷಂ ಕಾಯ್ದು |
ಕರದ ಕೂರಸಿ ಬೀಳ- |
ಲಿರದೊತ್ತಿ ಕಂಕುಳದೊಳವುಚ*ಕೊಂಡಂ || ೩೫ ||

---

೧ ( ಗ ) ರ. ೨ ( ಗ ) ಳ್ದ. ೩-೩ ( ಕಖ ) ಗ್ರಹತೆ. ಸ-|. ( ಗ ) ಗ್ರತೆ ಸ-|. ೪ ( ಗ ) ದ. ೫-೫ ( ಕಖಗ ) ವಿಗ್ರಹದೆನೆನ್ನ. ೬-೬ ( ಕಖಗ ) ಪರಿಯಿಂದ. ರಕಾರ ಱಕಾರ ಪ್ರಾಸ. ೭-೭ ( ಗ ) ಸಿಂಹೋದರನ ಮೆರಿಗೆ.

ಎಡೆಯೊಕ್ಕ ಭೂಪರಂ |
ಕಡಿಖಂಡಮಾಡುತಂ |
ಹೊಡೆವುತಂ ಬರಸಿಡಿಲ ತೆಱದಿ ಕೆಲರಂ ||
ಇಡುತಲಾನೆಯು ಕೊಂಡು |
ಕಡುಕೆಯ್ವ ಗಜಘಟೆಯು- |
ನಡಕಲಿಟ್ಟಂ ಹೆಣನ ಮೇಲೆ ಹೆಣನಂ || ೩೬ ||

ಕರಿಯಿಂದ ಕರಿಘಟೆಯು |
ತುರಗದಿಂ ತುರಗವಂ |
ನರರಿಂದ ನರರಂ ರಥದೆ ರಥವನು ||
ಧುರದೊಳಪ್ಪಳಿಸುತಂ |
ಭರದೆ ಸಿಂಹೋದರನ- |
ನಿರದೆ ರಘುರಾಮನಲ್ಲಿಗೆ ತಂದನು || ೩೭ ||

[೧]ಅವರೋಧ ಕಾಮಿನೀ-[೧] |
ನಿವಹಮೆಯ್ತಂದು ಗಳ- |
ದವಿರ[[೨]ಳಾಶ್ರುಸ್ರಾವಪ್ಲಾವಿತ][೨]ಮುಃಖಂ ||
ಅವತಂಸಮುಂ ಕಾವು- |
ದವಯುವ[೩]ದೆ ರಕ್ಷಿಪುದು |
ಭುವನಭೂಷಣಮೆನುತ್ತೆಱಗೆ ಪದಕೆ || ೩೮ ||

ಅವರಿಗಂಜದಿರೆಂದು |
ಭುವನಭುಂಭುಕಯಶಂ |
ಕುವಲಯದಲಶ್ಯಾಮನಿತ್ತಭಯಮಂ ||
ವಿವಿಧಗುಣ-ನಿಧಿಯು ರಾ- |
ಘವನ ಸಾರಕ[೪]ೆ ತರಲು |
ರವಿಕುಲತಿಲಕನೆಂಟನೆಯ ಕೇಶವಂ || ೩೯ ||

---

೧-೧ (ಕಖಗ) ಅವರೋದ; ೨-೨ (ಕಖ) ಳಶ್ರುಷ್ಟವಷ್ಟಾವಿತ, (ಗ) ಳಶೃಷ್ಠಾವಪ್ಲಾವಿತ. ೩ (ಗ) ದಿ. ೪ (ಗ) ಕೈ.

ಇವರು ಕಾರಣಪುರುಷ- ।
ರಿವರೆ ರಾಮಾಚ್ಯುತರು ।
ಭುವನಪಾವನ[೧][ರಿನ್ನ][೧]ರುಂಟೆ ಪೇಱರು ॥
ಇವರ್ಗಿದಿರದಾರೆನು- ।
ತ್ತವನಱಿದು ತಿಳಿದು ರಾ- ।
ಘವನೆ ಶರಣಂ ಶರಣೆನುತ್ತೆಱಗಿದಂ ॥ ೪೦ ॥

ಅನುಜನತಿಬಳತೆಯಂ ।
ಮನದೊಳೇ[೨] ರಘುವೀರ- ।
ನನುನಯದೆ ಮೆಚ್ಚಿ ಪುಲಕಿತಶರೀರಂ ॥
ವಿನಯವಿನಮಿತನಾದ- ।
ವನಿಪ ಸಿಂಹೋದರಂ- ।
ಗನವದ್ಯಚರಿತನಭಯುವನೆ ಕೊಟ್ಟು ॥ ೪೧ ॥

ಉಱುವುದು ದುರಾಗ್ರಹವ ।
ತೆ[೩]ಳೆವುದಶರಾಗ್ರಹ[೩]ಮು- ।
ನಳವಿಗಱಿದನುಬಂಧಮುಂ ಪೃಥ್ವಿಯಂ ॥
ಸಲೆ ವಜ್ರಕರ್ಣನೊಳು ।
ಬಳಯಿಸುವುದೆನುತ[೪] ರವಿ- ।
ಕುಲತಿಲಕನಾತಂಗಭಯುವನಿತ್ತಂ ॥ ೪೨ ॥

ಜನಪಸಿಂಹೋದರಂ ।
ವಿನಯವಿನಮಿತನಾಗಿ ।
ಅನುನಯದಿನಿಂತೆಂದು ಬಿನ್ನವಿಸಿದಂ ॥
ನೆನೆಯೆನೀ[೫]ರಾಜ್ಯಮುಂ ।
ವನವಾಸಸೌಖ್ಯಮುಂ ।
ಜನನಾಥ ನಿನ್ನೊ[೬]ಡನೆ ಮಾಳ್ಪೆ ನಾನು ॥ ೪೩ ॥

---

೧-೧ (ಕಖ) ರೆಂನ; (ಗ) ರಿನ್ನಾ. ೨ (ಕಖ) ಳೀ. ೩-೩ (ಗ) ತೆಳೆವುದು ಸದಾಗ್ರಹಮು. ಳಕಾರ ಱಕಾರ ಲಕಾರ ಪ್ರಾಸ. ೪ (ಕಖ) ತ್ತು. ೫ (ಕಖ) ವೀ. ೬ (ಗ) ವ್ಮೊ.

ಮತ್ತಿತ್ತ ದಶಪುರದೊ- ।
ಳುತ್ತರೋತ್ತರಮಾಗೆ ।
ಚಿತ್ತೋತ್ಸವಂ ವಜ್ರಕರ್ಣನಿರ್ದಂ ॥
ಮತ್ತೇಭಮಂ ಸಿಂಹ- ।
ವೊತ್ತಿಕೊಂ೧ಡೊಯ್ವಂತು೧- ।
ದಾತ್ತನಾ ಸಿಂಹೋದರನನೊಯ್ದಪಂ ॥ ೪೪ ॥

ಎಂದು ಕೌತುಕಚಿತ್ತ- ।
ದಿಂದಮೀಕ್ಷಿಸುತಂ ಮು- ।
ಕುಂದನಲ್ಲದರಿಗಿನಿತುಂಟೆ ಶೌರ್ಯಂ ॥
ಸಂದೇಹಮಿಲ್ಲದೆ ಮು- ।
೨ಕುಂದನಾಗಲೆ೨ವೇಳ್ಕು- ।
[ಮಿಂ]ದು ನಮ್ಮಯ ಪುಣ್ಯಫಲದಿಂದ [೩ವೇ] ॥ ೪೫ ॥

ಪುರಕೆ ರಾಮಾಚ್ಯುತ- ।
ರ್ಭರದೆ ಬಂದೆನಗಿಂತು- ।
ದುರಿತಮಂ ಪರಿಹರಿಸಿದರ್ಕರುಣದಿಂ ॥
ಪರಮಪಾವನರೆಂದು ।
ಪಿರಿದು ಸಂತಸದಿಂದ ।
ಪರಿಜನಂ ಪುರಜನಂ ಸಹಿತಬಂದು ॥ ೪೬ ॥

ಬಂದು ಜಿನಮಂದಿರ೪ವ- ।
ನಂದಾತ ಬಲಗೊಂಡು ।
ಕಂದರ್ಪವಿಜಯಂಗೆಱಗಿ ಬಳಿಕ್ಕಂ ॥
ಸಂದ ರಾಮಾಚ್ಯುತರ ।
ಸೌಂದರಪದಯುಗಾರ- ।
ವಿಂದಮಂ ನಿಜಮಕುಟದಿಂದರ್ಚಿಸಿ ॥ ೪೭ ॥

---

೧-೧ (ಕಖ) ವೊತ್ತಿಕೊಂಡೊಯ್ವಂ ನ; (ಗ) ಕೊಯ್ವಂತು. ೨-೨ (ಗ) ಕುಂದ ನೋಡಲೆ. ೩ (ಕಖಗ) ವು. ೪ (ಗ) ಮ.

ಧಾರುಣೀ[೧]ಸ್ತುತರಾಮು |
ಕಾರುಣ್ಯವಸುಧಾಮು |
ಪೂರದೊಳು ತನುಶರ[[೨]ಚ್ಚಂ]ದ್ರಿಕೆಯೊಳು ||
ಚಾರುಚರಿತಂ ಮೇರು- |
ಧೀರನೋಲಾಡುತ್ತು- |
ದಾರನಿಧಿಗಿಂತೆಂದು ಬಿನ್ನವಿಸಿದಂ || ೪೮ ||

ದೇವೆನ್ನ ಪುಣ್ಯಪ್ರ- |
ಭಾವದಿಂದೇಟ್ಟಿಂದಿ- |
ರೀವಸುಧೆಗೆನ್ನ ರಕ್ಷಿಸಲು [೩]ವೇಡಿ[೩] ||
ಭೂವಳಯದೊಳು ನಿಮ್ಮ |
ಪಾವನಗುಣಂಗಳಂ |
ದೇವೋರಗೇಂದ್ರರಳವೇ [[೪]ಸ್ತುತಿಯಿಸೆ[೪]] || ೪೯ ||

ಎನೆ ರಾಮಚಂದ್ರನಾ- |
ತನ ವದನಚಂದ್ರನಂ |
ಜನನುತಂ ಕಾರುಣ್ಯದಿಂದೀಕ್ಷಿಸಿ ||
ಅನವದ್ಯಚರಿತಪಾ- |
ಲನವಿಶಾರದನಪ್ಪ |
ನಿನಗೆ ಮೆಚ್ಚಂ ಬೇಡಿಕೊಳ್ಳೆಂ[೫]ದನು[೫] || ೫೦ ||

ಎನೆ ವಜ್ರಕರ್ಣನತಿ |
ವಿನಯದಿಂದಿಂತೆಂದ- |
ನೆನಗೆ ದೇವರ ಕೃಪೆಯಿನರಿದಾವುದು? ||
ಜನಪಸಿಂಹೋದರನ- |
ನೆನಗಾಗಿ ಕರುಣಿಸುವು- |
ದೆನೆ ಲಕ್ಷ್ಮಣಂ ಮೆಚ್ಚಿ ನುಡಿದನಿಂತು || ೫೧ ||

---

೧ (ಗ) ಮು. ೨ (ಕಖಗ) ಶ್ಚಂ. ೩-೩ (ಕಖ) ವೇಡೆ; (ಗ) ಹೇಡಿ. ೪-೪ (ಕಖ) ಸ್ತುತಿಸುವಡೆ; (ಗ) ಸುತ್ತಿಯಿಸೆ. ೫ (ಕಖ) ಬುದು.

ಪುರವ ಮೂವಳಸಿ [೧]ಚ- |
ಚ್ಚರದೆ[೧] ತನ್ನಂ ಕೊಲಲು |
ಬರೆಯುಂ ಮುಳಿಯದೆ ಸಿಂಹೋದರಂಗೆ ||
ಕರುಣಿಸುವುದೆಂದು ದೇ- |
ವರ ಬೇಡಿಕೊಂಡಪಂ |
ಪುರುಷಾರ್ಥನಿಧಿಗುಂಟೆ ಮುನಿಸಾರೊಳು || ೫೨ ||

ಎಂದಾತನೊಳ್ಗುಣಮು- |
ನಂದು ಕೊಂಡಾಡಿ ಗೋ- |
ವಿಂದನವರಿರ್ವರಂ[೨] ಮುಳಿಸನುಟಿಿಸಿ ||
ಸಂದ ನಾಡುಂ ಬೀಡ- |
ನಂದಿರದೆ ಹಚ್ಚಿಕೊ- |
ಟ್ಟಿಂದನಿಂತೆಂದು ಸಿಂಹೋದರಂಗೆ || ೫೩ ||

ಅನುಬಂಧಗಿಡದೆ ಮನ- |
ದನುನಯದೆ ನಡೆವುದಿ- |
ನ್ನಿನಿತು [೩]ಚಿತ್ತವ[ನು] ಮಾಡಿದೆಯಾದಡೆ[೩] ||
ಅನವರತ [೪]ಕರುಣವ- |
ಣ್ಣಾನ ಶರಾಸನಕಿಲ್ಲ[೪] |
ನೆನೆದಿಹುದಿದಂ ಪ್ರಯತ್ನದಿನಿರ್ವರುಂ || ೫೪ ||

ಮುರವೈರಿ ಸಂತೈಸಿ |
ಹರುಷದಿಂ ಕೈಕೊಂಡು |
ಕರಕಮಲಮಂ ಮುಗಿದು ವಜ್ರಕರ್ಣಂ ||
ಕರುಣಿಸುವುದೆನಗೆನ್ನ |
ಪುರಕೆ ಬಿಜಯಂಗೆಯ್ದು |
ಸಲೆ ಪಾಲಿಸುವುದೆಂದು ಬಿನ್ನವಿಸಿದಂ || ೫೫ ||

---

೧-೧ (ಗ) ಸೆಚ್ಚ- ರದೆ. ೨ (ಗ) ರುಂ. ೩-೩ (ಗ) ಕಿತ್ತಡವ ಮಾಡೆಯಾದಡೆ. ೪-೪ (ಗ) ಕರುಣಮಾನಸರಾಸನಕಿಲ್ಲಿ.

ಎನೆ ರಾಮಚಂದ್ರನಾ- |
ತನ ವಿನಯವಚನಮಂ |
ಮನದೆಗೊಂಡೇೞ್ತಿರುತ್ತಿರೆ ಹರುಷದಿಂ ||
ಕ[1]ನಕವ[1]ರತ್ನ [ದಿಂ][2] |
[ನನೆ][3] ಮಾಲಿಕೆಗಳಿಂದ |
ಘನಶೋಭೆವಡೆದುದಂತಾದಶಪುರಂ || ೫೬ ||

ಗುಡಿತೋರಣಂಗಳಿಂ |
ಪೊಡೆವ ಜಯದುಂದುಭಿಯ- |
ನೊಡನೊಡನೆ ಪೊಗೞ್ವ ವಂದಿವ್ರಾತದಿಂ ||
ಆಡಿಗಡಿಗೊಲಿದು ಸೇಸೆ |
ಯಿಡುವ ಕುಲಸತಿಯರಿಂ- |
ದೊಡರಿಸಿತು ಮುದವ[4]ನಾದಶಪುರದೊಳು || ೫೭ ||

ಬಂದು ಪುರಮಂ ರಾಜ- |
ಮಂದಿರವ[5]ುವಮಂ[5] ಪುಗೆ ಮು- |
ಕುಂದಸಹಿತಂ ರಾಮಚಂದ್ರನೊಲವಿಂ ||
ಅಂದು ರತ್ನಾರ್ಘ್ಯಚಯ- |
ದಿಂದಮ[6]ರ್ಚಿಸಿ ಮುದದಿ[7] |
ನೊಂದಿದಂ ವಜ್ರಕರ್ಣ ಕ್ಷಿತೀಶಂ || ೫೮ ||

ಭರದೆ ಸಿಂಹೋದರಂ- |
ಗುರುವಸ್ತ್ರವಾಹನದೆ[8] |
ಪರಿತುಷ್ಟಿಮಾಡಿ ಸಮುಚಿತ ವಿನಯದಿಂ ||
ಪರಮಕೃಪೆಯಾಶೆ[9]ಯಾ- |
ಸರಸಿಯೊಳ್ಮುಳುಗಿದಂ- |
ತಿರೆ ವಜ್ರಕರ್ಣನೞ್ತಿಯೊಳಿರ್ದನು || ೫೯ ||

---

೧-೧ (ಗ) ಕನಕನವ. ೨ (ಕಖಗ) ಮಂ. ೩-೩ (ಕಖಗ) ನವ. ೪ (ಕಖ) ದಿ. ೫-೫ (ಕಖ) ಮುದಂ, ೬ (ಗ) ಸೆ; ೭ (ಕಖ) ದೆ. ೮ (ಗ) ದಿ. ೯ (ಗ) ಶ.

ವರವಜ್ರಕರ್ಣನ ಕು- ।
ವರಿಯರೆಣ್ಬರನುೞಿದ ।
ಧರಿಣಿಪಾಲಕರ ಸುತೆಯರ ಮಿಕ್ಕರಂ ॥
ಭರದಿಂದ ಮಱುದಿನದೊ- ।
ಳರವಿಂದನಾಭನಾ- ।
ದರದೆ ಮೂನೂರ್ವರಂ ಮದುವೆನಿಂದಂ ॥ ೬೦ ॥

ಮುದದಿ ಸಿಂಹೋದರನ ।
ನೊದವಿದ ಪ್ರೀತಿಯಿಂ ।
ಪದೆದು ಬೀಳ್ಕೊಟ್ಟುಜ್ಜಯಂತಿಪುರಕೆ ॥
ಉದಿತೋದಿತಾಭ್ಯುದಯು ।
ಸಧನರಂತಾದಶಪು- ।
ರದೊಳಿರ್ದರೊಲಿದು ಕೆಲವಾನು ದಿವಸಂ ॥ ೬೧ ॥

ಅಲರು^೧ ಮಾಗಿಯು^೧ ಬಲುಪ- ।
ನುಲಿಯೆ ಸೀೞುಡು ಚೀ[ಱೆ^೨]
ಜಳವಕ್ಕಿ ತಿಳಿಗೊಳನನುೞಿದು ಪೋಗೆ ॥
ಎಳಸೆ^೩ ಮುರ್ಮುರ ಪವನ- ।
ನಳು[ರ್ವೆ^*]^೪ ದಾವಾನಲಂ ।
ತಲೆದೋರಿತೊಯ್ಯನೊಯ್ಯನೆ ಬೇಸಗೆ ॥ ೬೨ ॥

ತೋಱೆ ಹರಿಯುಡುಗೆ ಕೂಡಿ ।
ಕೆಱೆ ಬತ್ತಿ ಬೀಡೇೞೆ ।
ಬಱವಱಂ ಬತ್ತೆ ಪಥಿಕರ ಬಾಯ್ಗಳು ॥
ಮಱುಗೆ ತಿಮಿ ಮಕರಂಗ- ।
ಳುಱೆ ಕಾದ ಕೆಸಱೊಳು ।
ಬಿಱುಗಾಳಿ ಬೀಸೆ ಬೇಸಗೆ ಬಂದುದು ॥ ೬೩ ॥

---

೧-೧ (ಕಖ) ಅಲೆದು. ೨ (ಕಖ) ಱು; (ಗ) ಱು, ೩ (ಕಖ) ಸಿ. ೪ (ಕಖಗ) ರ್ವ.

ಬಿಸಿಲ್ಗು*ದುರೆ ಹರಿದು ಮ- |
ರ್ಬಿ೯ಸಿತು ಕಾಳ್ಕಿಚ್ಚೆಯೆದ್ದ |
ಮಸುಳವಾದವು ಧೂಮದಿಂದೆಸೆಗಳು ||
ವಸುಧೆ ನೀರಸೆಯಾಯ್ತು |
ಬಿಸಿಲು ಭೀಕರವಾಯ್ತು |
[ಪಸರೆ] ಭೀಷ್ಮವೆನಿಸಿದ ಗ್ರೀಷ್ಮಕಾಲಂ || ೬೪ ||

ತರುಗಳೆಲೆಯಿಕ್ಕಿದವು |
ಮರುಮರೀಚಿಕೆಗಳಿಗೆ |
ಹರಿಣಿಗಳು ನೀರಳ್ಕೆಯಿಂ ಪರಿದುವು ||
ಸರಸಿಜಾಕರದೊಳಾ- |
ದರವುಳಿದುವು ಮಧುಪಗ- |
ಳುರಿವರಿವುತಂದು ಬಂದುದು ಬೇಸಗೆ || ೬೫ ||

ಅಂತಿರ್ದ ಬೇಸಗೆಯೊ- |
ಳಂತಾನುಮವರಲ್ಲಿ |
ಸಂತೈಸಿ ವಜ್ರಕರ್ಣನನಲ್ಲಿಯೆ ||
ಸಂತಸವೊದವೆ ಮುನ್ನಿ- |
ನಂತೆ ಮೂವರು ತೆಂಕ |
ಮುಂತಾಗಿ ರಾಗದಿಂ ನಡೆತಂದರು || ೬೬ ||

ತೊಳೆದ ಪುಲ್ಲಂತೆನ್ನ- |
ನಿಟಿಲಕೆಯ್ದನೇಕಕುಂ- |
ಡಲನೆಂಬ ಸಂತಾಪದಿಂ ಭೂಸತಿ ||
ಕಳವಳಿಸಿ ದಾಹವಂ |
ತಳೆದುದೆನೆ ಮುಂಬಗಲಿ- |
ನೊಳೆ ಕಾಯ್ದು ನೆಲನು ಕಾಲಿಡಬಾರದು || ೬೭ ||

---

೧-೧ (ಗ) ಬೀ೯ಸಿತು ಕಾಳ್ಗಿಚ್ಚಯುದ್ದು ಸುಳದವಾದವು. ೨-೨ (ಕಖಗ) ಕರ. ೩ (ಕಖ) ಧ. ೪-೪ (ಗ) ಸಂತಸಂ ವೊದವೆ. ೫ (ಕಖ) ಕೊ. ೬ ಳಕಾರ ಲಕಾರ ಱಕಾರ ಪ್ರಾಸ. ೭ (ಕಖ) ಷ.

ಇನಕುಲಶ್ರೀ ನಿನಗೆ |
ಮನಮೊಲಿದು ಬಂದಿರ್ದ-|
ಡನುಜಂಗೆ ಕುಡುವುದಕ್ರಮವೆಂಬುದಂ ||
ಕನಲ್ದು* ಪೇೞಲು ಬೇಡಿ |
ಮುನಿದನೆಂಬಂದದಿಂ |
ಘನತಾಪಮಂ ತಳೆಯೆ ಚಂಡಭಾನು || ೬೮ ||

ಅಱಸಿ ಭೂಮಿಯ ರಸವ |
ನೆಱೆ ಕೊಂಡು ಕಾನನದ |
೧ಮೞೆಗೊಂಡು ತರುತಳದೊಳಿರ್ದ್ದಂತುಟಂ ||
ತಱಗೆಲೆಗ[ಳೆಡೆಯ ಪೊ- |
ಕ್ಕಱಸು]ತಿರ್ದಪುದೆನಲು |
ನೆಱೆ ತೋಱತೆಯ್ದೆ ಮರ್ಮರಮಾರುತಂ || ೬೯ ||

ಕರಿ ಸರೋರುಹದಳದೆ |
ಭರಿಕೆಯ್ಯನೆತ್ತಿ ನಿಜ- |
ಕರಿಣಿಯಂ ನಡಸುತ್ತ ನಿಂದು ನಿಂದು ||
ಧರಣೀತನುಜೆಯುನೀ- |
ಪರಿಯಿಂದ ನಡಸಿಯೆಂ- |
ದಿರದೆ ರಾಮಂಗೆ ಸೂಚಿಸುವಂತಿರೆ || ೭೦ ||

ಕರಿಯೊಂದು ಸರಸಿಜಾ- |
ಕರದೊಳಗೆ ಪೊಕ್ಕು ಪು- |
ಷ್ಕರದಿಂ ಮೃಣಾಳಕಾಂಡವನೆ ಕಿತ್ತು ||
ಭರದಿಂದ ಮಸ್ತಕದೊ- |
ಳಿರದೊಟ್ಟಿಕೊಂಡು ಖರ- |
ಕರಭಯಂಕರಕೆ ಸೆಡೆಯುತ ನಡೆವುತಂ || ೭೧ ||

---

೧ (ಗ) ಸು. ೨-೨ (ಕಖಗ) ಳೆಡೆಯೊಳು ಪೊ | ಕ್ಕಱಸು. ೩ (ಗ) ವ. ೪ (ಕಖಗ) ದಿ.

ಬರುತಿರ್ದ ಮದಕರಿಯ ।
ಪಿರಿದೆನಿಪ ನೆಳಲಿನೊಳು ।
ಹರಿಯೊಂದದಕೆ ಮುಳಿಯದೇ ಬಂದುದು ॥
ಅರಿಯಾದೊಡಾಕರಿಯ ।
ಭರದಿಂದ ನಯವಿದ- |
ರ್ಪರಿಪಾಲಿಸುವುದೆಂದು ಪೇೞ್ವಂದದಿಂ || ೭೨ ||

ಬಿಸಿಲಿಗಂ ಗಾಳಿಗಂ |
ನಸು ಬಾಡೆ ತನುಲತಿಕೆ |
ಕುಸುಮಕೋಮಳೆ ಹೊಸೆದ ಹೂವಿನಂತೆ ||
ಕುಸುಮಶರನೊಡನೆ ರತಿ- ।
ಯೊಸೆದು ಬರ್ಪಂತೆ ರಂ- ।
ಜಿಸಿ ರಾಮನೊಡನೆ ಜಾನಕಿ ನಡೆದಳು ॥ ೭೩ ॥

ಅಂತು ಬಂದೊಂದು ಘನ- |
ಕಾಂತಾರಮಂ ಕಳೆದು |
ಶಾಂತದೊಳ್[೧]ಕೂರವವೆಸರ ನಗರದ[೧] ||
ಸಂತತಹಿಮಚ್ಛಾಯೆ- |
ಯಂ ತಳೆದ ವಟವಿಟಪಿ- ।
ಗಂತ[ವ]ರ್ಮೂವರುಂ ಸಾರ್ತಂದರು ॥ ೭೪ ॥

ನೀರಡಿಸೆ ಜನಕಸುತೆ |
ನೀರೆಡೆಯ ನೋಡಲ್ಕೆ |
ವಾರಿಜಾಕ್ಷಂ ಬರುತ್ತಂ ಕಂಡನು ||
ಚಾರುತರ ವನದೊಳಗೆ ।
ನೀರೇಜಷಂಡಮಂ |
ವೀರಪುರುಷರ್ಕಾಯ್ದುಕೊಂಡಿರ್ದುದಂ ॥ ೭೫ ॥

---

೧-೧ (ಕಖ) ಳ್ಕೂರವ ವೆಸುನಗಾದಾ. ಪಂಪರಾಮಾಯಣದಲ್ಲಿ ಈ ಪಟ್ಟಣದ ಹೆಸರು "ಕುರವಕ" ಎಂದಿದೆ. ಆ. ೭-೧೦೩ ವ.

ಬಲುಪಿಂದ ಪೊಕ್ಕಲ್ಲಿ ।
ಜಲರುಹದ ದಳದೊಳಗೆ |
ಸಲಿಲಮಂ ಕೊಂಡು ಪೊಱಮಡುತಿರ್ಪಿನಂ ||
ತೊಳಪ ಕೂರಂಕುಶದ |
ಬೆಳಗು ಮೆರೆಯುತ್ತಮಾ-|
ಗಳೆ ಬಂದನೊ[ರ್ವನಾಸುಸ್ವರೂ]ಪಂ || ೭೬ ||

ಅಂತು ಬರುತಿರ್ಪುದುಮ- |
ನಂತಶೋಭಾಕರಂ |
ಮುಂತೆ ಬೆಳ್ಗೊಡೆಯು ತಣ್ಣೆಳಲಿನಲ್ಲಿ ||
ಸಂತಸತನದಿನಾಗ- |
ಳಂತೆ ಲಕ್ಷ್ಮಣದೇವ- |
ನಿಂತೀಕೆ ಯಾರೆಂದು ಬೆಸಗೊಂಡನು || ೭೭ ||

ನರಪತಿಯ ಕಂಡೀಕೆ ।
ತರುಣಿಯೆಂದಪೆಯೆಂದು |
ಚರರೆಯ್ದೆ ತಮತಮಗೆ ಮುಳಿದು ನುಡಿಯೆ ||
ಹರಿ ವಿಸ್ಮಯದೆ ನೋಡು-
ತಿರೆಯಾಗಳಂತೆ ಚ- |
ಚ್ಚರಮಲ್ಲಿಗೇೞ್ತಂದನಂತಪಾಳಂ || ೭೮ ||

ಕಂಡು ಲಕ್ಷ್ಮೀಧರನ ।
ಗಂಡುವರಿಜಂ ಸೋಲ್ತು |
ಬೆಂಡಾಗಿ ತಾಗೆ ನನೆಗಣೆ ತನ್ನನು ||
ಕಂಡೀತ ಮದಚಂಡ ।
ಶುಂಡಾಳದಿಂದಿಳಿದು |
ಪುಂಡರೀಕೇಕ್ಷಣನನೆಯ್ದೆವಂದು || ೭೯ ||

೧-೧ (ಕಖ) ನೊವ್ವದ್ವರೂಪಂ; (ಗ) ನೋರ್ವಂ ಸ್ವಸ್ವರೂಪಂ. ೨-೨ (ಗ) ಸುತಸಂತನದಿನಾಗ. ೩-೩ (ಗ) ಹರಿಯು. ೪-೪ (ಗ) ತ್ತಿರೆ.

ಬಂದು ಲಕ್ಷ್ಮೀಧರನ- |
ನಂದು ಕಾರಣಪುರುಷ- |
ನೆಂದಱಿದು ಪುರಕೆ ಬರಬೇಹುದೆನಲು ||
[ಇಂದು ನೀವಿರ್ಪುದಿಂ- |
ತೆಂದಗ್ರಜಂಗಿದನು |
ಸಂದಿ] ನಿರುತಂ ಪೋಗಿ ಪೇೞ್ದು ಬರ್ಪೆಂ || ೮೦ ||

ಎನಲಚ್ಯುತಂಗಾತ- |
ನನುನಯದಿನಿಂತೆಂದ- |
ನೆನಿತು ದೂರದೊಳಿರ್ಪರವರಿಲ್ಲಿಗೆ ||
ವಿನುತ .. ವಿಗತನಂ |
ಮುನಿಬರುಂ ಪೋಪವೆಂ- |
ದನುರಾಗದಿಂದಾಗಳೇೞ್ತಂದರು || ೮೧ ||

ಭರದೆ ರಾಘವನುಮಂ |
ತರುಣಿ ಜಾನಕಿಯುಮಂ |
ವರಮುಕುಟಮಣಿಗಣಂಗಳಿನರ್ಚಿಸಿ ||
ಪುರಕೆ ಬಿಜಯಂಗೆಯ್ದು |
ಕರುಣಿಸುವುದೆನಗೆಂದು |
ಕರಯುಗಂಗಳ ಮುಗಿದು ಬಿನ್ನವಿಸಿದಂ || ೮೨ ||

ಕರುಣಿಸುವುದೆನೆ ರಾಮ- |
ನುರುಮುದದೆ ಬರಲೆಂದೊ- |
ಡರಿಸಲೊಡಗೊಂಡಧಿಕ ಶೋಭೆಯಿಂದ ||
ಪುರಮುನರಮನೆಯುಮಂ |
ಭರದಿಂದ ಪುಗಿಸಿ ಚ- |
ಚ್ಚರಮರ್ಘ್ಯಪಾದ್ಯಾದಿಗಳನೆ ಕೊಡಲು || ೮೩ ||

---

೧-೧ ( ಕಖಗ ) ಎಂದನಿಂತೆಂದನಗ್ರಜಂಗೆ ನೀವಿರಿಪ್ಪಿದನಂ.

ಅವರು ಮೂವರು ಮಹೋ- |
ತ್ಸವದೆ ಮಜ್ಜನಭೋಜ- |
ನವ ಮಾಡಿ ಕೈಗಟ್ಟಿಕೊಂಡಿರ್ಪುದುಂ ||
ವಿವಿಧಸಾಮಂತನೃಪ- |
ನಿವಹಮಂ ಪರಿಯಪೇ- |
ಟ್ಟಿವರಿಗಿಂತೆಂದಳಾತನ ಜನನಿಯು || ೮೪ ||

ಅಂತವರ್ಗಾಗಳೇ- |
ಕಾಂತದಿಂದಾಗಳಿರ- |
ದಿಂತೆಂದು ಬಿನ್ನವಿಸಿದಳು ವಿನಯದಿಂ ||
ಇಂತೀಪುರಕ್ಕೆ ಭೂ- |
ಕಾಂತ ವಲ್ಲಭನಾಗಿ |
ಸಂತೋಷದಿಂ ವಾಲಖಿಲ್ಯನಿರ್ಪಂ || ೮೫ ||

ಆತನಂ ರಣದೊಳ್ಕಿ- |
ರಾತನತಿ[ಬಲ]ರೌದ್ರ- |
ಭೂತಿಯೆಂಬಂ ಪಿಡಿದುಕೊಂಡು ಪೋಗಿ ||
ಪಾತಕಂ ವಿಂಧ್ಯದೊಳೆ |
ಮಾತೇನೊ ಸೆಱೆಯಿಟ್ಟು |
ಭೀತಿಗೊಳಿಸುತಮಿರ್ಪನೀದೇಶಮಂ || || ೮೬ ||

ಅಂತಾತ ಪೋಪುದುಂ |
ಸಂತಾನಮಿಲ್ಲೆಂದ- |
ವಂತಿಯೊಡೆಯಂ ಮುಳಿದು ಸಿಂಹೋದರಂ ||
ಇಂತಿಲ್ಲಿಗೆತ್ತಿಬರೆ |
ಸಂತೈಸಿ [ನೃಪನ] ಸಾ- |
ಮಂತರಾತಂಗಿಂತು ನುಡಿದರಂದು || ೮೭ ||

---

೧. ( ಕಖ ) ದು. ೨. ಪಂಪರಾಮಾಯಣದಲ್ಲಿ ಇವಳ ಹೆಸರು "ಪೃಥ್ವೀಮತಿ ಮಹಾದೇವಿ" ಎಂದಿದೆ. ಆ ೭-೧೦೬ ವ. ೩ ( ಕಖ ) ಲ್ಲ. ( ಗ ) ನೊಳ್.

ಜನನಾಥ, ವಾಲಖಿ- |
ಲ್ಯನ [೧]ಸತಿಗೆ[೧] ಗರ್ಭಿಣಿಗೆ |
ತನಯುನಾದಂದು ಪಟ್ಟಕ್ಕೆ ಯೋಗ್ಯಂ ||
ಅನಿತು ಕಾಲುಂ ಪೋಪು- |
[೨]ದನುಚಿತ ನಮುಗೆ ದೇವ[೨] |
ಯೆನೆ ನಿಂದನಾತನಿಲ್ಲಿಗೆ ಬರ್ಪುದಂ[೩] || ೮೮ ||

ಎನಗೆ ಗರ್ಭದೊಳಿಲ್ಲಿ |
ವನಿತೆಯುದ್ಭವಿಪುದುಂ |
ತನಯುನೆಂದೆಮ್ಮ ಮಂತ್ರಿಗಳೆಲ್ಲರುಂ ||
ಅನುನಯದೆ[೪] ಕೊಂಡಾಡಿ |
ಘನಶಸ್ತ್ರ-ಶಾಸ್ತ್ರಮಂ |
ಜನಜನಿತಮಾಗಿ ಕಲಿಸಿದರೆಲ್ಲಮಂ || ೮೯ ||

ಲೀಲೆಯಿಂ ಕಲ್ಯಾಣ- |
ಮಾಲೆಯೆಂಬೀ ಪೆಸರ- |
[೫]ನಾಲತಾಂಗಿಗೆ[೫] ಕೊಟ್ಟು [[೬]ತಾವ[೬]]ನಿಬರುಂ ||
ಬಾಲಕಾಲಂ ತೊಡಗಿ |
ಯೋಲಗಿಸುತೆಲ್ಲರುಂ |
ಪಾಲಿಸುತ್ತಿರೆ ಗಂಡುವೇಷದಿಂದ || ೯೦ ||

ಬಂದೊರ್ವ ಮುನಿಪರಾ- |
ನಂದದಿಂ ಪೇಳ್ದರಾ- |
ರಿಂದ ಬಿಡುಗುಂ ವಾಲಖಿಲ್ಯನೆನಲು ||
ಸಂದೇಹವಿಲ್ಲದೀ[೭]- |
[೮]ನಂದನದೊಳೀಕೆ[೮] ಪೆ- |
ಣ್ಣೊಂದರಿಂದಂ[೯] [೧೦]ಬಿಟ್ಟು ಬರ್ಕುವಮಾತಂ[೧೦] || ೯೧ ||

---

೧-೧ (ಕಖ) ಸತಿ. ೨-೨ (ಗ) ದನುಚಿತಂ ನಮುಗಿಗೆ ದೇವ. ೩ (ಕಖ) ದುಂ. ೪ (ಗ) ದಿ. ೫-೫ (ಗ) ನಾಲತಾಂಗಿ. ೬-೬ (ಕಖಗ) ತಮ್ಮ. ೭ (ಕಖ) ದೆ. ೮-೮ (ಕಖ) ನಂದನದೊಳಿಕ್ಕೆ ಪೆ-|. ೯ (ಗ) ದ. ೧೦-೧೦ (ಗ) ಮುಕ್ಕುಮಾರುಂ.

ಪುರದ ನಂದನದೆಸೆವ ।
ಸರಸಿರುಹಷಂಡದೊಳು ।
ಪುರುಷಾಕೃತಿಯೊಳಿರ್ದೊಡಂ ಬಗೆಯದೆ ॥
ತರುಣಿಯೆಂದಾತನೇ ।
ಪುರುಷನೀಕೆಗೆಯುಕ್ಕು ।
[೧]ಪುರಕಾತ[೨]ನಿಂ ಬಕ್ಕು ವಾಲಖಿಲ್ಯಂ ॥ ೯೨ ॥

ಆಕುಬುಹು ಕೂಡಿಂತ-।
ನೇಕಪವನೇಜುಕೊಂ- ।
ಡಾಕಮಲಷಂಡಕ್ಕೆ ಭೂಪಾಲರ ॥
ಆಕಾರದಿಂ [೩]ಬರ[ಲು][೩]।
ಯೀಕುಮಾರಂ ಕಂಡು ।
ಯೀಕೆಯಾರೆಂದಿಂದು ಬೆಸಗೊಂಡನು ॥ ೯೩ ॥

ಪುರುಷಾಕೃತಿಯನುಳಿದು ।
ಬರಹೇಳಲೊಡನೆ ಸುರು- ।
ಚಿರಮೂರ್ತಿ ಮುದದಿ ಕಲ್ಯಾಣಮಾಲೆ ॥
ಸ್ಮರನ ಪಾರ್ಶ್ವಕ್ಕೆ ರತಿ ।
ಭರದಿಂದ ಬಪ್ಪ ವೊಲು ।
ಸರಸಿಜಾಕ್ಷನ ಕೆಲಕೆ ಬಂದಿರ್ದಳು ॥ ೯೪ ॥

ಮುಗ್ಧಮನಸಿಜಶರ- ।
ಸ್ನಿಗ್ಧನಿಜನಯನದಿಂ ।
ಮುಗ್ಧೆ ಲಕ್ಷ್ಮೀಧರನನೀಕ್ಷಿಸುತಿರೆ ॥
ದುಗ್ಧಾಬ್ಧಿಫೇನೌಘ- ।
ಧಿಗ್ಧಕೃಷ್ಣನೊಳು ಸಂ- ।
ದಿಗ್ಧನಾದಂ ಕೃಷ್ಣನಾ ಕ್ಷಣದೊಳು ॥ ೯೫ ॥

---

೧. (ಗ) ಪ. ೨. (ಗ) ನೀಂ. ೩-೩ (ಕಖ) ಬರೆ; (ಗ) ಬರ.

ನಡೆ ರಾಜಹಂಸೆಯುಂ ।
ನುಡಿ ಮತ್ತಕೋಕಿಲಮು- ।
[1]ನಡಿದಳಿರಶೋಕೆ[[2]ಯಾ[2]]ಕೆಂದಳಿರ್[*]ಗಳಂ[3] ॥
ನಡು ಕುಸುಮಸಾಯಕನ[4] ।
ಪಿಡಿವಿಕ್ಷುಚಾಪಮಂ ।
ಗೆಡೆಗೊಳಲು ಕಲ್ಯಾಣಮಾಲೆಯಿರಲು ॥ ೯೬ ॥

ಸ್ಮರನ ಕೆಲದಲ್ಲಿ ರತಿ ।
ಹರಿಯ ಕೆಲದಲ್ಲಿ ರಮೆ ।
ಸುರಪತಿಯ ಕೆಲದಲ್ಲಿ ಶಚಿಯಿರ್ಪ[[5]ವೋಲ್[5]]
ಸರಸಿಜಾಕ್ಷನ ಕೆಲದೊ- ।
ಳಿರೆ ತರುಣಿ ಧರಣಿಗ- ।
ಚ್ಚರಿಯೆನಿಪ ಲಾವಣ್ಯಪುಣ್ಯಮೂರ್ತಿ ॥ ೯೭ ॥

ಅಂತು ಲಕ್ಷ್ಮೀಧರನು- ।
ಪಾಂತದೊಳ್ಕನ್ನೆಯಿರೆ ।
ಸಂತೋಷದಿಂ ರಾಮಚಂದ್ರನೊಲವಿಂ ॥
ಇಂತೀಕುಮಾರಿಯುಂ ।
ಭ್ರಾಂತೇನೊ ಮದುವೆನಿ- ।
ಲ್ಲಂತಾತನಂ ಬಿಡಿಸು ನೀನೆಂದನು ॥ ೯೮ ॥

ಎನಲೊಡಂ [[6]ತನ್ನೊಳಗೆ[6]] ।
ಮನದಿ[7]ಷ್ಟವಾಯ್ತೆಂದ- ।
ನುನಯದಿ[ಂ] ವಿನಯದಿಂ ಬಿನ್ನವಿಸಿದಂ ॥
ವನಿತೆ[[8]ಯಿಲ್ಲಿರ್ಕೆ[8]]ಮು- ।
ನ್ನಿನ ತೆ[9]ಱದಿನೀಸತಿಯ ।
ಜನಕನಂ ಮುಂಕೊಂಡು ಬರ್ಪೆನೆಂದಂ[10] ॥ ೯೯ ॥

೧-೧ (ಗ) ನು. ೨-೨ (ಕಖಗ) ಯೆಸೆವ. ೩ (ಗ) ೞಂ. ೪ (ಗ) ನ. ೫-೫ (ಕಖಗ) ಳು. ೬-೬ (ಕಖಗ) ತನ್ನ. ೭ (ಗ) ಗಿ. ೮-೮ (ಕಖಗ) ಯೆಲ್ಲಿಕ್ಕೆ. ೯ (ಕಖ) ಪ. ೧೦ (ಕಖ) ದು.

ಎಂದು ರಾಘವನನಾ- ।
ನಂದದಿಂ ಬೀಳ್ಕೊಂಡು ।
ಮಂದರಧರಂ ಬಿಲ್ಲುಮಂಬುಸಹಿತಂ ॥
ಕಂದರ್ಪನಂದದಿಂ- ।
ದಂದು[೧] ಪೊಱಮಟ್ಟು ನಡೆ- ।
ತಂದನೊರ್ವನೆ ಮಹಾಗಹನದೊಳಗೆ ॥ ೧೦೦ ॥

ಗುಣಿ ಮೇಖಳಾತರಂ ।
ಗಿಣಿಯನುತ್ತರಿಸಿ ಯೆಡೆ- ।
ಯ[೨]ಣ[೨] [[೩]ನಾಡುಬೀಡುಗಳನಂದು[೩]] [೪]ಕಳಿದು
ಗಣ[೫]ನಾತಿವರ್ತಿ[೫] ಮೃಗ- ।
ಗಣದಿ[ಂದ] ಶಬರಸಂ- ।
ದಣಿಯಿಂದಗುರ್ವಿಸುವ ಪೆರ್ವಟುವನು ॥ ೧೦೧ ॥

ಪುಗುತಿರಲು ಲಕ್ಷ್ಮಣಂ ।
ಬಗೆಯದಾಗಹನಮಂ ।
ನಗನಗಂ ಬಿಡುತಿರ್ದ ಶಬರಸೇನೆ ।
ಪುಗಲಮ್ಮವೀಯೆಡೆಗೆ ।
ಗಗನಮಣಿಯಂಶುಗಳ್ ।
ಪುಗುತಿರ್ದನೊರ್ವನಾರೀತನೆನುತಂ ॥ ೧೦೨ ॥

ಗೊಲೆಗೊತ್ತಿ ಬಿಲ್ಲನಾ- ।
ರ್ದುಲಿದು ತಮತಮಗೆಸುತ ।
ಕಲಹಲಂಪಟರೆಯ್ದಿ ಮುತ್ತಿ ಮುಸುಱೆ ॥
ಹಲವು ಕರಿಘಟೆ ಮುಳಿದು ।
ಮಲೆವ ಪೊಲ್ಸಿಂಹಕ್ಕೆ ।
ಕ[೬]ಲಿಗಳೆಯ್ತಂದು ಕಾದುತ್ತಮಿರಲು ॥ ೧೦೩ ॥

೧ (ಗ) ಡ. ೨-೨ (ಗ) ಯು. ೩-೩ (ಕಖಗ) ನಾಡುಗಳಬೀಡುಗಳ. ೪. (ಗ) ಳಿ. ೫-೫ (ಗ) ನಾತೀತವರ್ತಿ. ೬ (ಕಖ) ರಿ.

ಬಿಲ್ಲನೇಱಿಸಲವ- |
ಗೊಲ್ಲದರವಿಂದಾಕ್ಷ- |
ನೆಲ್ಲರಂ ಮುಷ್ಟಿಮುಷ್ಟಿಯೊಳೆ ತಿವಿದು ||
ಕಲ್ಲೊಳಪ್ಪಳಿಸುತಂ |
ಬಿಲ್ಲಸೇನೆಯನೆಯ್ದು |
[1]ನಿಲ್ಲದಂತಕನ ಮುಖದೊ[2]ಳ್ತವಿಸಿದಂ[2] ||೧೦೪||

ತಳದಿಂದ ಹೊಯಿಹೊಯ್ದು |
ಶಿಲೆಯೊಳಪ್ಪಳಿಸುತಂ |
ತಲೆಗಳಂ ಗಜದಂತೆ [3]ಸಿಂದೊದೆ[ಯು]ತಂ[3] ||
ಪ್ರಳಯಕಾಲಾಂತಕನ |
ಮುಳಿಸಿಂದ ಲಕ್ಷ್ಮಣಂ |
ತ[4]ಳೆದೋಡಿಸಿದನಾತ ವೈರಿಬಲಮಂ ||೧೦೫||

ಭೀತಿಯಿಂದೋಡಿದ ಕಿ- |
ರಾತಸೈನ್ಯಂ ರೌದ್ರ- |
ಭೂತಿಗಱಿಪಲು ಕ್ರೋಧದಿಂದಾತನು ||
ಆತುರದೆ ಪೊಱಮಟ್ಟು |
ಚಾತುರಂಗಂ ಸಹಿತ |
ಜಾತಕೌತುಕನಾಗ ನಡೆತಂದನು ||೧೦೬||

ಬಂದು ಕೈವೀಸಲು ಪು-
ಳಿಂದಬಲಮೆಯ್ದೆ ಗೋ- |
ವಿಂದನಂ ಮೂದಲಿಸುತಂ ಹಳಚಲು ||
ನಿಂದ ಕರಿಹಯ[5]ಭಟ- |
ಸ್ಯಂದನಂಗಳನೆಯ್ದೆ |
ಕೊಂದನಂದೊಂದೆ ಮೆಯ್ಯೊಳೆ ಲಕ್ಷ್ಮಣಂ ||೧೦೭||

---

೧. (ಗ) ಡ. ೨-೨ (ಗ) ಳ್ತವಿಸಿದಂ ಸುತಂ. ೩-೩ (ಕಖ) ಸಿಂದೊದವುತಂ; (ಗ) ಸಿಂದೊದಱುತಂ. ೪. (ಗ) ಳಿ. ೫. (ಕಖ) ರಿ.

ಹಲವು [೧]ಮೊನೆಯಿಂ[೧] ಬಂದು ।
ಸಲೆ ಮೂದಲಿಸಿ[[೨]ಯೆ ನಿಲು ।
ನಿಲುಯೆಂದು[೨]] ಕಾ[೩]ದಿದತಿ[೩]ಬಳರನೆಯ್ದ ॥
ಹೊಲಸೇಳೆ ಕೊಂ[೪]ದನೆಂ- ।
ದು[೫]ಲಿಯೆ ಲುಬ್ಧಕಸೇನೆ ।
ಮುಳಿಸಿಂದ ಬರುತಿರಲು ರೌದ್ರಭೂತಿ ॥ ೧೦೮ ॥

ಕಂಡು [೬]ಲಕ್ಷ್ಮೀಧ[ರಂ[೬]] ।
ಚಂಡಕೋದಂಡ[೭][ಮಂ[೭]] ।
ಕೊಂಡು [೮]ಗೊಲೆಗೊತ್ತಿ[೮]ಜೇವೊಡೆಯಲೊಡನೆ ॥
ಗಂಡುಗಿಡೆ ನಿಜಬಲಂ ।
ಬೆಂಡಾಗಿ ಶಬರಪತಿ ।
ಪುಂಡರೀಕಾಕ್ಷಂಗೆ ಬಂದೆಱಗಿದಂ ॥ ೧೦೯ ॥

ಕಾರಣಪುರುಷನೆಂದು ।
ವಾರಿಜಾಕ್ಷಂಗೆ ಬಂ- ।
ದಾರೌದ್ರಭೂತಿ ವಿನಮಿತನಪ್ಪುದುಂ ॥
ಭೀರುವಾಗದಿರೆಂದು ।
ಧೀರನಭಯವನಿತ್ತು- ।
ದಾರನಿಧಿ ವಾಲಖಿಲ್ಯನ ಬಿಡಿಸಿದಂ ॥ ೧೧೦ ॥

ಆವಾಲಖಿಲ್ಯರಾ- ।
ಜೀವಾಕ್ಷಶಬರನೀ- ।
ಮೂವರುಂ ಕುವರನಗರಕ್ಕೆ ಮುದದಿಂ ॥
ಆವರಿಸೆ ಪಟುಪಟಹ- ।
[೯]ರಾವಂ ದಿ[೯]ಶಾಮುಖವ[೧೦]- ।
ನಾವೃತಾನೇಕಬಲರೆಯ್ತಂದರು ॥ ೧೧೧ ॥

---

೧-೧ (ಕಖ) ಮೊನೆಯೊಳೆಯಿಂ. ೨-೨ (ಕಖಗ) ನಿಲ್ಲೆಂದು. ೩-೩ (ಕಖ) ಕಾದಿ. ೪ (ಗ) ಡ. ೫ (ಗ) ಯ. ೬-೬ (ಕಖಗ) ಲಕ್ಷ್ಮೀಧರನ. ೭-೭ (ಕಖಗ) ದಿಂ ಮುಂ. ೮-೮ (ಕಖ) ಕೊಲೆಗೆತ್ತಿ. ೯-೯ (ಗ) ದಾವದಿಂ ಶಾ. ೧೦ (ಗ) ಮು.

ವಿನಯವಿನಮಿತರಾಗಿ |
ಘನದಯಾನಿಧಿ ರಾಮ- |
ನನುಪಮಪದಾರವಿಂದದ್ವಿತಯಮಂ ||
ಕನಕಮಣಿಮಕುಟರುಚಿ |
ಜನಿತಬಾಲಾತಪದಿ- |
ನನುನಯದೆ ಮೂವರುಂ ಪೂಜಿಸಿದರು || ೧೧೨ ||

ಅನುಜನ ಪರಾಕ್ರಮವ- |
ನನುನಯದೆ ರಾಘವಂ |
ಮನದಿಂದೆ[೧] ಮೆಚ್ಚಿ ತಟ್ಕೈಸಿಕೊಂಡು ||
ವನಜಾಕ್ಷನಾಗಳಾ- |
ವಿನಯವಿನಮಿತರಾದ |
ಜನಪ ವನಚರರನೇೞಲ್ಪೇೞಲು || ೧೧೩ ||

ಧಾರಿಣಿವಿನೊ[೨]ತಬಲ- |
ನಾರಾಯಣರ್ಕಳಿವ- |
ರಾರುೞ್[೩]ದರಿಂತು [೪]ಬಿಡಿಸುವ[೪]ರೆನುತ್ತಂ ||
ಆರೈದು ಮನದೊಳ್ಚಿ- |
ಚಾರಿಸಿಯುೞ್ದು ವಿನಯ- |
[೫]ದಾರರಿ[೫]ರೆ ಸಮುಚಿತಸ್ಥಾನಕದೊಳು || ೧೧೪ ||

ಪಲಕಾಲ ಸೆಱೆಯೊಳ್- |
ದರ್ಗಲಘುತರಪಾಪಮಂ |
ಕಳೆಯಲೊಳಪೊಕ್ಕು ಗಂಗಾಯಮುನೆಯ ||
ಜಲದೊಳಿರ್ದಂದದಿಂ |
ಬಲಕೇಶವರ ದೇಹ- |
ಲಲಿತರುಚಿಯೊಳ್ವಾಲಖಿಲ್ಯನಿರ್ದಂ || ೧೧೫ ||

---

೧ (ಕಖ) ದ. ೨ (ಕಖ) ನು. ೩ (ಕಖ) ವ. ೪-೪ (ಗ) ಬಿಡುವರೆ. ೫-೫ (ಗ) ದಾರರಿಗೆ.

ಬೆಸಕೆಯಿಸಿ[೧]ಕೊಂಬು[ದಾ[೨]- |
ಳ್ವಿಸಕಾನೆ[೨]] ದಕ್ಷನೀ- |
ಕ್ಷಿಸುವುದೆನ್ನಂ ಕರುಣದೃಷ್ಟಿಯಿಂದ ||
ದೆಸೆದೆಸೆಗೆ ನಿಮ್ಮ ಜಸ |
ಪಸರಿಸಿತ್ತೆಂದು ನಯ- |
ವೆಸೆಯೆ ರಾಮಂಗೆ ಶಬರೇಂದ್ರನೆನಲು || ೧೧೬ ||

ವಾಲಖಿಲ್ಯನೊಳು ನೀಂ |
ಪಾಲಿಪುದು ವಿನಯಮಂ |
ಲೀಲೆಯಿಂ ಭರತಂಗೆ ಬೆಸಕೆಯ್ದುದ[೩] ||
ಪಾಲಿಪುದು ವಿನಯಮಂ |
ಬಾಳತೆಯನುಟಿವುದಿದ- |
ನೇಳಿಸದಿರೆಂದು ಸೌಮಿತ್ರಿ ನುಡಿದಂ || ೧೧೭ ||

ಅವರಿರ್ವರಿಗೆ ಸುಬಾಂ- |
ಧವತೆಯಂ ಮಾಡಿ ಕೇ- |
ಶವನಾತನಂ ಬೀಳ್ಕೊಡಿಸಿ [[೪]ಕಳುಪಲು][೪] ||
[೫]ಸವಿನಯವಿನಮಿತನಾ-[೫] |
ಭುವನಭೂಷಣಶಬರ- |
ರವನತಿ ಮುದದೆ ತನ್ನ ಪುರಕೆ ಪೋದಂ || ೧೧೮ ||

ಪ್ರಾಣೋಪಕಾರದಿಂ |
ಪ್ರೀಣಿಸಿದಿರೆನ್ನನ- |
ಕ್ಷೂಣಸತ್ತ್ವಕ್ಕೆ[೬] ಪಾಲಿ[೭]ಸಿದಿರಿಳೆಯಂ ||
ಕ್ಷೋಣೀಭರಣಸಹಧು- |
ರೀಣರ್ಗೆ ಲೋಕಸಂ- |
ತ್ರಾಣನಗುಣಂ ನಿಮಗೆ ಸಹಜಮಲ್ತೆ || ೧೧೯ ||

---

೧ (ಕಖ) ಪೆ. ೨-೨ (ಕಖ) ದಾಳಿಸಕಾನೆ. (ಗ) ದಾಗಳ್ವಿಸಕಾನೆ. ೩ (ಗ) ದಾ. ೪-೪ (ಕಖಗ) ಕಳುಪಿ. ೫-೫ (ಗ) ಸವಿನಮಿತನಾ. ೬ (ಗ) ರಿ. ೭ (ಗ) ದ.

ಅನಿಮಿತ್ತವೆನ್ನೊಳಿಂ- |
ತಿನಿತು [ಕಾರುಣ್ಯರಸ] |
ಜನಿಯಿಸಿತ್ತಿದನೆನಗೆ ಬೆಸಸಿಮೆನಲು ||
ಮನೆಗೆ ಪೋಗಿಯೆ ನಿನ್ನ |
ವನಿತೆಯೊಳೆ ಕೇಳಿಂತು |
ಜನನುತಂ ಬೀಳ್ಕೊಡಲು ವಾಲಖಿಲ್ಯಂ || ೧೨೦ ||

ಆಗ ಬೀಳ್ಕೊಂಡಧಿಕ |
ರಾಗದಿಂ ನಿಜಗೃಹಕೆ |
ಪೋಗಿ ಮಜ್ಜನಭೋಜನಾದಿಗಳನು ||
ಬೇಗದಿಂದುಂಡು ಮ- |
ತ್ತಾಗಳೆಲ್ಲವನಱಿದು |
ಭೂಗಧೀಶ್ವರಸಮೀಪಕ್ಕೆ ಬಂದಂ || ೧೨೧ ||

ಲೀಲೆಯಿಂ ಕಲ್ಯಾಣ- |
ಮಾಲೆಯಂ ಸೌಭಾಗ್ಯ- |
ಶಾಲೆಯಂ ಲಕ್ಷ್ಮೀಧರಂಗೆ ಕೊಟ್ಟು ||
ಮೂಲೋಕಮಂ ಕೀರ್ತಿ-
ಮಾಲೆ ಪರಿವೇಷ್ಟಿಸೆ ವಿ- |
ಶಾಲವಿಭವದೆ ವಾಲಖಿಲ್ಯನಿರ್ದಂ || ೧೨೨ ||

ಕೆಲವು ದಿನವಾಪುರದೊ - |
ಳಲಘುಬಲರಿರ್ದು ಮೆ- |
ಯ್ಗಲಿಗಳಲ್ಲಿಂ ತಳರ್ದು* ಮುನ್ನಿನಂತೆ |
ಬೆಳಗಪ್ಪ ಜಾವದೊಳು |
ಲಲಿತಜಾನಕಿಸಹಿತ |
ಪೊಳಲ ಪೊಱಮಟ್ಟರಂತಾ ಮೂವರು || ೧೨೩ ||

---

೧-೧ (ಕಖ) ಕಾರುಣ್ಯ. (ಗ) ಕಾರಸ. ೨-೨ (ಕಖ) ಜನಿಸಿ. ೩ (ಗ) ವ. ೪ (ಕಖ) ಕೆ. ೫ (ಕಖ) ವಿ. ೬ (ಕಖ) ರು.

ದಕ್ಷಿಣದಿಶಾಭಿಮುಖ- |
ರಕ್ಷೂಣ[ಲಕ್ಷಣರು |
ಯೀಕ್ಷಿ]ಸುತ್ತಂ ಭಯಂಕರವೆನಿಸಿದ ||
ಋಕ್ಷಚಕ್ಷುಃಶ್ರವತ- |
ರಕ್ಷುಹರಿಯಕ್ಷಪರಿ- |
ರಕ್ಷಿತ ಮಹಾವಿಂಧ್ಯಗಿರಿಗೆ ಬರಲು || ೧೨೪ ||

ಕರಿಗಳಿಂ ಹರಿಗಳಿಂ |
ಶರಭಂಗಳಿಂ ವಿನಿ- |
ಷ್ಕುರಚಂಡಭೇರುಂಡಮಂಡಳಿಗಳಿಂ ||
ದುರುಚಮೂರವರಾಹ |
ಹರಿಣೀಕುಳಂಗಳಿಂ |
ಭರಿತಮಾಗಿರ್ದುದಾವಿಂಧ್ಯಶೈಲಂ || ೧೨೫ ||

ರಸೆಯುಮಂ ದೆಸೆಯುಮಾ- |
ಗಸಮುಮಂ ಮುಸುಕಿಯ- |
ರ್ವಿಸಿ ಕಱಂಗಿ[ದ] ರಾತ್ರಿಯೊಡ್ಡಿನಂತೆ ||
ಬಿಸಿಲಿಗೆಡೆಗುಡದೆ ರಂ- |
ಜಿಸುವಂತೆ ಭೈರವನ |
ಮುಸಕದಿಂದಿರ್ದುದಾ ವಿಂಧ್ಯಾಚಲಂ || ೧೨೬ ||

ಕುಲನಗಂಗಳನೆಯ್ದೆ |
ಗೆಲಿದುದುನ್ನತಿಯಿನೆನೆ |
ಚೆಳಗಿರ್ದ ವಿಂಧ್ಯಾಚಲೇಂದ್ರದಲ್ಲಿ ||
ಬಲಕೃಷ್ಣಜನಕಸುತೆ |
ತಳೆದು ಸಂತೋಷಮಂ |
ಬಲಯುತರ್ಮೆಲ್ಲಮೆಲ್ಲನೆ ಬಂದರು || ೧೨೭ ||

---

೧-೧ (ಕಖ) ಲಕ್ಷಣ | ವೀರ್ಕ್ಷಿ; (ಗ) ಲಕ್ಷ್ಮಣಂ | ವೀಕ್ಷಿ. ೨-೨ (ಗ) ವಿನಿಷ್ಠುಚಂಡರ ಭೇರುಂಡ. ೩-೩ (ಗ) ರಾತ್ರಿಯೊಡೆನಂತೆ. ೪-೪ (ಗ) ಗೊಡದೆ.

ಮದರದನಿ[೧]ಗಮನೆ ಮೃಗ- |
ಮದತಿಲಕೆ ನೀಲನೀ- |
ರದಚಾರುಕುಂತಳೆ [೨]ಮಳಯಜಗಂಧಿ[೨] ||
ಮದಪಿಕಸ್ವನೆ ಕಮಳ- |
ವದನೆ ಕೈರವನಯನೆ |
ಸುದತಿ ಜಾನಕಿ ವಿಂಧ್ಯದಂತೆ ನಡೆ[೩]ಯೆ || ೧೨೮ ||

ಉಗ್ರಾಂಶುವಂಶರ- |
ವ್ಯಗ್ರರೀಮೂವರು ಮು-
ದಗ್ರೆಯಂ ವಿಂಧ್ಯಮಂ, ದಾಂಟಿ [೪]ಬಂದು[೪] ||
[ [೫]ಅಗ್ರಜನಯೋಗದ[೫] ] ಸ- |
ಮಗ್ರಮುದರುಣಿಯೆಂಬು- |
ವಗ್ರಹಾರಮನೆಯ್ದಿ ಲೀಲೆಯಿಂದ || ೧೨೯ ||

ಬಂದೊರ್ವ ಭೂಸುರನ |
ಮಂದಿರದ [೬]ಜಗಲಿ[೬]ಯೊಳು |
ಕುಂದಬಂಧುರಕೀರ್ತಿಗಳು ನಿಂದಿರೆ ||
[೭]ತಂದೇಜಲಿ[ಕ್ಕಿ][೭] ಮುದ- |
ದಿಂದ ಕುಳ್ಳಿರಿಸಿಯೆ- |
ಲ್ಲಿಂದ ಬಂದಿರಿಯೆಂದು ಬ್ರಾಹ್ಮಣಿಯರು || ೧೩೦ ||

ಬೆಸಗೊಳುತ ಜಾನಕಿಯ |
ಯೆಸೆವ ಲಾವಣ್ಯಮಂ |
[೮]ಮಸಗಿ[೮] ತಮತಮಗೆ ನೋಡು[[೯]ತ್ತಿ]ರ್ದನಂ ||
ಹಸಿದು ಮಟ್ಟೆಯಸಿಟ್ಟು |
[೧೦]ಕುಶೆಯ [೧೦]ಕಯ್ಯಲಿ ಪಿಡಿದು |
ಹಸಿಯ ಘೋತ್ರವ ಪೆಗಲೊಳಿಕ್ಕಿಕೊಂಡು || ೧೩೧ ||

---

೧ (ಖ) ನಿ. ೨-೨ (ಖ) ಮಳೆಯಜಗಂಧಿನಿ; (ಗ) ಯಜಗಂಧಿನಿ. ೩ (ಗ) ಡಿ. ೪-೪ (ಗ) ಬರಲು. ೫-೫ (ಕಖಗ) ಅಗ್ರಜನ್ಯೋಗದೆ. ೬-೬ (ಗ) ಜಗುಳಿ. ೭-೭ (ಕಖ) ತಂದೇಜ್ಜಲಿಕ್ಕೆ; (ಗ) ತಂದೆಜ್ಜಲಿಯುಕ್ಕೆ. ೮-೮ (ಗ) ಮುಸುಗಿ. ೯ (ಕಖಗ) ಲೆ. ೧೦-೧೦ (ಗ) ಕುಸೆಯ ಕೈ. "ಕುಶವ" ಎಂದಿದ್ದರೆ ಶುದ್ಧ.

ಜಪಿಸುತಂ ಸಾಮಮುಮಂ |
ಕಪಿಳನೆಂಬಂ ಕರಂ |
ಚಪಳರ[1]ಂತಾಮುನೆಯ ಯಜಮಾನನು ||
ಕುಪಿತನಾಗಿಯೆ ಬಂದು |
ವಿಪರೀತ ವಚನಮಂ |
[2][ಆಪಲಪಿಸೆ][2] ಲಕ್ಷ್ಮೀಧರಂ ಕೋಪಿಸೆ || ೧೩೨ ||

[3][ದ್ವಿಜನವಧ್ಯಂ][3] ಬೇಡ |
[4][ಗಜರದಿರಿವನನೆಂದು][4] |
[5]ಸುಜನನುತ[5]ರಲ್ಲಿಂ[6] ತಳರ್ದು ಬಂದು ||
ವಿಜುಗೀಷುಗಳ್ಜಗ- |
ದ್ವಿಜಯರುತ್ತರಿಸಿದ- |
ನಿಜ ನಿರ್ಮಲಯಶಸ್ತರಂಗಿಣಿಯುನು || ೧೩೩ ||

ಲುಳಿತ ಪುಳಿನಸ್ಥಳದೊ- |
ಳೆಳೆದಳಿರ್*ಗಳಿಂದೆಸೆದು |
ಬೆಳೆದು ನಳನಳಿಸು[7][ವಾಲದ ಮರಕ್ಕೆ][7] ||
ಲಲನೆ ಜನಕಾತ್ಮಜೆಯ |
ಬಳಲಿಕೆಯನಾಱಿಸ[ಲು][8] |
ಬಲವಾಸುದೇವರೇಟ್ರಿಂದರೊಲವಿಂ || ೧೩೪ ||

ಬಲಗೊಂಡು ಮುಂದೋಱ[9]- |
[10][ದೊಳಿದಲ್ಲಿ][10] ನೆಲಸಿರ್ದ |
[11]ಕರಿಕರ್ಣ[11]ದೇವ [12][ಬರುವವರ][12] ಕಂಡು ||

೧ (ಗ) ಕ. ೨-೨ (ಕಖಗ) ಪ್ರಕಟಿಸಲು. ಇದರಿಂದ ಛಂದೋಭಂಗವಾಗುತ್ತಿದೆ. ೩-೩ (ಕಖಗ) ದ್ವಿಜನವಂದ್ಯಂ. "ಅವಧ್ಯ" ವೆಂದು ಪಂಪರಾಮಾಯಣದಲ್ಲಿದೆ. ೭-೧೨೬. ೪-೪ (ಕಖ) ಗರದಿರಿವನಿವನೆಂದು; (ಗ) ಗಡದಿರಿವನಿವನೆಂದು. ೫-೫ (ಗ) ಜನುತ. ೬ (ಗ) ಲ್ಲಿಂ. ೭-೭ (ಕಖಗ) ಲೆರ್ದಾಲದಮರದ. ೮ (ಕಖಗ) ಲೆಂದು. ೯ (ಗ) ಱಿ. ೧೦-೧೦ (ಕಖಗ) ದಲ್ಲಯೇ. ೧೧-೧೧ 'ಇಭಕರ್ಣ' ಎಂದು ಪಂಪರಾಮಾಯಣದಲ್ಲಿದೆ. ೧೨-೧೨ (ಕಖಗ) ಬಾಹವರ.

ಪರಿದೆಯ್ದಿ ವಿಂಧ್ಯಭೂ- |
ಧರದ ಯಕ್ಷಂಗೆ ಚ- |
ಚ್ಚರದೆ ಕ್ರೀಡಾಪೂತನೆಂಬಾತಗೆ || ೧೩೫ ||

ಭರದಿಂದಮಱಿಪೆ ಚ- |
ಚ್ಚರಮಾತನವಧಿಯಿಂ |
ವರ ಬಲಾಚ್ಯುತರೆಂದದಱಿದು ಬಂದು |
ಪಿರಿದು ಸತ್ಕಾರಮಂ |
ವಿರಚಿಸಲ್ವೇಳ್ಕೆಂದು |
ಪುರಮೊಂದನಾಗಳೆ ವಿಗುರ್ವಿಸಿದನು || || ೧೩೬ ||

ಸುರಪುರಕ್ಕಂ ಯಕ್ಷ- |
ಪುರಕಮತಿಶಯವೆನಿಪ |
ಪುರವೊಂದನಾಗಳಂತೆ ವಿಗುರ್ವಿಸಿ ||
ಭರದಿನೇೞ್ತಂದು ಬಲ- |
ಹರಿಗಳಂ ಪೂಜಿಸಿ ಸು- |
ಚರಿತರಂ ಮುದದಿನೊಡಗೊಂಡು ಪೋದಂ || ೧೩೭ ||

ಪೋಗಿಯರಮನೆಯನನು- |
ರಾಗದಿಂ ಪುಗಿಸಿಯ- |
ಭ್ಯಾಗತಿಗಳನೆ ಮೆಱೆದು ವಿನಯದಿಂದ ||
ಏಗೆಯ್ದು ದೇವವ- |
ರ್ಷಾಗಮಂ ಪೋಪಿನಂ |
ಪೋಗಲಾಗೆಂದವರ ಬೇಡಿಕೊಂಡು || ೧೩೮ ||

ಅಲ್ಲಿ ಮುದದಿಂ ಯಕ್ಷ- |
ವಲ್ಲಭಂ ಬೆಸಕೆಯ್ಯೆ |
ಸಲ್ಲಲಿತ ಗುಣರಿರೆ ಕರಂ ಹರುಷದಿಂ ||
ವೊಲ್ಲೆಮುಗುಳೊತ್ತೆ ಕಂ- |
ಕೆಲ್ಲಿ ರಾಗವನುೞಿಯೆ |
ವುಲ್ಲಾಸಮಾಯ್ತು ವರ್ಷಾಸಮಯಕೆ || ೧೩೯ ||

---

೧-೧ (ಕಖ) ವಿಂದ. ೨ ಪಂಪರಾಮಾಯಣದಲ್ಲಿ "ವಿಗುರ್ವಿಸಿ" ಎಂದಿದೆ. ೬-೧೩೦ ವ.
೩ ಈ ಪದ್ಯವು (ಕಖ) ಪ್ರತಿಗಳಲ್ಲಿಲ್ಲ.

ಉಲಿಯೆ ಚಾದಗೆಗಳುಂ ।
ಮುಳಿಸೆ ಹಂಸಗಳು ಬೆಳು- ।
ಸುಟಿವುಟ್ಟೆಗಟ್ಟೆ ಕೇತಕಿಗಳಲ್ಲಿ ॥
ನಲಿದು ನರ್ತಿಸೆ ಕೇಕಿ ।
ಕುಳವಲರೆ ಕಡವು [೧ ತಂ- ।
ಪಲಿದು ]೧ ತೀಡಿತ್ತು ಪಶ್ಚಿಮುಮಾರುತಂ ॥ ॥ ೧೪೦ ॥

ನೀಪದೊಳ್ ಲೋಧ್ರದೊಳ್ ।
ವ್ಯಾಪಿಸಿದ ಸುಮ[೨ ನಃ೩ಕ-]೨ ।
ಛಾಪಮಂ ಮುಸುಱಿ ಮುತ್ತಿದವಳಿಗಳು ॥
ಪೋಪುದುಂ ಮಾವಿನಮ್ಯ- ।
ತೋಪಮಫಲಂ ಮನ- ।
ಸ್ತಾಪದಿಂ ಮೂಗುವಟ್ಟವು ಕೋಗಿಲೆ ॥ ೧೪೧ ॥

ಮಿಸುಪ ನೇಱಲ ಪಣ್ಣು ।
ರಸವನೊಸೆದೀಂಟಿಯಾ- ।
ಱಿಸಿದವು ಸುಖಂ ಭೂತಜಾತಾರ್ಥಿಯಿಂ ॥
ಎಸೆವಂಜನಾದ್ರಿಗಳ್ ।
ಪಸರಿಸುತ್ತಿರ್ದವಾ- ।
ಗಸ೪ದೊಳಿ೪ನೆ ಕರಿಯ ಮುಗಿಲುಗಳೆದ್ದವು ॥ ೧೪೨ ॥

ವಿರಹಿಗಳಿಗೀರೌದ್ರ- ।
ತರವಾರಿ[೫ ಯಿಂ ] ಕಾಮ- ।
ನುರುಮುದ೬ದೆ [೭ ಪೊಡೆಯುತಿರ್ದಪ ]೭ನೆಂಬಿನಂ ॥
ಕರಿಯ ಮುಗಿಲೆಡೆಯೆಡೆಯೊ- ।
ಳಿರದೆ ಸಂಚರಿಸುತಂ ।
ಧರೆಗೆ ಭೀತಿಯನೊದವಿಸಿತ್ತು ಮಿಂಚು ॥ ೧೪೩ ॥

೧-೧ (ಕಖಗ) ತಂಮಲದು. ೨-೨ (ಕಖಗ) ನಕ. ೩ (ಗ) ಪ್ರೆ. ೪-೪ (ಗ) ದೊಳೆ. ೫ (ಕಖಗ) ಯುಂ ೬ (ಕಖ) ದಿ. ೭-೭ (ಕಖ) ಬೆದೆವುತಿರ್ದಪ; (ಗ) ಬೇಡಿಯುಣಿತಿರ್ದಪ.

ವಿರಹಿಗಳ ಮೇಲೆತ್ತಿ- ।
ಬರಲೆಂದು ಕಾಮನಾ- ।
[1]ದರದೆ[2] ಪೊಡೆಯಿಸಿದ ಭೇರಿಯ ತೆಱದೊಳು ॥
ಧರೆಯುಮಂ ಸಕಲದಿ[3]- ।
ಗ್ವರಮುಮಂ[3] ಗಗನಮಂ ।
[4]ಪರಿಚುಂಬಿಸಿತ್ತು[4] ಘುಡುಘುಡಿಪ ಮೊಳಗು ॥ ೧೪೪ ॥

ವಿಜಿಗೀಷು ಮನುಮಥನ ।
ವಿಜಯಗಜದುರು[[5]ವಣಿಯು][5] ।
[ರಜಮೆನೆ] ಕರಂ ಭಯಂಕರಮಾದುದು ॥
ತ್ರಿಜಗಕ್ಕೆ ಮಣಿಗಣ- ।
ವ್ರಜರುಚಿರಮಾದಂತೆ ।
[6]ನಿಜದಿಂದ[6] ನೆಗೆದಿಂದ್ರಚಾಪಲೇಖೆ ॥ ೧೪೫ ॥

ಪೊಡವಿಯೆಲ್ಲಮನಿನ್ನು ।
ಕೆಡೆ [[7]ಬೀಳಲಿಸುವೆ][7] ಯಾ- ।
[8]ರೆಡರುವವರೆನಗೆ[8] ಮೂಜಗದೊಳೆನುತಂ ॥
ಪಿಡಿದು ನಿಜ ಧನುವ ಜೇ[9]- ।
[10]ವೊಡೆದನಂಗಜನೆನಲು ।
ಘುಡುಘುಡಿಪ ಸಿಡಿಲು[11] ಭೀಕರಮಾದುದು ॥ ೧೪೬ ॥

ಸರಿಮಳೆಯ ಸೋನೆಯು- ।
ಬ್ಬರವೆನಿಪ ಪೆರ್ಮಳೆಯ ।
ಬರವಿಂಗೆ ನದನದಿತಟಾಕವಾಪಿ ॥
ಸರಸಿಜಾ[12]ಕರಶರಧಿ ।
ಬೆರಸಿದವು ಜಲಮಯಂ ।
ಧರಣಿಯಾಯ್ತೆನಿಸೆ ವರ್ಷಾಸಮಯವು ॥ ೧೪೭ ॥

---

೧ (ಕಖ) ಧ. ೨ (ಗ) ದಿ. ೩-೩ (ಕಖ) ದಿ। ಗ್ವಿವರಮಂ. ೪-೪ (ಗ) ಪರಿಚುಂಬಿಸುತ್ತ. ೫-೫ (ಕಖ) ಮಣಿಯೆ; (ಗ) ಮಣಿಯೋ. ೬-೬ (ಕಖ) ನಿಜದಿಂ ತೇದ. ೭-೭ (ಕಖ) ಬೀಳಿವೆಸುವೆ; (ಗ) ಬೀಳೆವೆಸುವೆ. ೮-೮ (ಗ) ಪೆರಡುವರೆನಗೆ. ೯ (ಗ) ಝೀ. ೧೦ (ಗ) ವ. ೧೧ (ಗ) ಲ. ೧೨ (ಕಖ) ಸ.

ಅಂತೆಸೆವ ಮಳೆಗಾಲ |
ಮಂ[1][ತಾವು][1] ಮೂವರುಂ |
ಸಂತಸದೆ ತತ್ಪುರದೊಳಗೆ ಮಾಡಲು ||
ಕಾಂತಮಾಗಿರ್ದ ಶರ- |
ದಂ ತೋಱಿ ಹೊನ್ನೆಯ ಲ- |
ತಾಂತದಿಂ ಪೊಂದಾವರೆಯ ಪೂಗಳಿಂ || ೧೪೮ ||

ಇರುಳು ಚಂದ್ರಿಕೆಯೊಳಗೆ |
ಭರದಿಂ ಚಕೋರಂಗ- |
ಳುರು ಮುದದೆ[2] ಸುೞಿವುತಿರ್ಪವಸರದೊಳು ||
[3][ವರತರದ][3] ಪೀಯೂಷ- |
ಶರಧಿಯೊಳೆ[4] ಮೀಂಗಳಂ[4]- |
ತಿರೆ ರಾ[5]ಜಿಸಿರ್ದವು ಶರನ್ಮುಖದೊಳು || ೧೪೯ ||

ಆ ಶರತ್ಕಾಲದೊಳ್ |
ಭೂಸುರಗುಣರ್ ಪೋಗ- |
ಲಾಸೆಗೆಯ್ದುಱಿಪೆ[6] ಕ್ರೀಡಾಪೂತಗೆ[7] ||
ಆ ಸಮಯದೊಳು ಯಶೋ- |
ವಾಸರವಿಯೋಗಕ್ಕೆ- |
ಯಾಸುರಂ ನೊಂದು ನಿಲಿಸಲು ಘಮ್ಮನೆ || ೧೫೦ ||

ರಾಮಂಗೆ ಮೌಕ್ತಿಕಸು- |
[8]ದಾಮಮನನ[ರ್ಘ[9]]ಮಂ |
ರಾಮಾನುಜಂಗೆ ಮಣಿಕುಂಡಲವನು ||
ರಾಮವಲ್ಲಭೆಗೆ ಚೂ- |
ಡಾಮಣಿಯುಮಂ ಕರಂ |
ಪ್ರೇಮವುಂ ಮಾಳ್ಪ ವೀಣಾರತ್ನಮಂ || ೧೫೧ ||

---

೧-೧ (ಕಖಗ) ತವ್ಮ. ೨ (ಗ) ದಿ. ೩-೩ (ಕಖಗ) ಶರನಿಧಿಯ. ಎರಡು ಸಾರೆ ಬರುವ ಕಾರಣ ತೆಗೆದು ಹಾಕಿದೆ. ೪-೪ (ಗ) ಮಿಗಳಿಂ. ೫ (ಕಖ) ವಿರಾ. ೬ (ಕಖ) ಪಿ. ೭ (ಗ) ಕೆ. ೮ (ಖ) ಧಾ. ೯ (ಕಖಗ) ಘ್ಯ.

ಉರುಮುದದಿ[೧]ನೋಽಲಗಿಸಿ[೨] |
ಕರಕಮಲಮಂ ಮುಗಿದು |
ಪಿರಿದು [[೩]ಬಿನ್ನಹದಿಂದೆ][೩] ಬಿನ್ನವಿಸಿದಂ ||
ಸ್ಮರಯಿಸುವುದೆನ್ನನನು- |
ವರದೊಳಿಂದಾತ ನಿಜ- |
ಪುರದ ಪೊರವೊಳಲಲ್ಲಿ ಬೀಳ್ಕೊಂಡನು || ೧೫೨ ||

ಬರೆ ಸರಸಿಜಾಕ್ಷನುಂ |
ಧರಣೀತನೂಜೆಯುಂ |
ಪುರವ ಪೊಱಮಟ್ಟು ಬಿಲ್ಲಂಬುಗೊಂಡು ||
ಪರಮಪಾವನಚರಿತ- |
ನುರುತರಗುಣಾನ್ವಿತಂ |
ಸರಸಕವಿಮುಖತಿಲಕನಿಂತೆಂದನು || ೧೫೩ ||

---

೧ (ಗ) ದೆ. ೨ (ಕಖ) ಸೆ. ೩-೩ (ಕಖ) ಬಿನ್ನಹದಿನೊಂದು; (ಗ) ಬಿನ್ನಹದೆನಂದು.

# ೭ನೆಯ ಸಂಧಿ.

ರಾಗ:— ಮಲಹರಿ. ಅಡ್ಡತಾಳ. ಕುಸುಮಷಟ್ಪದಿ.[೧]

ಭೂಚಕ್ರ ಪೊಗಟ್ವಿ*ನಂ |<br>
ಭೂಚರರ ಗೆಲಿದೆಯ್ದಿ |<br>
ಖೇಚರರ ಗೆಲಲೆಂದು ರಾಮನಿರ್ದಂ || ಪಲ್ಲವ ಪದ ||

ಶ್ರೀನಿಲಯನಚಲವಾಕ್- |<br>
ಶ್ರೀನಿಲಯನುರುಯಶಃ- |<br>
ಶ್ರೀನಿಲಯನಮಳಿನಕಳಾ[ನಿ]ಲಯನು ||<br>
ಭಾನುಕುಲತಿಲಕನ- |<br>
ತ್ಯಾನಂದದಿಂ ತಳರ್ದ*- |<br>
ನಾ ನಗರಮಂ ವಾದಿಗಿರಿವಜ್ರನು ||೧||

ಅಜಿತಬಲರನುಪಮ- |<br>
ನಿಜಭುಜ[ಸು]ವಿಜಯರಖಿ- |<br>
[ಳ[೨] ಜಗನ್ನುತ[೨]] ಮೂವರುಂ ಲೀಲೆಯಿಂ ||<br>
ಗಜಮೃಗಖಗಾನೇಕ- |<br>
ಕುಜಗಹನಮಂ ಕಳೆದು |<br>
ವಿಜಯಪುರದುಪವನಮನೆಯ್ದಿ ಬಂದು ||೨||

ಅಲ್ಲಿ ನೇಸರ್ಪಡಲು |<br>
ಮಲ್ಲಿಕಾಮಂಟಪದಿ- |<br>
ನು[೩]ಲ್ಲಸಿತಮಾದ[೩] ಕಂಕೆ[ಲ್ಲಿ[೪]]ಕುಜದ ||<br>
ಫುಲ್ಲತಲ್ಪದೊಳಿರಲು |<br>
ಸಲ್ಲಲಿತ ರಾಘವಂ |<br>
ವಲ್ಲಭೆವೆರಸು ರತಿಪತಿಯ ಲೀಲೆಯಿಂ ||೩||

---

೧ (ಕಖ) ಪ್ರತಿಗಳಲ್ಲಿ "ಶರಷಟ್ಪದಿ" ಯೆಂದಿದೆ. ಅದು ಪ್ರತಿಮಾಡುವವರ ದೋಷವಿರಬಹುದು. (ಗ) ಪ್ರತಿಯಲ್ಲಿ ಷಟ್ಪದಿಯ ಹೆಸರು ಹೇಳಿಲ್ಲ. ೨-೨ (ಕಖಗ) ಳರ್ಜಗನ್ನುತರು. ೩-೩ (ಕಖ) ನುಳ್ಳ ಶೀತಳಮಾದ. ೪ (ಕಖಗ) ಲ್ಲೆ.

ಬಳಯುತಂ ಲಕ್ಷ್ಮಣಂ ।
ತೊಳಲುತಿರೆ ವನದೊಳಗೆ ।
ನಳನಳಿಸಿ ಬೆಳೆದ ಕದಳಿ[ಯ]ಯೆಡೆಯೊಳು ॥
ಒಳಗೆ ವನಲಕ್ಷ್ಮಿಯೆನೆ ।
ಲಲಿತತನುವಾಗಲೊ- ।
ರ್ವಳೆ ಬರುತ್ತಿರ್ದಳವನೀಶತನುಜೆ ॥ ೪ ॥

ಈಕೆಯಿಂದ್ರಾಣಿಯೋ ।
ಈಕೆ ರೋಹಿಣಿಯೊ ಮೇ- ।
ಣೀಕೆಯೀನಂದನದ ವನಲಕ್ಷ್ಮಿಯೋ ॥
ಈಕೆ ವಿದ್ಯಾಧರಿಯೊ ।
ಈಕೆ ಸುರಕಾಮಿನಿಯೊ ।
ಈಕೆ ಯೊ¹ರೆಂದು¹ ಲಕ್ಷ್ಮಣ ನೋಡಿದಂ ॥ ೫ ॥

ಏಳಿಸುತ್ತಿರೆ ಗತಿವು- ।
ರಾಳಿಕಾಲೀಲೆಯಂ ।
ಸೋಲಿಸೆ² ಮೊಗಂ ಶರಚ್ಚಂದ್ರರುಚಿಯಂ³ ॥
ಸಾಲಿಡೆ ಮನೋಜಶರ- ।
ಮಾಲೆಯಂ ನಯನಾಂಶು- ।
ಮಾಲೆಯೊರ್ವಳೆ ಬರುತ್ತಿರಲು ಕಂಡು ॥ ೬ ॥

ಅಂತಾಲತಾಂಗಿ ಬರೆ ।
ತಾಂ ತಮೊ⁴ಳದ⁴ ಮಱು⁵ಗೆ ।
ಸಂತಸದೆ ಸಾರ್ದು ಲಕ್ಷ್ಮಣಕುಮಾರಂ ॥
ಕಂತುಸರಲಿಂಗಾಗ- ।
ಳಂತೆ ಗುಱಿಯಾಗಿ ಸಂ- ।
ಭ್ರಾಂತಚಿತ್ತಂ ಪಡೆದು ನೋಡುತಿರ್ದಂ ॥ ೭ ॥

---

೧-೧ (ಕಖ) ಯಾರೆನುತ. ೨ (ಗ) ಗೆ. ೩ (ಗ) ಯಿಂ. ೪-೪ (ಗ) ದಳಂ. ೫ (ಗ) ಱು.

ಆಕುಮಾರಿಯುಮಾಗ- |
ಳಾಕರ್ಣವಿಶ್ರಾಂತ- |
ಕೇಕರದ್ಯುತಿ ಬೇಗದಿಂದ ಪೋಗಿ ॥
ಭೀಕರವೆನಿಪ ವಟಾ-|
ನೋಕಹಮ[1][ನೆಯ್ದುಲತಿ][1] |
ಶೋಕಾಕುಲತೆಯಿಂದಮೆಯ್ದುತಿರಲು ॥ ೮ ॥

ರಾಜಪುತ್ರಿಯ ಕಾಲ |
ರಾಜಿಸುವ ನೇವುರಕೆ |
ರಾಜಹಂಸಂ ಸೋಲ್ತು ಪೋಪಂದದಿಂ ॥
ರಾಜೀವನೇತ್ರನಂ- |
ದೋಜೆ[ಯಿಂ][2] ಪೋಗಿ ವಟ- |
ಭೂಜಮಂ ಮಱಿಗೊಂಡ ಲಕ್ಷ್ಮಣಂಗೆ ॥ ೯ ॥

ಎನೆ ಲಕ್ಷ್ಮಣಂ ಕೇಳ್ದು |
ಜನಿತಕೌತುಕವಿದೇ- |
ನನಱಿಪಿ[ಯೆ] ಪೇಟ್ದಿಪಳಿದೇನನೆಂದು ||
ವನಿತೆಯೆತ್ತಿರುಳೆತ್ತ |
ವನವೆತ್ತ ಲಕ್ಷಣ- |
ಧ್ವನಿಯೆತ್ತ[3][ಮೆನುತವಂ][3] ನೋಡುತಿರಲು ॥ ೧೦ ॥

ಇಂತೆಂದಳೀಪುರದ |
ಕಾಂತಪೃಥ್ವೀಧರನ |
ಕಾಂತೆಯಿಂದ್ರಾಣಿಯಾಸತಿಯ ತನುಜೆ ॥
[4]ಭ್ರಾಂತೇನೊ[4] ನಾನೆನ್ನ |
ಸಂತಸದೆ[5] ಸಾಕೇತ- |
ಕಾಂತದಶರಥನ ಸುತ ಲಕ್ಷ್ಮಣಂಗೆ ॥ ೧೧ ॥

---

೧-೧ ( ಕಖಗ ) ನೆಯ್ದುಯತಿ. ೨ ( ಕಖಗ ) ಯಿಂ. ೩-೩ ( ಕಗಖ ) ಮೆನುತ. ೪-೪ ( ಗ ) ಭ್ರಾಂತನೋ. ೫ ( ಗ ) ದಿ.

ಭರದೆ ಮದುವೆಯ ಮಾಡ- |
ಲಿರೆ ದಶರಥಂ ತಪವ |
ಧರಿಸಿದಂ ತಮ್ಮ ತಂದೆಯ ನನ್ನಿಗೆ ||
ಭರತಂಗೆ ಸಾಮ್ರಾಜ್ಯ- |
ಭರವನಿತ್ತವನಿಸುತೆ- |
ವೆರಸಡವಿ ಪುಗಲು ರಾಮಲಕ್ಷ್ಮಣರು || ೧೨ ||

ಭರದಿಂದ ಕೇಳ್ದಿಂದ್ರ- |
ಪುರದ ಸೌಂದರನೃಪಂ |
ಗಿರದೆನ್ನನೀಯಲಿರ್ದುದನಱಿದು [ನಾಂ] ||
[ಪಿರಿದುಮ್ಮಳಿಸಿ] ನೆವದೆ |
ಸುರಭಿಶರನಂ ನೋನ- |
ಲುರುವಿಭವದಿಂದಿಂದು ವನಕೆ ಬಂದೆಂ || ೧೩ ||

ಕತಿಪಯ ಸಖೀಜನಾ- |
ವೃತೆಯಾಗಿ ಬಂದಿಂದು |
ರತಿಪತಿಯ ನೋಂತು ಜಾಗರವನಿರ್ದು ||
ಮತಿಯ ಮಱೆದೊಱಗಿ ಸಖಿ- |
ತತಿಯಿರಲು ಬಂದೆನಾ- |
ನತಿ ಭರದೆ ನಟ್ಟಿರುಳೊಳೀತಾವಿಗೆ || ೧೪ ||

ಈವಟವಿಟಪಿಯ ಕೆಳ-
ಗಾವರಿಸಿ ನೆಲಸಿರ್ದ |
ದೇವತೆಗಳೆಲ್ಲರುಂ ಕೇಳಿ ಮುದದಿಂ ||
ಈವನಕ್ಕೆ ಲಕ್ಷ್ಮಣ |
ದೇವನೇಟ್ತಂದಾಗ- |
ಳೀವಾರ್ತೆಯಂ ತಿಳಿಯೆ ಪೇೞಿ ನೀವು || ೧೫ ||

---

೧-೧ (ಕಖ) ಭಾರ. ೨-೨ (ಕಖಗ) ಪಿರಿದುವುಮ್ಮಳಿಸಿ. ೩ (ಗ) ಯಾ. ೪ (ಗ) ಪ. ೫ (ಕಖ) ಯ. ೬ (ಗ) ೞ.

ತರುಣಿ ವನಮಾಲೆ ನ- ।
ಟ್ಟಿರುಳು ಬಂದಿಲ್ಲಿಯು- ।
ತ್ತರಭವದೊಳಾದೊಡಂ ಲಕ್ಷ್ಮಣಂಗೆ ॥
ಅರಸಿಯಾದಪೆನೆಂದು ।
ಕೊರಳ ನೇಣಿಕ್ಕಿ ತಾಂ ।
ಮರಣವೆಯ್ದಿದಳೆಂದು ಮಱಿಯದೞಿಪಿ[೧] ॥ ೧೬ ॥

ಎಂದಾಮರದ ಬೀಳ- ।
ಲೊಂದಂ ತೆಗೆದು ಕೊರಳೊ- ।
ಳಂದಿಕ್ಕಿ ಸೇದಿಕೊಂಬವಸರದೊಳು ॥
ಬಂದು ಕೈವಿಡಿದು ನೀ- ।
ನೆಂದ ಲಕ್ಷ್ಮ[ಣ][೨] ನಾನೆ ।
ಬಂದೆನೆಂದೆಯ್ದಿ ತಳ್ಕೈಸಿಕೊಂಡಂ ॥ ೧೭ ॥

ಪರಿತಂದು ತಳ್ಕೈಸಿ ।
ಕೊರಳಪಾಶವ ತೆಗೆದು ।
ಕರಕಮಳದಿಂ [೩]ಕಣ್ಣ ನೀರ[೩]ನೊರಸಿ ॥
ಧರಿಸಿ ಕೌತುಕಹರ್ಷ-
ಭರಜನಿತ [೪]ಪುಳಕಮಂ ।
[೫]ಸರಸಿಜಾಕ್ಷಿಯ ಕಯ್ಯ ಪಿಡಿದುಕೊಂಡು ॥ ೧೮ ॥

ಕೋಮಳೆಯನೊಡಗೊಂಡು ।
ತಾಮರಸಲೋಚನಂ ।
ರಾಮನಂ ಜಾನಕಿಯುಮಂ ಕಾಣಿಸೆ ॥
ಆ ಮಾನಿನೀರತ್ನ- ।
ವಾ ಮಹಾಮಹಿಮರ್ಗೆ ।
ಪ್ರೇಮದಿಂ ವಿನಯವಿನಮಿತೆಯಾದಳು ॥ ೧೯ ॥

---

೧ (ಗ) ಸಿ. ೨ (ಕಖಗ) ಣಂ. ೩-೩ (ಕಖ) ಕಣ್ಣೀರ. ೪ (ಕಖ) ಲ. ೫ ಈ ಪದದ ಹಿಂದೆ (ಕಖಗ) ಪ್ರತಿಗಳಲ್ಲಿ " ತಳೆದು ಎಂಬ ಪದವಿದೆ. ಆದರಿಂದ ಪ್ರಾಸಭಂಗ ಆರ್ಥಾವೃತ್ತಿಯಾಗುತ್ತಿರುವುದರಿಂದ ಮತ್ತು ಗಣಭಂಗಛಂದೋಭಂಗಗಳಾಗುತ್ತಿರುವುದರಿಂದ ಅದನ್ನು ಬಿಡಬೇಕಾಯಿತು.

ಅವರ್ಗಿ*ದೆಲ್ಲವನಱಿಪೆ ।
ಸವಿನಯಂ ಮುದದಿ[೧] ಕೇ- ।
ಶವನಿತ್ತ ಮತ್ತಾಕೆಯಾಪ್ತಜನವು ॥
ಕುವಲಯಾಕ್ಷಿಯನಱಸ- ।
ಲವರವರ್ತಮತಮುಗೆ- ।
[ ಯಿವರನಾವನವ ನೋಡುತ ] ಕಂಡರು ॥ ೨೦ ॥

ಬಂದವರ್ಬಲಕೃಷ್ಣ- ।
ರೆಂದವಪ್ಪೋರ್ಗಿ ಭರ- ।
ದಿಂದ ಪೃಥ್ವೀಧರಂಗ[೨]ಱಿ[೩]ಪಲೊಡನೆ ॥
ಅಂದಾತನತಿಹರುಷ- ।
ದಿಂದ ಬಂದೆಱಗಿಯಾ- ।
ನಂದದಿಂ ನಿಜನಗರಿಯಂ ಪೊಗಿಸಿದಂ ॥ ೨೧ ॥

ರಾಮನುಂ ಸೀತೆಯುಂ ।
ತಾಮರಸನೇತ್ರನುಂ ।
ಪ್ರೇಮದಿಂದಾ ವಿಜಯಪುರವ ಪೊಕ್ಕು ॥
ರಾಮಣೀಯಕಯಶ- ।
ಭರ್ಮಹಿತರಖಿಲಸುಖ- ।
ಧಾಮರಿರೆ ಮತ್ತೊಂದು ಶುಭದಿನದೊಳು ॥ ೨೨ ॥

ಭರದೆ ವನಮಾಲೆಗಂ ।
ಸರಸಿಜಾಕ್ಷಂಗಿರದೆ ।
ಪರಿಣಯನಮಂ ಮಾಡಿ ಸುಖದಿನಿರಲು ॥
ಚರನೊರ್ವನತಿವೀರ್ಯ ।
ಧರಣಿಪತಿ ಕಳಿಪೆ ಚ- ।
ಚ್ಚರ ಬಂದು ಪೃಥ್ವೀಧರ[ನ][೪] ಕಂಡನು ॥ ೨೩ ॥

---

೧ (ಗ) ದೆ. ೨-೨ (ಕಖಗ) ಯಾವನವ ನೋಡುತಿವರಂ. ಪ್ರಥಮಾಕ್ಷರವು ಗುರುವಾಗುವ ದರಿಂದ ತಿದ್ದಬೇಕಾಯಿತು. ೩-೩ (ಗ) ಗೆಱಗ. ೪ (ಕಖಗ) ನಂ.

ನಿರುಪಮಬಲಾಚ್ಯುತರ- ।
ಚರಣನಿಕಟದೊಳಿರ್ದ- ।
ಧರಣಿಪತಿ ಪೃಥ್ವೀಧರಂಗಾಗಳು ॥
ಚರನೆಂದನಿಂತೆಂದು ।
ಭರತನಂ ಗೆಲಲೆಂದು ।
ಭರ[೧]ದಿನತಿವೀರ್ಯನೃಪನೆತ್ತಲಿರ್ದಂ ॥ ೨೪ ॥

ಧರೆಯ ಭೂಪರನೆಯ್ದೆ ।
ಬರಿಸಿ ನಿಮ್ಮಲ್ಲಿಗಾ- ।
ದರದೆ ಕ[೨]ಳುಹಿದನೆನ್ನನದು[೨]ಕಾರಣಂ ॥
ಇರದೆ ಬಹುದೀಗಳಿಂ- ।
ತರವರಿಸದೆಂಬುದುಂ[೩] ।
ಸರಸಿಜಾಕ್ಷಂ ನಗುತ್ತಿಂತೆಂದನು ॥ ೨೫ ॥

ಅರಿನೃಪಂ ಬರ್ಪುದಂ ।
ಭರತನಱಿದನೆಯೆನಲು ।
ಚರನೆಂದನಾಗಳತಿವಿನಯದಿಂದ ॥
ಚರರ ಕಳುಹಿದಡವಱ ।
ಪರಿಭವಿಸಿ ತಗುಳ್ದ*ಮ್ಮ ।
ಪುರಕೆತ್ತಿ ಬರುತಿರ್ದಪಂ ಕೋಪದಿಂ[೪] ॥ ೨೬ ॥

ಚರಣಕೆಱಗುವುದೆಂದು ।
ನರರ ಕಳುಹಿದಡವಱ ।
ಪರಿಭವಿಸಿ ತಗುಳ್ದ*ನೆಂಬೀ ಕೋಪದಿಂ ॥
ಧರೆಯ ಭೂಪರನೆಯ್ದೆ ।
ತರಿಸಿಯತಿವೀರ್ಯಭೂ- ।
ವರನೆತ್ತಿ ನಡೆಯ[೫]ಲುದ್ಯುಕ್ತನಾದಂ[೫] ॥ ೨೭ ॥

---

೧ (ಗ) ದೆ. ೨-೨ (ಗ) ಕಳುಹಿದನದು. ೩ (ಗ) ದಂ. ೪ (ಕಖ) ದೆ. ೫-೫ (ಗ) ಲು ನಾದಂ.

ಧರೆ ನೆಱೆಯದತಿವೀರ್ಯ- |
ಧರಣಿಪಾಲಕನ ಗಜ- |
ತುರಗರಥಭಟ[೧]ಚಮೂಚಕ್ರಬಲಕೆ[೧] ||
ಭರತನಂ ಗೆಲುವುದೊಂ- |
ದರಿ[೨]ದಲ್ಲ ಸಂಗರದೊ- |
ಳೊರಸಿ ಮುಕ್ಕುವನೆಮ್ಮ ನೃಪನೆಂಬುದು[೩]ಂ || ೨೮ ||

ಇರದೆ ಸಮುಚಿತವಚ[೪]ಃ |
ಪರಿತೋಷಮಂ ಮಾಡಿ |
ಚರನ ಬೀಳ್ಕೊಟ್ಟು ಪೃಥ್ವೀಧರನೃಪಂ ||
ಭರದೆ ಲಕ್ಷ್ಮೀಧರಂ- |
ಗುರುಮುದದಿ[೫]ನೆಂದನಾಂ |
ಪರಿಹರಿಸುವೆಂ ಕಾದಲೀಯೆ[೬]ನವರಂ || ೨೯ ||

ದರಹಸಿತವದನಸರ- |
ಸಿರುಹನಾಗಿಯೆ ಕೃಷ್ಣ- |
ನಿರವೇ[ಟ್ದು[೭]] ಪೃಥ್ವೀಧರನ[ನ[೮]]ಲ್ಲಿಯೆ ||
ತರವೇಟ್ದು ರಥವ ಮೂ- |
ವರುಮೇಱಿ ಮುನ್ನಿನಂ- |
ತಿರೆ ವಿಜಯಪುರದಿಂದ ಪೊಱಮಟ್ಟರು || ೩೦ ||

ಅಂತು ಮೂವರುಮೇಱಿ[೯] |
ಸಂತಸದೆ ರಥವನ- |
ಲ್ಲಿಂ ತಳರ್ದು* ಜನಕಸುತೆ ಬಲಾಚ್ಯುತರು[ಗಳ್] ||
ಪಿಂತಿಕ್ಕಿ ವಿಜಯಪುರ- |
ಮಂ ತಡೆಯದೆಯ್ದಿದ- |
ರ್ಮುಂ[೧೦]ತೆ ನಂದ್ಯಾವರ್ತಪುರವ[[೧೧]ರವನು[೧೧]] || ೩೧ ||

---

೧-೧ (ಗ) ಚತುರಂಗ ಮೂಚಕ್ರ ಬಲಕೆ. ೨ (ಗ) ತ. ೩ (ಗ) ದು. ೪ (ಗ) ಚ. ೫ (ಗ) ದೆ. ೬ (ಗ) ಯ. ೭ (ಕಖಗ) ಳ್ಕ್ಕು. ೮ (ಕಖ) ನಿ. ೯ (ಗ) ಱಿ. ೧೦ (ಕಖ) ದೆ. ೧೧-೧೧ (ಕಖಗ) ರಾಮಂ.

ಪುರದ ಚೈತ್ಯಾಲಯದೊ- |
ಳಿರೆ ರಾಮನುಂ ಸೀತೆ- |
[೧]ಯಿರದೆ[೧] ಲಕ್ಷ್ಮಣನಣ್ಣನನುಮತದೊಳು ||
ಭರದಿಂದ ಪೋಗಿ ಚ- |
ಚ್ಚರಮಾಗಳತಿವೀರ್ಯ- |
ನರಮನೆಯ ದಾರವಟ್ಟವನೆಯ್ದಿದಂ || ೩೨ ||

ಅರಮನೆಯ ಪೊಕ್ಕು ಚ- |
[೨]ಚ್ಚರಮವಂಗೆ[೨]ಱಗ[೩][ದೆಯೆ][೩] |
ವರವಜ್ರಶೈಲದಂತಿರ್ದಂದನು ||
ಭರತಭೂಪತಿಯೆತ್ತಿ |
ಬರುತಿರ್ದಪಂ ಬಂದು |
ಶರಣೆಂ[೪]ದೆಱಗು ನೀಂ[೪] ಬರ್ದುಕಬಲ್ಲಡೆ || ೩೩ ||

ಅಳಿಗಂಡುತನವನೆ- |
ಯ್ದುಱಿದು ಭರತೇಶ್ವರನ |
[೫]ಚರಣ[೫]ನಳಿನಕ್ಕೆಱಗು ಬಂದೀಗಳೆ ||
ಬಳಸಿಕೊಂಡಿರ್ದವಱ |
ಬಲವ ನೀ ನಚ್ಚದಿರು |
ಪಲವು ಮೀಂಬುಳು ರವಿಗಿದಿರ್ಚಿದಪುವೆ || ೩೪ ||

ಪಿಡಿದ ಕೂರಸಿಯಿಂದ |
ಜಡಿದು ಲಕ್ಷ್ಮೀಧರನ |
ಹೊಡೆಯಲೆಂದತಿವೀರ್ಯನನುಗೆಯ್ಯಲು[೬] ||
ತಡೆಯದಾಗಳೆ ಕಯ್ಯ |
ಪಿಡಿದೊ[೭]ತ್ತಿ [೮][ಬಾಯ್ಬಾಯಿ][೮] |
ಹೊಡೆದು ಹೆಡಗುಡಿಯ ಕಟ್ಟಿದನಾತನಂ || ೩೫ ||

---

೧-೧ ( ಗ ) ಯಿರೆ. ೨-೨ ( ಗ ) ಚ್ಚರವಂಗೆ. ೩-೩ ( ಕಖಗ ) ದಿರೆ. ೪-೪ ( ಗ ) ದೆಱಗುವಿನಿಂ. ೫-೫ ( ಕಖ ) ಚಳನ. ‘ ರಕಾರ ’ ‘ ಳಕಾರ ’ ಪ್ರಾಸವು ಪಂಪಭಾರತದಲ್ಲಿದೆ. ೬-೪೨; ‘ ರಕಾರ ’ ‘ ಲಕಾರ ’ ಪ್ರಾಸವು ಈ ರಾಮಾಯಣದ ೬-೧೩೫, ೭-೪೦ ಪದ್ಯಗಳಲ್ಲಿದೆ. ೬ ( ಗ ) ನು. ೭ ( ಗ ) ದೆ. ೮-೮ ( ಕಖ ) ಬಾಯಿಬಾಯಿ; ( ಗ ) ಬಾಯಿಪಾಯ.

ಬಳಸಿರ್ದ ಭೂಪರಳ- |
ವಱಿದು ಕಳವಳಿಸಿಯಾ- |
ಗಳೆ ತೆರಳ್ದೋಡೆ [೧]ಬೆಳ್ಳಿರಳೆಗಳೆನೆ ||
ಜಲಜಾಕ್ಷನಾತನಂ |
ಬಲದೇವನಲ್ಲಿಗಿರ- |
ದೆಱೆದು ತಂದಂ ತೊತ್ತ ತಪ್ಪಂದದಿಂ || ೩೬ ||

ಕಂಡು ಜಾನಕಿಯುಮಂ |
ಗಂಡುಗಲಿ ಬಲನುಮಂ |
ಚಂಡಕೋದಂಡ[೨]ದ್ವಯಂಗಳ[೨]ನುಮಂ ||
ಪುಂಡರೀಕಾಕ್ಷನಂ |
ಚಂಡಕರಕುಲದೊಳ್ಪು- |
ಚಂಡಬಲ[೩]ಕೃಷ್ಣರೆಂದಱಿ[೩]ದನಾತಂ || ೩೭ ||

ಅತಿವೀರ್ಯನಾಗಳೇ |
ಹತವೀರ್ಯನಾಗಿ ಪದ- |
ಶತಪತ್ರಯುಗಳಕ್ಕೆ ಬಂದೆಱಗಲು ||
ವಿತರಿಸಿದ ವಿನಯಮುಂ |
ವಿತರಣಯುತಂ ರಾಮ- |
ನತಿಮುದದೆ ಮೆಚ್ಚಿದಂ ಲಕ್ಷ್ಮಣಂಗೆ || ೩೮ ||

ಭರತಂಗೆ ಬೆಸಕೆಯ್ದು |
ಪುರದೊಳಗೆ ಮುನ್ನಿನಂ- |
ತಿರೆ ಸುಖದಿನಿರ್ಪುದೆಂದಭಯವೀಯೆ ||
ಕರಯುಗಂಗಳ ಮುಗಿದು |
ಚರಣಯುಗಳಕ್ಕೆಱಗಿ |
[೪]ಭರದಿನ[೪]ತಿವೀರ್ಯ ಬಿನ್ನವಿಸುತಿರ್ದಂ || ೩೯ ||

---

೧ (ಖ) ೪; (ಗ) ೪. ೨-೨ (ಗ) ದ್ವಯಗಳ. ೩-೩ (ಕಖ) ಕೃಷ್ಣರೆಱಿತ. ೪-೪ (ಗ) ಭರತನತಿ.

ಇರಲಾಸೆ ಬಿ[೧]ಟ್ಟುದೀ[೧]- |
ಪುರದ ದೆ[೨]ಸೆ ಬಿಟ್ಟುದಾ[೨]- |
ದರದೆ ಮಾಡುವೆನಾಂ ತಪೋರಾಜ್ಯಮಂ ||
ಎಱೆವುದೀರಾಜ್ಯಮಂ |
ಕರುಣಮುಳ್ಳವರ್ಗೆ[*]ಂದು |
ಬಲ[೩]ನಮುಚ್ಯುತನ ಬೀಳ್ಕೊಂಡು ಪೋದಂ ॥ ೪೦ ॥

ಇತ್ತಲಾತನ ಸುತಂ- |
ಗಿತ್ತು ವಿಜಯರಥಂಗು- |
ದಾತ್ತಚಿತ್ತಂ ಸಕಲಸಾಮ್ರಾಜ್ಯಮಂ ||
ಉತ್ತಮಯಶಂ ದಿಶಾ- |
ಭಿತ್ತಿಯಂ ಧವಳಿಸಲು |
ಮುತ್ತುಱಿದ ನೃಪರಿ[೪]ಗಭಯವನೆ ಕೊಟ್ಟಂ || ೪೧ ||

ಚತುರಂಗಬಲಸಹಿತ- |
[೫][ಮು]ತಿವೀರ್ಯನೊಳ್ಕೂಡಿ- |
ಯತುಲಬಲಭರತನೊಳ್ಕಾದಲಿರ್ದ ||
ಕ್ಷಿತಿಪತಿಗಳೆಲ್ಲರುಂ |
ನತರಾಗೆ[೬] ಬಂದು ರಘು- |
ಪತಿಯವರ್ಗಂ ಮುದದಿನಭಯವಿತ್ತಂ ॥ ೪೨ ॥

ಭರದಿಂದ ವರವಜ್ರ- |
ಧರವೀರ್ಯ-ಭದ್ರಕೇ- |
ಸರಿ[೭]-ನಂದನಾ[೭]ರಾತಿವೀರ್ಯರೆಂಬ ॥
[೮]ಧರಣ-ಲಂಬೋದರೋ- |
ಷ್ಠ[೮]ರ-ಮಾರಿದತ್ತನೆಂ- |
ಬರಸುಗಳ್ಬಂದೆಱಗಿ ಬೀಳ್ಕೊಂಡರು ॥ ೪೩ ॥

---

೧-೧ (ಗ) ಬಿಟ್ಟಡಿ. ೨-೨ (ಗ) ದೆ ಬಿಟ್ಟುದಾ-। ೩ 'ರಕಾರ ಲಕಾರ ಳಕಾರ' ಪ್ರಾಸವು ಇದೇ ಸಂಧಿಯ ೩೪ನೆಯ ಪದದಲ್ಲಿದೆ. ೪ ಗ) ತಿ. ೫ (ಕಖ) ಅ; (ಗ) ನ. ೬ (ಗ) ಗಿ. ೭-೭ (ಕಖ) ನಲಘು ವಿಕ್ರಮನತಿ. "ಆರಾತಿ" ಪದಕ್ಕೆ ಪ್ರತಿಯಾಗಿ ಪಂಪರಾಮಾಯಣದಲ್ಲಿ "ಅನಾರ್ಯ" ಎಂಬ ಪದವಿದೆ. ೮-೩೦ವ. ೮-೮ ಪಂಪರಾಮಾಯಣದಲ್ಲ 'ಲಂಬೋಷ್ಠ, ಪ್ರೋಷ್ಠಿಲ' ಎಂಬ ಪದಗಳಿವೆ. ೮-೩೦ ವ.

ಅತಿವೀರ್ಯನಾತ್ಮಭವೆ |
ರತಿಮಾಲೆಗಂ ಜಗ- |
ನ್ನುತಲಕ್ಷ್ಮಣಂಗಮಾಪುರವರದೊಳು ||
ವಿತತಮಾಗಲ್ಪಟಹ |
ರುತಿಯೆಸೆಯೆ ಪರಿಣಯನ- |
ಮತಿವಿಭವದಿಂದಾಗೆ ಸುಖದಿನಿರ್ದಂ || ೪೪ ||

ನಿಲ್ಲದೆ ಬಲಾಚ್ಯುತರು |
ಬಿಲ್ಲಂಬುಗಳ ಕೊಂಡು |
ಸಲ್ಲಲಿತ ವೈದೇಹಿವೆರಸು ಮುದದಿಂ ||
ಅಲ್ಲಿಂ[ದ] ತಳ*ರ್ದು [[೧]ತಾ- |
ವೆಲ್ಲರುಂ[೧]] ಪುಗುತಂದ- |
[೨]ರುಲ್ಲಸ[ತ್]ಕ್ಷೇಮಾಂ[೨]ಜಲೀ[೩]ಪುರ[ವನು][೩] || ೪೫ ||

[[೪]ಅಂದು[೪]] ನಗರದೊಳು, ಶ- |
ತ್ರುಂದಮನೃಪಾಲಕನ |
ಸೌಂದರಿಗೆ ಕನಕಾಭೆಯೆಂಬವಳಿಗೆ ||
ನಂದನೆ [[೫]ವಿರಾಜಿಪ-[೫]] |
ಳ್ಕಂದರ್ಪಚಾಪಲತೆ |
ಯಂದದಿಂ ಜಿತಪದ್ಮೆಯೆಂದು [[೬]ಪೇಳ್ದು[೬]] || ೪೬ ||

ತರುಣಿ ಪುಟ್ಟಿದ ದಿನಂ |
ವರಶಸ್ತ್ರಶಾಲೆಯೊಳು |
ಧರೆ ಹೊಗಟಲುದಯಿಸಿತು ಶಕ್ತ್ಯಾಯುಧಂ ||
ಭರದಿನದಱಿಂದಿಡಲ- |
ದಿರದೆ ಪಿಡಿದಾತನೆಯೆ |
ವರನಾಕೆಗೆನೆ ಕೇಳ್ದು ಲಕ್ಷ್ಮೀಧರಂ || ೪೭ ||

---

೧-೧ (ಕಖಗ) ತವೆಲ್ಲರುಂ. ೨-೨ (ಕಖ) ರುಲ್ಲಸ ತ್ಕ್ಷೈಮಾ; (ಗ) ರುಲ್ಲಸಕ್ಷೇಮಾ. ೩-೩ (ಕಖಗ) ಪುರಮುಮಂ. ಈ ಪಾಠದಲ್ಲಿ ಔಚಿತ್ಯವಿಲ್ಲ. ೪-೪ (ಕಖಗ) ಅಂತಾ. ೫-೫ (ಕಖಗ) ಯುದಯಿಸಿದ. ೬-೬ (ಕಖಗ) ಕೇಳ್ದು.

ಪುರದ ನಂದನದೊಳಂ- |
ದಿರೆ ರಾಮನುಂ ಸೀತೆ- |
ಯುಱುಮುದದೆ ಪೊಱಮಟ್ಟು ಲಕ್ಷ್ಮೀಧರಂ ||
ಅರಮನೆಯನೆಯ್ದಿ ಪೊ- |
ಕ್ಕಿರದೆ ಶಕ್ತಿಯ ತರಿಸಿ |
ಭರದಿನದ ಪಿಡಿದನಿಡೆ ಶತ್ರುಘ್ನದಮಂ || ೪೮ ||

ಅಱಿದು ಲಕ್ಷ್ಮೀಧರಂ- |
ಗೆಱಗಿ ಶತ್ರುಘ್ನದಮಂ |
ನೆಱೆ ತನ್ನ ಚತುರಂಗಸೇನೆಸಹಿತಂ ||
ಪೊಱಮಟ್ಟು ಬಂದು ನಾ- |
ಡೆಱೆಯ ರಾಮನ ಪದ- |
ಕ್ಕೆಱಗಿಯರಮನೆಗೆಯೊಡಗೊಂಡು ಪೋದಂ || ೪೯ ||

ವಂಶಸ್ಥಳೀಪುರದ |
ವಂಶಸ್ಥಳಾದ್ರಿಗಿನ- |
ವಂಶಾಧಿಪರ್ಮುನ್ನಿನಂತೆ ಬಂದು ||
ಸಂಶಯದೆ ತಮತಮಗೆ |
ಹಿಂಸಾತಿಭೀತಿಗೆ ಜ- |
ನಂ ಸೆಡೆದು ಕೂಡೆಯೋಡು[ತ್ತಿ]ರ್ದುದು || ೫೦ ||

ತಮತಮಗೆ ಸಂಭ್ರಮದಿ |
[ಸಮಯ] ನೋಡುತ್ತಿರಲು |
ಕಮನೀಯಮಹಿಮರಿಂತೆಂದರವರ್ಗೆ* ||
ನಿಮಗಿದೇಕಾರಣಂ |
ಸಮನಿಸಿತು ಭೀತಿಯೆನೆ |
ಕ್ರಮಕಮಲಕೆಱಗಿಯಂದೊರ್ವನೆಂದಂ || ೫೧ ||

---

೧ (ಗ) ಯ. ೨-೨ ಪ್ರಾಸಾಕ್ಷರವಿಷಯವಾಗಿ 'ಕನ್ನಡ ಕೈಪಿಡಿ' ಸಂಪುಟ ೧ ಪುಟ ೧೦೩ ನೋಡಿ. ೩ (ಕಖಗ) ತಿ. ೪-೪ (ಕಖ) ತ್ತಮಿರಲು.

ಇಂದಿಂಗೆ ಮೂಱುದಿನ ।
ಬಂದಲ್ಲಿಗಸುರವಡೆ- ।
ಯೊಂದಾಗಿ ನೆರೆದು ಗಿರಿವರದ ಮೇಲೆ ॥
ನಿಂದು ಗರ್ಜಿಸುವುದೇ- ।
ನೆಂದಱಿಯೆವದನಿಲ್ಲಿ ।
ನಿಂದು ಪೇೞ್ವಾಗ [೧ನಡುಗುವುದು೧] ದೇಹಂ ॥ ೫೨ ॥

ಇದ ವಿಚಾರಿಸುವೆವೆಂ- ।
ದದಿರದಾಗಿರಿಯೆ[೨]ನತಿ[೨] ।
ಮುದದೆ[೩] ಮೂವರುಮೇಱಿ ನೋೞ್ಪಾಗಳು ॥
ಮದರದನಿ-ಸಿಂಹ-ಶರ- ।
ಭದ ನೆರವಿಯುಂ ಭಯ- ।
ಪ್ರದಮೆನಿಪ ಶಾರ್ದೂಲಜಾಲವಿರಲು ॥ ೫೩ ॥

ಬಾಳುಬಟ್ಟಲು ರುಂಡ- ।
ಮಾಲೆಯು *ತ್ರಿಶೂಲ ಬಿ- ।
ಟ್ಟಾಲಿ ಡಮರುಗ ಕೊರಳ ಕರುಳಮಾಲೆ ॥
ಹಾಳೊಡಲು ಹಱಿದ ತಲೆ ।
ಕಾಳದಂಷ್ಟ್ರದೊಳೆ ಬೇ- ।
ತಾಳಜಾಲಂ ನೆರೆದು ಬರುತಿರ್ದುದು ॥ ೫೪ ॥

ಕಾಳರಾತ್ರಿಯ ತೆಱದಿ ।
ಕಾಳಿ ಕರಿ[೪]ಕಾಳಿ ಬೇ- ।
ತಾಳಿ[೫] ಚಂಡಾಳಿ ಚಾಮುಂಡಿ ಚಂಡಿ ॥
ಶೂಲಧಾರಿಣಿಯೆಂಬ ।
ಕಾಳೋರಗದ ಕೊರಳ- ।
ಮಾಲೆಯ ಪಿಶಾಚ-ಪರಿಕರವಿರ್ದುದು ॥ ೫೫ ॥

---

೧-೧ (ಕಖ) ನಡಿಗಿಹಿತು; (ಗ) ನಡಿಹಿತು. ೨-೨ (ಕ) ಯೆನುತೆ. ೩ (ಕಖ) ದಿ. ೪ (ಗ) ಂ. ೫ (ಕಖಗ)ಳ.

ಕೊಂಬು-ಡಮರುಗ-ಡೌಡೆ- |
ಸೆಂಬಕ-ಕಹಳೆ-ಢಕ್ಕೆ- ।
ಬೊಂಬುಳಿ-ಕರಡೆ-ಜಗ್ಗುಟಿ-ಜರ್ಝರಿಗಳಿಂ ||
ಕುಂಭಿ ಕುಕ್ಕಿ ಱಿದಾರ್ದ- |
ಳುಂಬಮಾಗಿರೆ ಗಿರಿಸಿ- |
ತಂಬದೊಳು ರಾಕ್ಷಸರು ನೆರೆದಿರ್ದರು || ೫೬ ||

ಕೆಲರು ಕೊಲುಕೊಲ್ಲೆನುತ |
ಕೆಲರು ಹೊಡೆಹೊಡೆಯೆನುತ |
ಕೆಲರು ತೆಗೆತೆಗೆ ಹಿಣಿಲುಗರುಳನೆನುತ ||
ಕೆಲರು ಕೆಡೆಕೆಡೆಯೆನುತ ।
ಕೆಲರು ತೊಲತೊಲಗೆನುತ- |
[ವು]ಲಿಯುತಿರ್ದುದು ಶಾಕಿನೀಸಂಕುಳಂ || ೫೭ ||

ಕತ್ತಲೆಯ ಮೊತ್ತದೊಳು ।
ಸುತ್ತಿ ಕಾಱ್ಕಿಚ್ಚು ಬರೆ |
ಸುತ್ತಿ ಗರ್ಜಿಸೆ ಭೂತವೇತಾಳರು ||
ಕಿತ್ತು ಕೂರಸಿವೆರಸು |
ಮುತ್ತೆ ದಾನವಕೋಟಿ- |
ಯೆತ್ತ ನೋಡ್ಪೊಡೆ ಭಯಂಕರಮಾಗಿರೆ || ೫೮ ||

ಬಿಲ್ಲನೇಱಿಸಿಕೊಂಡು |
ನಿಲ್ಲದೆ ಬಲಾಚ್ಯುತರು ।
ಸಲ್ಲಲಿತವೈದೇಹಿ ನಡುವೆ ಬರಲು ||
ಬಲ್ಲಾಳ್ಗಳೇಱಿದ- |
ರ್ಗಲ್ಲಣಿಸದಾಗಿರಿಯ- |
ನಲ್ಲಿ ಕಂಡರ್ದಿವ್ಯಮುನಿಪತಿಯನು || ೫೯ ||

---

೧-೧ (ಗ) ಜರ್ಝರರಿಗಳಿಂ. ೨ (ಗ) ರ್ದ್ದ. ೩ (ಕಖ) ಲು; (ಗ) ಯು. ೪-೪ (ಗ) ಹರೆ. ೫ (ಕಖ) ಸಿ. ೬ (ಗ) ಭೇ. ೭ (ಗ) ಡಂ. ೮ (ಕಖ) ಳಿ.

ಮುನಿಪತಿಯ ಯೋಗವುಂ ।
ದನುಜನೊರ್ವಂ ಜನ್ಮ- ।
ಜನಿತವೈರದೆ ಕೆಡಿಸಲೆಂದು ಬಂದು ॥
ಇನಿತು ವೈಕುರ್ವಣೆಯ ।
ಜನಿಯಿಸಿದನೆಂದು [೧ನಾ- ।
೧ವ]ನಿಬರುಂ ನೋಡುತಿರ್ಪವಸರದೊಳು ॥ ೬೦ ॥

[೨ಬಱಿಯು೨] ಕೆಂಡದ ಮಳೆಯ ।
ಕಱೆ೩ವುತಿರೆ ದಾನವರು ।
ಬಱಸಿಡಿಲ ಕಡುಪಿಂದ ಘುಡುಘುಡಿಸುತ ॥
ನೆಱೆ ಮುನಿಯ ಮೇಲೆ ಬಂ- ।
ದೆಱಗಿ ಕುಂಕುಮರಸದ ।
ತೆಱದಿ೪ ಶೀತಲವಾಗೆ ತೀವ್ರಾನಲಂ ॥ ೬೧ ॥

ಆಗಳಸುರನ ಕಂಡು ।
ಬೇಗದಿ ಬಲಾಚ್ಯುತರು ।
ಸಾಗರಾವರ್ತವಜ್ರಾವರ್ತಮುಂ ॥
ಬೇಗದಿಂದೇಱಿಸಿ ದಿ- ।
ಶಾಗಜಂ ಪೆಳಱಲಿಂ- ।
ಬಾಗಿ ಭರದಿಂ ನೀವಿ ೫ಜೇವೊಡೆದರು೫ ॥ ೬೨ ॥

ಕಡುಪಿಂದ ಬಿಲ್ಲ ಜೇ- ।
ವೊಡೆಯೆ ಬಲಕೇಶವ- ।
ರ್ಪೊಡವಿಯುದಿರ್ದಿತ್ತು ಫಣಿಪತಿಯುಳುಕಿದಂ ॥
ನಡುಗಿದಂ ಕಮಠಪತಿ ।
ಸೆಡೆದವು ೬ದಿ[ಶಾ]ಗಜಂ೬ ।
ಕಡಲು ಕದಡಿ೭ದವಸುರ೭ರಳವಱಿದರು ॥ ೬೩ ॥

೧-೧ (ಕಖಗ) ನಮ್ಮ. ೨-೨ (ಕಖ) ಧಱಿಯು; (ಗ) ಕಱಿಯು. ೩ (ಗ) ಯು. ೪ (ಗ) ದೆ. ೫-೫ (ಗ) ಝೋವಡೆದರು. ೬-೬ (ಕಖಗ) ದಿಗ್ಗಜಂ ೭-೭ (ಕಖ) ದಸುರ.

